# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...



ಚಿತ್ರಗಳು : ಶ್ರೀಹರಿ, ಸ್ಯಾಮ್, ರವಿಕುಮಾರ್ ಅಜ್ಜೀಪುರ, ರಾಮಚಂದ್ರ ಕೊಪ್ಪಲು

ಮುಖಚಿತ್ರ : ಆರೆಸ್ಸಾರ್

(ಹೈದರಾಬಾದಿನಲ್ಲಿರುವ ಆಂಧ್ರ ಸರ್ಕಾರದ ಜಾನಪದ ಲೋಕ ಶಿಲ್ಪರಾಮಮ್‌ನಲ್ಲಿರುವ ಲೋಹ ಕೃತಿ)

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜ. ವಿ. ತೇಜೋವತಿ

## ಈ ತಿಂಗಳು

ತಮ್ಮ ಸ್ವಂತದ ಮಾನ ಮುಚ್ಚಿಕೊಳ್ಳಲು ರಾಷ್ಟ್ರಧ್ವಜವನ್ನು ಬಳಸಿಕೊಳ್ಳಲು ಹೇಸದ ರಾಜಕಾರಣಿಗಳು ನಮ್ಮಲ್ಲಿದ್ದಾರೆಂಬುದೇ ಈ ತಿಂಗಳು ಪೂರ್ತಿ ದೊಡ್ಡ ಸಮಾಚಾರವಾಗಿ ಹೋಯಿತು. ಹಾಗೆ ಮಾಡಿದವರ ಮತ್ತು ಮಾಡುತ್ತಿರುವವರ ಪೂರ್ವಚರಿತ್ರೆಯನ್ನು ನೋಡಿದರೆ ಅದು ಸಮಾಚಾರವಾಗಿರಬೇಕಾಗಿರಲಿಲ್ಲ. ಅಂದು ಜಾರಿಗೊಳಿಸಲಾಗಿದ್ದ ನಿಯಮವನ್ನು ಉಲ್ಲಂಘಿಸಿ ಸಭೆ ನಡೆಸಿದ್ದು ಮತ್ತು ದೊಂಬಿ ಎಬ್ಬಿಸುವ ಯತ್ನ ನಡೆಸಿದ್ದು ಅಪರಾಧ ಸಂಹಿತೆಯಡಿ ಶಿಕ್ಷಾರ್ಹವೆಂದು ಆಪಾದನೆ ಇದ್ದರೆ, ಎಗ್ಗಿಲ್ಲದ ಅಬ್ಬರದ ಮೂಲಕ ಅದನ್ನು ರಾಷ್ಟ್ರಧ್ವಜವನ್ನು ಹಾರಿಸುವ ಪ್ರಸಂಗವೆಂದು ಚಿತ್ರಿಸುವುದು, ಕೆಲವು ಮಾಧ್ಯಮಗಳು ಅದಕ್ಕೆ ದನಿಗೂಡಿಸುವುದು ಮತ್ತು ಹಲವು ಜನ ಅದೊಂದು ಚಳುವಳಿಯೆಂಬಂತೆ ಸಂಭ್ರಮಿಸುವುದು ನಿಜಕ್ಕೂ ಹಾಸ್ಯಾಸ್ಪದವಾದ ವಿಷಯ. ಅಪಾಯಕಾರಿ ಪ್ರಭಾವದ ಸಾಧ್ಯತೆ ಏನೂ ಇಲ್ಲದಿದ್ದರೆ ಅದನ್ನು ಒಂದು ಕೀಳುಮಟ್ಟದ ಪ್ರಹಸನವೆಂದು ಮರೆತುಬಿಡಬಹುದಾಗಿತ್ತು. ಆದರೆ ಉಮಾಭಾರತಿಯವರು ವಿಜಯ ಧ್ವಜ ಹಾರಿಸಲು ಅಮೃತಸರಕ್ಕೆ ಯಾತ್ರೆ ಹೊರಟಿದ್ದಾರೆ. ಅವರ ಎಲ್ಲ ಯಾತ್ರೆಗಳಲ್ಲೂ ಇರುವಂತೆ ಈಗಲೂ ತೀಕ್ಷ್ಣವಾದ ಮಾತುಗಳು, ತರ್ಕವಿಲ್ಲದ ತೀರ್ಮಾನಗಳು, ಸ್ವೇಚ್ಛೆಯ ಬೈಗಳು, ಎಲ್ಲಾ ಇವೆ. ಮುರಲಿ ಮನೋಹರ ಜೋಶಿ ಭಾರತದ ಸೈನ್ಯದ ಬೆಂಗಾವಲಿನಲ್ಲಿ ಶ್ರೀನಗರಕ್ಕೆ ತೆರಳಿ ರಾಷ್ಟ್ರಧ್ವಜ ಹಾರಿಸಿದ್ದರು; ಈಕೆ ಜಲಿಯನ್‌ವಾಲಾ ಬಾಗ್‌ನ್ನು ಆರಿಸಿಕೊಂಡಿದ್ದಾರೆ. ಅವರ ಮೇಲಿದ್ದ ಆಪಾದನೆಗೂ ಅಮೃತಸರಕ್ಕೂ ಸಂಬಂಧ ಕಲ್ಪಿಸುವ ಪ್ರಮಾದ ಏಕೆ ಮಾಡಬೇಕಾಗಿದ್ದಿತೋ ತಿಳಿಯುವುದಿಲ್ಲ. ಒಟ್ಟಿನಲ್ಲಿ ಇನ್ನು ಮೇಲೆ ಅಪರಾಧವೆನಿಸಿಕೊಳ್ಳುವ ಆಪಾದನೆ ಹೊತ್ತವರೆಲ್ಲಾ ಬಾವುಟವನ್ನು ಎತ್ತಿ ಹಿಡಿದು ಸಂಪನ್ನರಾಗಬಹುದೇ ಎಂಬ ಪ್ರಶ್ನೆ ನಮ್ಮ ಮುಂದಿದೆ. ಮಾನ್ಯ ಕೃಷ್ಣ ಅವರ ಸರ್ಕಾರ ಉಮಾ ಮೇಲಿನ ಮೊಕದ್ದಮೆಯನ್ನು ಹಿಂತೆಗೆದುಕೊಂಡಿತ್ತು. ವಿಶ್ವ ಸುಂದರಿ ಸ್ಪರ್ಧೆಯ ಸಂದರ್ಭದಲ್ಲಿ ಪುರಸಭೆಯೆದುರು ಯಾವ ನಿಯಮವನ್ನೂ ಉಲ್ಲಂಘಿಸದೆ, ಕಾವ್ಯದ ಮುಖಾಂತರ ಪ್ರತಿಭಟನೆ ನಡೆಸುತ್ತಿದ್ದವರನ್ನು ದಸ್ತಗಿರಿ ಮಾಡಿ ಪಟೇಲ್ ಸರ್ಕಾರ ಆಪಾದನೆ ಹೊರಿಸಿ ಮೊಕದ್ದಮೆ ನಡೆಸಲಾರಂಭಿಸಿತು. ಇನ್ನೂ ವಿಚಾರಣೆ ಮುಗಿದಿಲ್ಲ. ಅದನ್ನು ಹಿಂತೆಗೆದುಕೊಳ್ಳಲು ಕೃಷ್ಣರಿಗೆ ಮನಸ್ಸು ಬರಲಿಲ್ಲವೆಂಬುದು ಸ್ವಾರಸ್ಯಕರವಾಗಿದೆ. ಉಮಾ ಅವರಂತೆ ಅವಾಂತರ ಮಾಡದಿದ್ದವರಿಗೆ ಮೋಕ್ಷವಿಲ್ಲವೆಂಬುದು ಅವರ ಗ್ರಹಿಕೆ ಇರಬೇಕು.

ಸಮಕಾಲೀನ ವ್ಯಂಗ್ಯಗಳಲ್ಲಿ ಜಾರ್ಜ್ ಫರ್ನಾಂಡೀಸ್‌ಗೆ ಮೇರುಸ್ಥಾನ. ಇತ್ತೀಚೆಗೆ ಬೆಂಗಳೂರಿಗೆ ಬಂದಿದ್ದ ಅವರು ಮತ್ತೆ ಅದಕ್ಕೆ ಸಮರ್ಥನೆ ಒದಗಿಸಿಕೊಂಡಿದ್ದಾರೆ. ವಿದೇಶಿ ಸರ್ಕಾರಗಳ ಹಾಗೂ ಹಣಕಾಸು ಸಂಸ್ಥೆಗಳ ಕಪ್ಪು ನೆರಳು ನಮ್ಮ ದೇಶದ ಮೇಲೆ ಹೆಚ್ಚಾಗಿ ಬೀಳುತ್ತಿದೆಯೆಂದೂ, ಅದರಿಂದ ದೇಶಕ್ಕೆ ಒಳಿತಾಗಲಾರದೆಂದೂ ಅವರಿಗೆ ಚಿಂತೆಯಾಗಿದೆಯಂತೆ. ಕೇಂದ್ರ ಸರ್ಕಾರ ಹೀಗೆ ನಮ್ಮ ಹಿತಕ್ಕೆ ಧಕ್ಕೆಯುಂಟುಮಾಡುತ್ತಿದ್ದರೂ ಎಡಪಕ್ಷಗಳು ಆ ಸರ್ಕಾರಕ್ಕೆ ಬೆಂಬಲ ಹಿಂತೆಗೆದುಕೊಳ್ಳದಿರುವುದು ಆ ಪಕ್ಷಗಳ ಅಪಕ್ವ ತಿಳುವಳಿಕೆ ಮತ್ತು ನಡತೆಯೆಂದು ಜಾರ್ಜ್ ಅವರ ಜ್ಞಾನೋದಯದ ನುಡಿಮುತ್ತು. ಶವಪೆಟ್ಟಿಗೆಗಳನ್ನು ವಿದೇಶದಿಂದ ಪ್ರಶ್ನಾರ್ಹ ವ್ಯವಹಾರದಲ್ಲಿ ತರಿಸಿದ್ದ ಜಾರ್ಜ್, ಅಮೆರಿಕಾ ಸೈನ್ಯದ ಬಣಗಳನ್ನು ಮೇಘಾಲಯದಲ್ಲಿ ಜಂಟಿ ಕವಾಯತುಗಳಿಗೆ ಕರೆಸಿದ್ದ ಜಾರ್ಜ್, ಅಮೆರಿಕಾದ ಆಧಿಪತ್ಯದಲ್ಲಿ ನಮ್ಮ ಆರ್ಥಿಕತೆಯನ್ನು ಪರಭಾರೆ ಮಾಡಲು ಅಡ್ಡಿಪಡಿಸದಿದ್ದ ಜಾರ್ಜ್, ಈಗ ಹೀಗೆ ಹೇಳುತ್ತಿರುವುದು ಅವರ ದೇಶಭಕ್ತಿಗೆ ಅತ್ಯುಗ್ರ ಸಾಕ್ಷಿಯಿರಬೇಕು. ಚಿದಂಬರಂ – ಅಹ್ಲುವಾಲಿಯಾ ಜಂಟೀ ನೇತೃತ್ವದಲ್ಲಿ ಕೇಂದ್ರ ಸರ್ಕಾರದ ಅರ್ಥನೀತಿಯು ಕ್ಷೇಮವಾಗಿರಲಾರದೆಂಬುದಕ್ಕೆ ಅವರಿಬ್ಬರೂ ಈಗಾಗಲೆ ಸಾಕಷ್ಟು ಪುರಾವೆ ಒದಗಿಸಿದ್ದಾರೆ. ಆರ್ಥಿಕ ವಹಿವಾಟುಗಳೆಲ್ಲಾ ತನ್ನ ಸ್ವಂತದ ಜಾಗಿರ್ದಿನ ವ್ಯವಹಾರವೆಂಬಂತೆ ಅಹ್ಲುವಾಲಿಯಾ ಭಾವಿಸಿರುವಂತಿದೆ. ಹೀಗಿರುವಾಗ ಇಂದಿನ ಕೇಂದ್ರ ಸರ್ಕಾರದ ನಿಲುವುಗಳಿಗೆಲ್ಲಾ ಬೆಂಬಲ ನೀಡುವುದು ಸರ್ವಥಾ ಸಾಧ್ಯವಾಗುವುದಿಲ್ಲ. ಅದು ಎಡ ಪಕ್ಷಗಳಿಗೆ ತಿಳಿಯದೆಂದು ಭಾವಿಸಲು ಜಾರ್ಜ್‌ಗೆ ಸ್ವಾತಂತ್ರ್ಯವುಂಟು, ಆದರೆ ಅವರ ಇಂದಿನ ಮಾತುಗಳು ಅವರ ನಿಲುವನ್ನು ಸೂಚಿಸುವುದಿಲ್ಲ. ಏಕೆಂದರೆ ಚಿದಂಬರಂಗಿಂತಲೂ ಘೋರತರ ನೀತಿಗಳನ್ನನುಸರಿಸಿದ ಯಶವಂತ-ಜಸವಂತರನ್ನು ಜಾರ್ಜ್ ಅಪ್ಪಿಕೊಂಡಿದ್ದರೆಂಬುದು ಸರ್ವವಿದಿತ.

ಈ ಮಧ್ಯೆ ನಮ್ಮ ಸಿ.ಇ.ಟಿ. ಗೊಂದಲ ಪರಿಹಾರವಾಗದೆ ವಿದ್ಯಾರ್ಥಿಗಳ ಅಸಹನೆ ತಾರಕಕ್ಕೇರಿದೆ. ನ್ಯಾಯಾಲಯ ಮತ್ತು ಜಾಲಪ್ಪ ಅವರನ್ನು ಹಿಂಡಿ ಹಿಪ್ಪೆ ಮಾಡಿಬಿಟ್ಟಿದ್ದಾರೆ. ನವಂಬರ್ ವೇಳೆಗಾದರೂ ಅವರಿಗೆ ಸುಸೂತ್ರವಾಗಿ ತರಗತಿಗಳು ಆರಂಭವಾಗಬಹುದೆ ? ಭಾರತದ ಶ್ರೇಷ್ಠ ನ್ಯಾಯಾಲಯವು ತನ್ನ ಶ್ರೇಷ್ಠತೆ ಉಳಿಸಿಕೊಂಡರೆ ಆಗಬಹುದೇನೋ !




ತಿಂಗಳ ಪತ್ರಿಕೆ

# ಹೊಸತು

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೬ ಸಂಚಿಕೆ - ೩ ಅಕ್ಟೋಬರ್ ೨೦೦೪

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೨ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೨೦೩೫೮೦ / ೮೧ / ೮೨
**e-mail : nkp@bgl.vsnl.net.in**
**website : www.navakarnatakabooks.com**


ಸಂಪಾದಕೀಯ

## ವಿಶ್ವಸಂಸ್ಥೆಗೆ ಸವಾಲು

'ಎಂಟು ವರ್ಷಕ್ಕೆ ನನ್ನ ಮಗ ದಂಟು' ಎಂಬುದಕ್ಕೆ ಅನ್ವರ್ಥವಾಗಿ ಕೋಫಿ ಅನ್ನನ್ ಇತ್ತೀಚೆಗೆ ಹೊಸತೇನನ್ನೋ ಸಂಶೋಧಿಸಿರುವಂತೆ ಒಂದು ಹೇಳಿಕೆ ನೀಡಿದ್ದಾರೆ. ಹದಿನೆಂಟು ತಿಂಗಳ ಹಿಂದೆ ಹೇಳಬೇಕಾಗಿದ್ದುದನ್ನು ಈಗ ಹೇಳಿ ತಮ್ಮ ಎಚ್ಚೆತ್ತ ಪ್ರಜ್ಞೆಯನ್ನು ಪ್ರಕಟಪಡಿಸಲು ಹೊರಟಿರುವ ಅನ್ನನ್‌ಗೆ ಅಮೆರಿಕಾದಿಂದ ಬೇರಾವುದೋ ಕಾರಣಕ್ಕೆ ಮುಖಮಾರ್ಜನವಾಗಿರುವುದು ಇದರಿಂದ ಸ್ಪಷ್ಟವಾಗುತ್ತಿದೆ. ಅಮೆರಿಕಾ ಮತ್ತು ಬ್ರಿಟನ್ ಇರಾಕ್ ಮೇಲೆ ಆಕ್ರಮಣ ನಡೆಸಿದ್ದು ವಿಶ್ವಸಂಸ್ಥೆಯ ಭದ್ರತಾ ಮಂಡಳಿಯ ನಿರ್ಣಯಕ್ಕೆ ವಿರುದ್ಧವಾಗಿದ್ದುದರಿಂದ ಅದು ಕಾನೂನುಬಾಹಿರ ಕ್ರಮವೆಂದು ಅನ್ನನ್ ಈಗ ಹೇಳುತ್ತಿದ್ದಾರೆ; ಆದರೆ ಪ್ರಪಂಚದ ಜನತೆ ಅದನ್ನು ಎಂದೋ ಘೋಷಿಸಿಬಿಟ್ಟಿತ್ತು. ಅದು ಕಾನೂನುಬಾಹಿರವೆಂದು ಒಪ್ಪಿಕೊಂಡಿರುವ ಅನ್ನನ್ ವಿಶ್ವಸಂಸ್ಥೆಯ ಪರವಾಗಿ ಈಗ ಏನು ಕ್ರಮ ತೆಗೆದುಕೊಳ್ಳುತ್ತಾರೆ ಅಥವಾ ತೆಗೆದುಕೊಳ್ಳಬೇಕೆಂಬುದು ಪ್ರಮುಖ ಪ್ರಶ್ನೆ. ಉಲೂಕ ಮುಖ ಹಾಕಿಕೊಂಡು ಸುಮ್ಮನೆ ಕುಳಿತಿರುತ್ತಾರೆಯೆ ಅಥವಾ ಭದ್ರತಾ ಮಂಡಲಿಯನ್ನು ಕರೆದು ಅದರಲ್ಲಿ ಮುಂದಿನ ಕ್ರಮಕ್ಕಾಗಿ ತಮ್ಮ ಸೂಚನೆಗಳನ್ನು ಮಂಡಿಸುತ್ತಾರೆಯೆ ? ಇರಾಕಿನಲ್ಲಿ ದಿನನಿತ್ಯ ನಡೆಯುತ್ತಿರುವ ಹತ್ಯೆಗಳು, ಧ್ವಂಸ, ಸಂಪತ್ತಿನ ಲೂಟಿ, ಇವನ್ನೆಲ್ಲಾ ಇಡೀ ಪ್ರಪಂಚ ನೋಡುತ್ತಾ ಕುಳಿತಿದೆ. ಅಮೆರಿಕಾ ಮತ್ತು ಬ್ರಿಟನ್ನಿನ ಸೇನೆ ಈ ಕೂಡಲೆ ಅಲ್ಲಿಂದ ಕಾಲ್ತೆಗೆಯಬೇಕೆಂದು ವಿಶ್ವದ ಪರವಾಗಿ ವಿಶ್ವಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಅನ್ನನ್ ಆಜ್ಞಾಪಿಸಬೇಕು. ಇರಾಕಿನಲ್ಲಿ ವಿಧ್ವಂಸಕ ಕೃತ್ಯಗಳನ್ನು ಭಯೋತ್ಪಾದಕರು ನಡೆಸುತ್ತಿಲ್ಲ; ಅದನ್ನು ಅಮೆರಿಕಾ ಸೈನ್ಯ ನಡೆಸುತ್ತಿದೆ.

ಸೆಪ್ಟೆಂಬರ್‌ನ ಮೂರನೆಯ ವಾರದಲ್ಲಿ ಬ್ರಿಟನ್ನಿನ ಪತ್ರಿಕೆಗಳಲ್ಲಿ ಒಂದು ಗಮನಾರ್ಹ ವರದಿ ಪ್ರಕಟವಾಯಿತು. ಇರಾಕಿನ ಮೇಲೆ ಆಕ್ರಮಣ ನಡೆಸಿದರೆ ಆಮೇಲೆ ಅಲ್ಲಿ ಉದ್ಭವಿಸುವ ಸಮಸ್ಯೆಗಳನ್ನು ಎದುರಿಸಲು ಸಾಧ್ಯವಾಗುವುದಿಲ್ಲವೆಂದು ವಿದೇಶಾಂಗ ಸಚಿವ ಜಾಕ್ ಸ್ಟ್ರಾ ಪ್ರಧಾನಿ ಟೋನಿ ಬ್ಲೇರ್‌ಗೆ ತಿಳಿಸಿದ್ದನೆಂಬುದು ಆ ವರದಿ. ಅದಕ್ಕೆ ಕೂಡಲೆ ಪ್ರತಿಕ್ರಿಯಿಸಿ ಈ ಘಾತುಕ ಪ್ರಧಾನಿ ಹೇಳಿದ್ದುದರ ಸಾರಾಂಶವಿಷ್ಟು: ನಾವು ಇರಾಕ್‌ನಲ್ಲಿ ಪ್ರಜಾಪ್ರಭುತ್ವ ಸ್ಥಾಪಿಸಲು ಉದ್ದೇಶಿಸಿದ್ದೇವೆ. ಅದು ಸಫಲವಾದರೆ ಅಂತರರಾಷ್ಟ್ರೀಯ ಭಯೋತ್ಪಾದಕತೆಗೆ ಆಸರೆ ದೊರೆಯುವುದಿಲ್ಲವೆಂಬ ಕಾರಣದಿಂದಾಗಿ ಇರಾಕಿನ ಉಗ್ರಗಾಮಿಗಳು ತೀರಾ ಬರ್ಬರ ಕೃತ್ಯಗಳನ್ನೆಸಗುತ್ತಿದ್ದಾರೆ. ಒತ್ತೆಯಾಳುಗಳನ್ನಾಗಿ ವಿದೇಶಿಯರನ್ನು ಅಪಹರಿಸುವುದು, ಆತ್ಮಹತ್ಯಾ ದಳದವರು ಬಾಂಬುಗಳನ್ನು ಸಿಡಿಸುವುದು, ಸೈನ್ಯದ ತುಕಡಿಗಳ ಮೇಲೆ ಗುಂಡು ಹಾರಿಸುವುದು, ಇವೆಲ್ಲಾ ಅಂತಹ ದುಷ್ಕೃತ್ಯಗಳು. ನಾವು ಆಕ್ರಮಣ ನಡೆಸಿದ್ದು ಸರಿಯೆಂಬುದಕ್ಕೆ ಇದೇ ಪುರಾವೆಯಾಗಿದೆ.

ಬ್ರಿಟನ್ನಿನ ಅನೇಕ ಪ್ರಧಾನಿಗಳು ಹುಂಬರಂತೆ ತೋರ್ಪಡಿಸಿಕೊಳ್ಳುತ್ತಾ ಅಮಾನುಷ ಕೃತ್ಯಗಳನ್ನೆಸಗಿರುವುದಕ್ಕೆ ನಿದರ್ಶನಗಳಿವೆ. ಆದರೆ ಬ್ಲೇರ್ ಅವರನ್ನೆಲ್ಲಾ ಮೀರಿಸುವ ಪರಮನೀಚನಾಗಿ ಸ್ವತಃ ಬ್ರಿಟನ್ನಿನ ಜನತೆಗೆ ಕಾಣುತ್ತಿದ್ದಾನೆ. ಪ್ರಜಾಪ್ರಭುತ್ವವೆಂಬುದಕ್ಕೆ ಏನಾದರೂ ಅರ್ಥ ಉಳಿಯಬೇಕಾದರೆ ಬ್ಲೇರ್ ಈ ವೇಳೆಗೆ ಎಂದೋ ರಾಜಿನಾಮೆ ಕೊಟ್ಟು ತೊಲಗಬೇಕಾಗಿತ್ತು. ಬುಷ್‌ನ ತೊತ್ತಿನವನಂತೆ ವರ್ತಿಸುವ ಈತ ಇರಾಕಿನ ಹೋರಾಟಗಾರರನ್ನು ಬರ್ಬರರೆಂದು ಜರಿಯುವುದು ಮೋಜೆನಿಸುತ್ತದೆ. ಇರಾಕಿನ ಜನತೆ ಬುಷ್ - ಬ್ಲೇರ್‌ರನ್ನು ಹರ್ಷದಿಂದ ಆಲಂಗಿಸಬೇಕಾಗಿತ್ತೆಂದು ಈತನ ನಿರೀಕ್ಷೆ. ಆದರೆ ಇರಾಕಿನ ಹೋರಾಟದ ಪರಂಪರೆ ಅಲ್ಲಿನ ಜನತೆಗೆ ಬೇರೊಂದು ಮಾರ್ಗವನ್ನು ಕಲಿಸಿದೆ. ಅವರು ಹೇಗೆ ಹೋರಾಡಬೇಕೆಂಬ ನಿಯಮಾವಳಿಯನ್ನು ಇವರು ನಿರ್ಧರಿಸಲು ಹೇಗೆ ಸಾಧ್ಯ ! ಬುಷ್ - ಬ್ಲೇರ್ ಬೆಂಬಲಿಗರಾದ ಬೋರಿಸ್ ಬೆರೆಸ್ಕೋವ್‌ಸ್ಕಿ ಮತ್ತು ಮಿಖಾಯಿಲ್ ಖದಸ್ಕೋರ್ವ್‌ಸ್ಕಿ ಬೆಸ್ಲಾನ್‌ನಲ್ಲಿ ಮಾಡಿಸಿದ್ದೇನು ? ಸಾವಿರಾರು ಮಕ್ಕಳಿಗೆ ಯಾತನೆ ಮತ್ತು ಸಾವು. ಅದನ್ನೇ ಇರಾಕಿನಲ್ಲಿ ಬುಷ್-ಬ್ಲೇರ್ ಮಾಡುತ್ತಿದ್ದಾರೆ.

ಈಗಾಗಲೇ ಮುಂದಿನ ರಣರಂಗ ಸಹ ಸಿದ್ಧಗೊಳ್ಳುತ್ತಿದೆ. ಇರಾಕ್ ಮತ್ತು ಇರಾನ್‌ಗಳ ನಡುವೆ ಎಂಟು ವರ್ಷ ಕಾಳಗಕ್ಕೆ ಪ್ರೇರಣೆ ನೀಡಿದ್ದ ಅಮೆರಿಕಾ ಈಗ ಇರಾಕನ್ನು ವಶಪಡಿಸಿಕೊಂಡಿದೆ. ಮುಂದುವರಿದು ಇರಾನನ್ನು ಸ್ವಾಧೀನಪಡಿಸಿಕೊಳ್ಳಬೇಕು. ''ಕಳ್ಳನಿಗೊಂದು ಪಿಳ್ಳೆ ನೆವ'' ಹುಡುಕುವ ಪ್ರಕ್ರಿಯೆ ಆರಂಭವಾಗಿದೆ. ಇರಾಕ್‌ನಲ್ಲಿ ಮಾರಕಾಸ್ತ್ರಗಳಿದ್ದುವೆಂದು ಗುಲ್ಲೆಬ್ಬಿಸಿದ್ದಾಯಿತು. ಅಲ್ಲಿ ಪಟಾಕಿಗಳೂ ಶೇಖರಣೆಯಾಗಿರಲಿಲ್ಲ. ಈಗ ಇರಾನ್ ಅಣ್ವಸ್ತ್ರ ನಿರ್ಮಿಸಲಿದೆಯೆಂದು ಅಮೆರಿಕಾ ವಿಶ್ವಸಂಸ್ಥೆಗೆ ದೂರು ಸಲ್ಲಿಸಿ ಆ ದೇಶದ ಮೇಲಿನ ಆರ್ಥಿಕ ದಿಗ್ಬಂಧನಕ್ಕೆ ಕರೆ ನೀಡಿದೆ. ಯಜಮಾನ ಹೇಳಿದ್ದನ್ನು ಕಿಂಕರ ಬ್ಲೇರ್ ಅನುಮೋದಿಸುತ್ತಾನೆ. ಆದರೆ ಅಂತರರಾಷ್ಟ್ರೀಯ ಪರಮಾಣು ಶಕ್ತಿಯ ನಿಯಂತ್ರಣವನ್ನು ನಿರ್ದೇಶಿಸುವ ವಿಶ್ವಸಂಸ್ಥೆಯ ಅಂಗಸಂಸ್ಥೆಯಾದ ಐ.ಎ.ಇ.ಎ. ಅಮೆರಿಕಾದ ವಾದವನ್ನು ನಿರಾಕರಿಸಿದೆ. ಆದರೂ ಅಮೆರಿಕಾದ ತಗಾದೆ ತಗ್ಗಿಲ್ಲ. ಅದರಿಂದಲೋ ಏನೋ ಐ.ಎ.ಇ.ಎ. ಈಗ ಎಲ್ಲ ಪರಮಾಣು ಸಂಬಂಧಿತ ಪ್ರಕ್ರಿಯೆಗಳನ್ನೂ ನಿಲ್ಲಿಸಬೇಕೆಂದು ಇರಾನ್‌ಗೆ ಆದೇಶ ನೀಡಿದೆ. ಅಂತಹ ಆದೇಶ ನೀಡಲು ಸಂಸ್ಥೆಗೆ ಅಧಿಕಾರವಿಲ್ಲವೆಂದೂ, ಆಜ್ಞೆಯು ಕಾನೂನುಬಾಹಿರವೆಂದೂ ಇರಾನಿನ ಸಚಿವರು ಹೇಳಿದ್ದಾರೆ. ಈ ಇರಾನಿನ ವಿದೇಶಾಂಗ ಸಚಿವರ ಹೇಳಿಕೆಯಂತೆ ಈವರೆಗೆ ಒಂದು ವರ್ಷದಲ್ಲಿ ಎಂಟು ನೂರು ವ್ಯಕ್ತಿದಿನಗಳನ್ನು ಇರಾನ್ ಐ.ಎ.ಇ.ಎ.ಗೆ ಒದಗಿಸಿದೆ. ಆ ಸಂಸ್ಥೆಯ ಪ್ರತಿನಿಧಿಗಳು ಇರಾನಿನ ಎಲ್ಲ ಪರಮಾಣು ಸಂಶೋಧನಾ ಕೇಂದ್ರಗಳಿಗೂ ಭೇಟಿ ನೀಡಿದ್ದಾರೆ ಮತ್ತು ಯಾವ ಅಸ್ತ್ರ ನಿರ್ಮಾಣದ ಯೋಜನೆಯನ್ನೂ ಅವರು ಕಂಡಿಲ್ಲ. ಶಾಂತಿಯುತ ಉಪಯೋಗಕ್ಕಷ್ಟೇ ಆ ದೇಶದ ಸಂಶೋಧನೆ ಸೀಮಿತವಾಗಿದೆಯೆಂದು ಐ.ಎ.ಇ.ಎ. ಹೇಳಿದರೂ ಎಲ್ಲೆಡೆ ಗುಮ್ಮನನ್ನು ಕಾಣುವ ಸ್ವೇಚ್ಛಾಚಾರಿ ಅಮೆರಿಕಾ ಮತ್ತೆ ವಿಶ್ವಸಂಸ್ಥೆಯ ಆಣತಿಯನ್ನು ಮೀರಿ ನಡೆಯುವ ಪ್ರಸಂಗವನ್ನು ಪ್ರಪಂಚ ಎದುರಿಸಬೇಕಾದೀತು. ಫ್ರಾನ್ಸ್, ಜರ್ಮನಿ ಮತ್ತು ರಷ್ಯ ಯಾವ ನಿಲುವನ್ನು ತಳೆಯಬಹುದೆಂಬುದನ್ನು ಕಾದುನೋಡಬೇಕಾಗಿದೆ. ಚೀಣ ಬಹುಶಃ ಅಮೆರಿಕಾವನ್ನು ತಣಿಸಲು ತಟಸ್ಥವಾಗಬಹುದು. ಆದರೆ ಭಾರತ ಹಾಗೆ ಮಾಡಲಾಗುವುದಿಲ್ಲ. ಅನ್ನನ್ ಮಹಾಶಯರು ಈ ಎಲ್ಲ ವಿದ್ಯಮಾನಗಳ ಬಗ್ಗೆ ಏನು ಮಾಡಲಿದ್ದಾರೋ ತಿಳಿಯದು.

ಜೊತೆಗೆ ಉತ್ತರ ಕೊರಿಯಾದ ನಿಲುವೂ ಪ್ರಬಲವಾಗಿದೆ. ತನ್ನ ಪರಮಾಣು ಸಂಶೋಧನಾ ಪ್ರಕ್ರಿಯೆಯನ್ನು ಸ್ಥಗಿತಗೊಳಿಸಲು ಸಾಧ್ಯವಿಲ್ಲವೆಂದು ಆ ದೇಶ ಹೇಳಿದೆ. ತನ್ನ ದೇಶದ ಬಗ್ಗೆ ಅಮೆರಿಕಾದ ನಡತೆ ಬದಲಾದಾಗ ಮಾತ್ರ ಆ ಪ್ರಕ್ರಿಯೆಯನ್ನು ನಿಲ್ಲಿಸಬಹುದೆಂದು ಆ ದೇಶದ ಸರ್ಕಾರ ವಿಶ್ವಸಂಸ್ಥೆಗೆ ತಿಳಿಸಿದೆ. ಅಮೆರಿಕಾ ಎಂಬ ಹುಲಿಯ ಪಟ್ಟೆಯನ್ನು ಬದಲಿಸಲು ಅನ್ನನ್ ಸಮರ್ಥರಿದ್ದಾರೆಯೆ ? ವಿಶ್ವಸಂಸ್ಥೆ ಈ ಸವಾಲುಗಳನ್ನೆಲ್ಲಾ ಪ್ರಬುದ್ಧವಾಗಿ ಮತ್ತು ನಿರ್ದಾಕ್ಷಿಣ್ಯವಾಗಿ ಎದುರಿಸಿದರೆ ಬುಷ್-ಬ್ಲೇರ್ ಸಮಾಧಿ ಖಚಿತ.

# ಒಲಿಂಪಿಕ್ಸ್ ಸುತ್ತಮುತ್ತ

ಅಥೆನ್ಸ್‌ನಲ್ಲಿ ಈ ಬಾರಿಯ ಒಲಿಂಪಿಕ್ಸ್ ಕ್ರೀಡಾಕೂಟ ಮುಕ್ತಾಯವಾದ ಸಂದರ್ಭದಲ್ಲಿ ನಮ್ಮ ದೇಶದ ಒಂದು ಪತ್ರಿಕೆಯಲ್ಲಿ ವ್ಯಂಗ್ಯಚಿತ್ರವೊಂದು ಪ್ರಕಟವಾಗಿತ್ತು. ಸಿಡ್ನಿಯಲ್ಲಿ ಒಂದು ಕಂಚು, ಅಥೆನ್ಸ್‌ನಲ್ಲಿ ಒಂದು ಬೆಳ್ಳಿ; ಆದ್ದರಿಂದ ಮುಂದೆ ಬೀಜಿಂಗ್‌ನಲ್ಲಿ ಒಂದು ಚಿನ್ನ ಖಾತರಿಯಾದಂತೆ ಎಂಬುದು ಅದರ ಸೂಚನೆ. ಅದು ಸೂಚನೆಯೋ, ಆಶಯವೋ, ಟೀಕೆಯೋ, ಹತಾಶೆಯೋ ಎಂಬುದನ್ನು ಪ್ರತಿಯೊಬ್ಬ ಭಾರತೀಯ ಪ್ರಜೆಯೂ ಸೂಕ್ತಕಂಡಂತೆ ವ್ಯಾಖ್ಯಾನಿಸಿಕೊಳ್ಳಬಹುದು. ನೂರು ಕೋಟಿ ಜನರ ದೇಶವು ಒಂದು ಬೆಳ್ಳಿ ಪದಕದಿಂದ ಹಿಗ್ಗಿ ತೃಪ್ತಿಪಟ್ಟುಕೊಳ್ಳಬೇಕಾದ ಅನಿವಾರ್ಯ ಸನ್ನಿವೇಶ ನಮ್ಮದು. ಬಡತನದ ರೇಖೆಗಿಂತ ಕೆಳಗಿನವರು ಜೀವಂತವಾಗಿ ಉಳಿಯುವುದೇ ಒಂದು ಸ್ಪರ್ಧೆ, ಅದರಲ್ಲಿ ಗೆದ್ದರೆ ಅದೇ ಪದಕ. ಆದರೆ ಪೌಷ್ಟಿಕಾಂಶದ ಕೊರತೆ ಇಲ್ಲದವರ ಪೈಕಿ ಒಂದಷ್ಟು ಮಂದಿ ಕ್ರೀಡಾ ಧುರೀಣರೇಕೆ ವಿಕಾಸವಾಗುತ್ತಿಲ್ಲವೆಂಬ ಪ್ರಶ್ನೆಗೆ ಉತ್ತರ ಸಿಗುತ್ತಿಲ್ಲ. ಅವರಿಗೆ ವಿರಾಮದ ಕೊರತೆ ಎನ್ನೋಣವೆಂದರೆ ಅದು ವಾಸ್ತವವಲ್ಲ. ದೀರ್ಘಕಾಲ ತರಪೇತಿ ಪಡೆಯಲು ಅವರಿಗೆ ಸಮಯವಿದೆ, ಕೆಲವೊಮ್ಮೆ ಆರ್ಥಿಕ ಬೆಂಬಲವೂ ಇದೆ. ಸೌಲಭ್ಯದ ಕೊರತೆ ಸ್ವಲ್ಪ ಮಟ್ಟಿಗೆ ನಿಜ. ನಮ್ಮ ಪಾಟಿಯಾಲ, ಗ್ವಾಲಿಯರ್, ಬೆಂಗಳೂರು ಕ್ರೀಡಾ ಕೇಂದ್ರಗಳು ಚೆನ್ನಾಗಿಯೇ ಕೆಲಸ ಮಾಡುತ್ತಿವೆಯೆಂದು ಅನೇಕ ಪರಿಣತರು ಹೇಳುತ್ತಾರೆ. ಬೆಂಗಳೂರಿನ ಕಂಠೀರವ ಕ್ರೀಡಾಂಗಣದ ಕತೆಯೇ ಬೇರೆ. ಅಲ್ಲಿ ವ್ಯಾಪಾರ, ಹರಾಜು, ಮುಂತಾದ ಚಟುವಟಿಕೆಗಳಿಗೆ ಪ್ರೋತ್ಸಾಹವಿದೆ; ಆದರೆ ಕ್ರೀಡಾಳುಗಳು ಓಡುವುದನ್ನೋ, ನೆಗೆಯುವುದನ್ನೋ, ಹಾರುವುದನ್ನೋ, ಎಸೆಯುವುದನ್ನೋ ಅಭ್ಯಾಸ ಮಾಡಬೇಕೆಂದರೆ ಬೇಕಾದಷ್ಟು ಅಡಚಣೆಗಳಿವೆ. ದೇಶದ ಅನೇಕ ಭಾಗಗಳಲ್ಲಿ ಇಂಥವೇ ಕೇಂದ್ರಗಳಿವೆ ಮತ್ತು ಅಲ್ಲೆಲ್ಲಾ ಕೊಬ್ಬಿದ ಹಂದಿಗಳು ಸಾರ್ವಜನಿಕ ಹಣವನ್ನು ಭಕ್ಷಿಸುತ್ತಿವೆಯೆಂಬ ವದಂತಿಗಳಿವೆ. ಅವೆಲ್ಲಾ ಸುಳ್ಳೆಂದು ಸಾಬೀತಾಗಿಲ್ಲ. ಒಂದು ಚೆಂಡನ್ನು ಎಂದೂ ಒದೆಯದಿರುವವನು ನಮ್ಮ ಫುಟ್‌ಬಾಲ್ ಫೆಡರೇಶನ್ನಿನ ಅಧ್ಯಕ್ಷನಾಗಬಹುದು. ಒಬ್ಬ ಚಾಣಾಕ್ಷ ಉದ್ಯಮಿ ಕ್ರಿಕೆಟ್ ಮಂಡಲಿಯ ಪೋಷಕ – ಅಧ್ಯಕ್ಷನಾಗಬಲ್ಲ. ಈ ಕ್ರೀಡೆಯ ಆಟಾಟೋಪಕ್ಕೆ ಎಲ್ಲೆಯಿಲ್ಲ. ದೇಶದ ಮೇಲೆ ಹಿಂದಿ ಹೇರಲು ಸಹ ಅದು ಸಾಧನವಾಗಬಲ್ಲದು. ನಾಲ್ಕು ವರ್ಷಗಳಲ್ಲಿ ಆ ಕ್ರೀಡೆಯನ್ನು ದೂರದರ್ಶನದಲ್ಲಿ ಪ್ರಸಾರ ಮಾಡಲು ಮುನ್ನೂರು ಮಿಲಿಯನ್ ಡಾಲರುಗಳ (ಅಂದರೆ ಸುಮಾರು ಸಾವಿರದೈನೂರು ಕೋಟಿ ರೂಪಾಯಿಗಳ) ವ್ಯವಹಾರವಿದೆ. ಆದ್ದರಿಂದ ಶೇಕಡ ಹತ್ತು ಅವ್ಯವಹಾರವಿದ್ದರೂ ಉದ್ಯಮಿಗಳಿಗೆ ಅಪಾರ ಲಾಭಾಂಶವಿದೆ. ಇಂತಹ ಲಾಭವಿರುವುದರಿಂದಲೇ ಅದಕ್ಕೆ ಎಲ್ಲಿಲ್ಲದ ಮಹಾತ್ಮೆ. ಯಾವುದೋ ಕೆಲಸಕ್ಕೆ ಬಾರದ ಒಂದು ಕ್ರಿಕೆಟ್ ಪಂದ್ಯ ನಡೆದರೂ ನಮ್ಮ ರೇಡಿಯೋ ಮತ್ತು ದೂರದರ್ಶನಗಳಲ್ಲಿ ಎಲ್ಲಾ ಸಂಗೀತ - ನೃತ್ಯ - ಸಾಹಿತ್ಯ - ಸಂಸ್ಕೃತಿಗಳೂ ಮುಳುಗಿಹೋಗುತ್ತವೆ. ಸಂತೆ ವೇಳೆಗೆ ಮೂರು ಮೊಳ ನೇಯುವ ಪದ್ಧತಿ ನಮ್ಮ ಎಲ್ಲ ಕ್ರೀಡಾಕ್ಷೇತ್ರಗಳಲ್ಲೂ ಇರುವುದು ತಿಳಿದ ವಿಷಯ. ಆಟಗಾರರನ್ನು ಆಡಳಿತಗಾರರು ನಡೆಸಿಕೊಳ್ಳುವ ರೀತಿಯ ಪೂರ್ಣ ಪರಿಚಯ ಸಾರ್ವಜನಿಕರಿಗಿಲ್ಲ. ಅದನ್ನೇನಾದರೂ ಆಟಗಾರ ಹೇಳತೊಡಗಿದರೆ ಆಡಳಿತವು ಅವನ ಅಥವಾ ಅವಳ ಹುಟ್ಟಡಗಿಸಿಬಿಡುತ್ತದೆ. ಹಣ ಬರುವುದು ಸರ್ಕಾರದಿಂದ ಇಲ್ಲವೆ ಸರ್ಕಾರಿ ಮತ್ತು ಖಾಸಗಿ ಉದ್ಯಮಗಳಿಂದ. ಫಲಾನುಭವಿಗಳು ಆಟಗಾರರೇ ಆಗಿರುತ್ತಾರೆಂಬುದು ನಿಜವಲ್ಲ. ನಮ್ಮ ಬೇರೆ ಮಾರುಕಟ್ಟೆಗಳಲ್ಲಿರುವಂತೆ ಇಲ್ಲಿಯೂ ಮಧ್ಯವರ್ತಿ ತಿಮಿಂಗಿಲಗಳಿವೆ.

ಈ ಹಿನ್ನೆಲೆಯಲ್ಲಿ ನಮ್ಮ ಸ್ಪರ್ಧಿಗಳು ಅಂತರರಾಷ್ಟ್ರೀಯ ಕೂಟಗಳಲ್ಲಿ ಭಾಗವಹಿಸಬೇಕು, ಅಸಡ್ಡೆಯನ್ನು ಸಹಿಸಿಕೊಳ್ಳಬೇಕು, ಅಂಜಿ ನಡೆಯಬೇಕು. ಆಟಗಾರರ ಸಾಮರ್ಥ್ಯವು ಗುಟ್ಟಾದ ವಿಷಯವೇನೂ ಅಲ್ಲ. ಆದರೂ ಮಾಧ್ಯಮಗಳಲ್ಲಿ ಪುಟಗಟ್ಟಲೆ ಬರೆದು ಅನೇಕ ಕ್ರೀಡಾಳುಗಳಿಗೆ ಮುಜುಗರ ಉಂಟಾಗುತ್ತದೆ. ಮಾದಕ ದ್ರವ್ಯದ ಪಿಡುಗು ಬೇರೆ! ಹೀಗಾಗಿ ಚಾತಕ ಪಕ್ಷಿಯಂತೆ ಭಾರತವು ಬೀಜಿಂಗ್‌ನತ್ತ ಬಾಯಿ ತೆರೆದು ಕೂಡಬೇಕಾಗಿದೆ. ಒಂದಷ್ಟು ಮಂದಿ ಕ್ರೀಡಾ ಆಡಳಿತಗಾರರನ್ನು ತಿಪ್ಪೆಗುಂಡಿಗಳಿಗೆ ಎಸೆದರೆ ನಮ್ಮ ಅನೇಕ ಕ್ರೀಡಾಪಟುಗಳು ಈಗಿಗಿಂತ ಹೆಚ್ಚು ಉತ್ಸಾಹ ಮತ್ತು ಕೌಶಲ್ಯ ಪ್ರದರ್ಶಿಸುವುದರಲ್ಲಿ ಸಂದೇಹವಿಲ್ಲವೆನಿಸುತ್ತದೆ.

ಅಥೆನ್ಸ್ ಭಾರತದ ಮಟ್ಟಿಗೆ ಹೀಗಾದರೆ, ಅಮೆರಿಕಾ - ಇರಾಕ್ - ಆಫ್ಘಾನಿಸ್ತಾನ್ ದೇಶಗಳಿಗೆ ಬೇರೆಯೇ ಅನುಭವ ನೀಡಿದೆ. ಅಮೆರಿಕಾಗೆ ಪದಕಗಳಿಗೇನೂ ಕೊರತೆಯಿಲ್ಲ. ಆದರೆ ಅದಷ್ಟರಿಂದ ಬುಷ್‌ಗೆ ಸಂತಸವಿಲ್ಲ. ತನ್ನ ರಾಜಕೀಯ ದಾಳಗಳನ್ನೂ ಕ್ರೀಡೆಗಳ ಸಂದರ್ಭದಲ್ಲಿ ಆತ ಉರುಳಿಸಿದ್ದಾನೆ. ಕ್ರೀಡೆಯನ್ನು ರಾಜಕೀಯ ಆಕಾಂಕ್ಷೆಗೆ ಬಳಸಲು ಸೋವಿಯೆತ್ ಒಕ್ಕೂಟ ಯೋಜಿಸಿದೆಯೆಂಬ ಸುಳ್ಳು ಆಪಾದನೆ ಹೊರಿಸಿ ಅಮೆರಿಕಾ ಮಾಸ್ಕೋ ಒಲಿಂಪಿಕ್ಸ್‌ನಲ್ಲಿ ಭಾಗವಹಿಸಲಿಲ್ಲ. ಆದರೆ ಈಗ ಎತ್ತಿದ ಕಂಠದಿಂದ ಬುಷ್ ಹೇಳುತ್ತಿರುವುದಿದು: ''ನೋಡಿ, ನಾವು ಇರಾಕ್ ಮತ್ತು ಆಫ್ಘಾನಿಸ್ತಾನಗಳಿಗೆ ಪ್ರಜಾಪ್ರಭುತ್ವ ತಂದುಕೊಟ್ಟು ಅಲ್ಲಿಯ ಜನರಿಗೆ ಸ್ವಾತಂತ್ರ್ಯ ನೀಡಿದ್ದೇವೆ. ಆ ಎರಡು ದೇಶಗಳ ಕ್ರೀಡಾಪಟುಗಳು ಒಲಿಂಪಿಕ್ಸ್‌ನಲ್ಲಿ ಭಾಗವಹಿಸುತ್ತಿರುವುದು ನಮ್ಮ ಕಾರ್ಯಾಚರಣೆಯಿಂದ ಎಂಬುದು ನಮಗೆ ಹೆಮ್ಮೆಯ ವಿಷಯ.'' ಇರಾಕ್ ಫುಟ್‌ಬಾಲ್‌ನಲ್ಲಿ ಅಂತಿಮ ಹಂತ ತಲುಪಿದ್ದರೆ ಕಡೆಯ ಆಟದ ವೇಳೆಗೆ ಬುಷ್ ಅಥೆನ್ಸ್‌ಗೆ ಹೋಗಬೇಕೆಂದಿದ್ದರಂತೆ. ಪಾಪ, ಇರಾಕ್ ಸೆಮಿಫೈನಲ್ಸ್‌ನಲ್ಲೇ ಸೋತಿತು. ಆ ತಂಡದ ಆಟಗಾರರು ಸ್ಪಷ್ಟವಾಗಿ ಹೇಳಿದರು: ನಮ್ಮ ರಾಷ್ಟ್ರದ ಮೇಲೆ ಅಮೆರಿಕಾ ನಡೆಸಿರುವ ಆಕ್ರಮಣವನ್ನು ನಾವು ಸರ್ವಥಾ ಸಮರ್ಥಿಸುವುದಿಲ್ಲ. ನಮ್ಮ ಭಾಗವಹಿಸುವಿಕೆಯನ್ನು ಯಾರೂ ತಮ್ಮ ರಾಜಕೀಯಕ್ಕೆ ಬಳಸಿಕೊಳ್ಳಕೂಡದು.

ಬುಷ್‌ಗೆ ಅತ್ಯಂತ ಬಲವಾಗಿ ಕಪಾಳಮೋಕ್ಷ ಮಾಡಿದವನು ಕಾರ್ಲ್ ಲೂಯಿಸ್. ಈತ ಕರಿಯ. ಅಮೆರಿಕಾದ ಅತ್ಯಂತ ಜನಾದರಣೀಯ ಒಲಿಂಪಿಕ್ಸ್ ವೀರ. ಆತ ಒಟ್ಟು ಒಂಬತ್ತು ಪದಕಗಳನ್ನು ಪಡೆದಿದ್ದವನು. ಇರಾಕ್ ಮತ್ತು ಆಫ್ಘಾನಿಸ್ತಾನ ತಂಡಗಳ ಉಪಸ್ಥಿತಿಯನ್ನು ಬುಷ್ ತನ್ನ ಅಧ್ಯಕ್ಷಗಿರಿಯ ಚುನಾವಣೆಗೆ ಜಾಹಿರಾತುಗಳಲ್ಲಿ ಬಳಸಿಕೊಳ್ಳುತ್ತಿದ್ದುದನ್ನು ಕಾರ್ಲ್ ಕಟುವಾಗಿ ಖಂಡಿಸಿದ. ಅವನೆಂದ : ''ಬುಷ್‌ರ ಈ ಕೆಲಸ ದಡ್ಡತನದ್ದು. ೧೯೮೦ರಲ್ಲಿ ಆಫ್ಘಾನಿಸ್ತಾನದ ಬೆಂಬಲಕ್ಕಾಗಿ ನಾವು

೬ನೇ ಪುಟಕ್ಕೆ




**ಸಮಾಲೋಚಕ ಮಂಡಲಿ**

ಟಿ. ಆರ್. ಅನಂತರಾಮು
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಕೆ. ಎಲ್. ಗೋಪಾಲಕೃಷ್ಣ ರಾವ್
ಎಚ್. ಎಸ್. ಗೋಪಾಲ ರಾವ್
ಜಿ. ಕೆ. ಗೋವಿಂದ ರಾವ್
ಎಂ. ಸಿ. ನರಸಿಂಹನ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬರಗೂರು ರಾಮಚಂದ್ರಪ್ಪ
ಕೆ. ಮರುಳಸಿದ್ದಪ್ಪ
ಮಹಾಬಲೇಶ್ವರ ರಾವ್
ರವಿಕುಮಾರ್ ಅಜ್ಜೀಪುರ
ವ್ಯಾಸರಾಯ ಬಲ್ಲಾಳ
ವಿಜಯಾ
ಬಿ. ವಿ. ವೀರಭದ್ರಪ್ಪ
ಟಿ. ವೆಂಕಟೇಶ ಮೂರ್ತಿ
ಯು. ಎಸ್. ಶ್ರೀನಿವಾಸನ್
ಸಿದ್ದನಗೌಡ ಪಾಟೀಲ
ಎಲ್. ಹನುಮಂತಯ್ಯ

**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ.೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
☎ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
☎ : ೦೮೨೪-೨೪೪೧೦೦೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
☎ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
☎ : ೦೮೪೭೨-೨೨೪೩೦೨




**ಆಗಸ್ಟ್ ಸಂಚಿಕೆ**

**ಡಾ||** ಕಂತಿಯವರ ''ಹೊಸ್ತಿಲಲ್ಲಿ ಹುಲ್ಲು ಹುಟ್ಟಿ...'' ನಾಡಿನ ಗಡಿ ಸೀಮೆಯ ಬವಣೆಯ ಚಿತ್ರಣ ಲೇಖನದಲ್ಲಿ ಅಪೂರ್ಣವಾಗಿದೆಯೆಂದು ಕಂಡುಬರುತ್ತಿದೆ.

ಹುಲ್ಲು ಈಗ ಬರೀ ಹೊಸ್ತಿಲಲ್ಲಿಲ್ಲ; ಹೊಸ್ತಿಲೊಳಗೂ ಬೇರು ಬಿಟ್ಟು ಮನೆಯಲ್ಲಿ ರಜೆ ತುಂಬಿಹೋಗಿದೆ.

ಬೆಂಗಳೂರು **ಜಿ. ಎಸ್. ಸಪ್ತಸಾಗರ**

ಡಾ|| ಬಿ. ಆರ್. ಅಂಬೇಡ್ಕರ್ ಅವರನ್ನು ಇತ್ತೀಚಿನ ದಿನಗಳಲ್ಲಿ ಹಿಂದುಗಳ ನಾಯಕರಂತೆ ಮಾಧ್ಯಮಗಳು ಮತ್ತು ಪಟ್ಟಭದ್ರ ಹಿತಾಸಕ್ತಿಗಳು ಚಿತ್ರಿಸುತ್ತಿದ್ದಾರೆ. ಇದಕ್ಕೆ ಭಿನ್ನವಾಗಿ, ಅವರು ಹೋರಾಡಿದ್ದು ಸಮಸ್ತ ಶೋಷಿತರ ವಿಮೋಚನೆ ಮತ್ತು ಸ್ತ್ರೀಯರ ಹಕ್ಕುಗಳಿಗಾಗಿ ಎಂಬ ವಿಚಾರ ವನ್ನು ಲೇಖನದಲ್ಲಿ ಬಹಳ ಉತ್ತಮವಾಗಿ ತಿಳಿಸಿರುವ ಡಾ|| ಎಂ. ಎಸ್. ಮಂಗಳ ಅವರಿಗೆ ನನ್ನ ಅಭಿನಂದನೆಗಳು.

ಮೈಸೂರು **ಧರ್ಮೇಶ್**

**ಸೆಪ್ಟೆಂಬರ್ ಸಂಚಿಕೆ**

ಸೀತಾರಾಂ ಕುರುವರಿಯವರ 'ಧರ್ಮಗಳೆಂಬ ಮೂಢ ನಂಬಿಕೆಗಳಿಗಾಗಿ' ಲೇಖನ ಓದಿದೆ. ಧರ್ಮದ ಹೆಸರಿನಲ್ಲಿ ಸಮಾಜದಲ್ಲಿ ಬೆಳೆದುಕೊಂಡು ಬಂದ ಸಂಪ್ರದಾಯಗಳು ನಂಬಿಕೆಗಳು ಎಲ್ಲವೂ ಧರ್ಮದ ಮೂಲಭೂತ ಭಾಗವೆಂದು ಪರಿಗಣಿಸುವುದೇ ಒಂದು ಅತಿದೊಡ್ಡ ಮೂಢನಂಬಿಕೆ.

ಹಿಂದೂ ಧರ್ಮ ಮತ್ತು ಜಾತಿ ವ್ಯವಸ್ಥೆಯ ಮೇಲೆ ಮೂರು ಕಂತುಗಳಲ್ಲಿ 'ಹೊಸತು'ವಿನಲ್ಲಿ ಪ್ರಕಟವಾದ ನನ್ನ ಲೇಖನವನ್ನು (ಡಿಸೆಂಬರ್ ೨೦೦೩, ಜನವರಿ ಮತ್ತು ಫೆಬ್ರವರಿ ೨೦೦೪) ಕುರುವರಿಯವರು ಮುಕ್ತ ಮನಸ್ಸಿನಿಂದ ಮತ್ತು ತಾಳ್ಮೆಯಿಂದ ದಯವಿಟ್ಟು ಓದಬೇಕು. ಹಿಂದೂ ಧರ್ಮವನ್ನು ಹಳಿಯುವುದೇ ಪ್ರಗತಿಪರತೆಯ ಲಕ್ಷಣವೆಂದು ತಿಳಿಯುವುದರಿಂದ ಪ್ರಗತಿಯ ಉದ್ದೇಶ ಸಾಧಿಸುವುದಿಲ್ಲ. ಅದು ಹಿಂದುತ್ವವನ್ನು ಇನ್ನೂ ದೃಢಪಡಿಸುತ್ತದೆ, ಎಂದು ಕುರುವರಿಯಂತಹ ಪ್ರಗತಿಪರ ಲೇಖಕರು ಮನಗಾಣಬೇಕು.

ಬೆಂಗಳೂರು **ಡಾ|| ಎಂ. ವಿ. ನಾಡಕರ್ಣಿ**

ಸೀತಾರಾಂ ಕುರುವರಿ ಅವರ ಲೇಖನ ಧರ್ಮದ ದುರಂತ ಮುಖಗಳನ್ನು ತೆರೆದು ಸಾಕಷ್ಟು ಪರಿಣಾಮಕಾರಿ ಯಾಗಿ ವಿಶ್ಲೇಷಿಸಿದೆ. ಇಲ್ಲಿ ನನ್ನ ಪುಟ್ಟದೊಂದು ತಕರಾರು ಏನಂದ್ರೆ, ಎಲ್ಲ ನಂಬಿಕೆಗಳೂ ಮೂಢವಾದ್ದರಿಂದ ಮೂಢನಂಬಿಕೆ ಎಂಬ ಉಲ್ಲೇಖ ಸಮಂಜಸವಲ್ಲವೇನೋ. ನಂಬಿಕೆ ಎಂದರೆ ವೈಜ್ಞಾನಿಕ, ತಾರ್ಕಿಕ ವಿವರಣೆ ಇಲ್ಲದ್ದು, ಸಾಕ್ಷ್ಯಾಧಾರವಿಲ್ಲದ್ದು, ವಿವೇಕರಹಿತವಾದ್ದು ಎಂದೇ ಅರ್ಥ. ಸಾಕ್ಷ್ಯಾಧಾರ, ವಿಮರ್ಶೆ, ವಿವೇಚನೆಗಳಿಂದ ಕೂಡಿದ ಯಾವುದೇ ವಿಷಯ/ವಸ್ತು ನಂಬಿಕೆಯಾಗಿ ಉಳಿಯುವು ದಿಲ್ಲ, ಬದಲಾಗಿ ಜ್ಞಾನವಾಗುತ್ತದೆ, ವಿವೇಕವಾಗುತ್ತದೆ. ಹಾಗಾಗಿಯೇ ನಂಬಿಕೆ ಎಂಬುದು ಸದಾ ಮೂಢವೇ.

ಬೆಂಗಳೂರು **ಸಿ. ಎಚ್. ಕೃಷ್ಣಶಾಸ್ತ್ರಿ**

ಡಾ|| ರಂಗರಾಜ ವನದುರ್ಗ ಅವರ ''ಶಾಂತಿಯ ಸಂಕಟ : ಪಾರಿವಾಳ ಮತ್ತು ಪಿಸ್ತೂಲು'' ತುಂಬಾ ಅರ್ಥಪೂರ್ಣವಾಗಿ ಹಾಗೂ ಚಿಂತನಶೀಲತೆಯಿಂದ ಮೂಡಿಬಂದಿದೆ. ಇಂತಹ ಅಧ್ಯಯನಾರ್ಹ ಲೇಖನ ಬರೆದ ಅವರಿಗೆ ಅಭಿವಂದನೆಗಳು.

ಹಿರೇ ಕೋಗಲೂರು **ಹೆಚ್. ಆರ್. ತಿಪ್ಪೇಸ್ವಾಮಿ**

**ಧರ್ಮಗಳೆಂಬ ಮೂಢನಂಬಿಕೆಗಳಿಗಾಗಿ...**

ಮಾನವನ ಹುಟ್ಟಿನೊಂದಿಗೆ ಆರಂಭಗೊಂಡಿರುವ ದೇವರು, ಧರ್ಮ ಮತ್ತು ವಿಜ್ಞಾನ ಎಂಬ ಜಿಜ್ಞಾಸೆ ಸದಾಕಾಲವೂ ಹಸಿರಾಗಿರುವ ವಿಚಾರವೆಂತಲೂ ಸಮಸ್ಯೆ ಯೆಂತಲೂ ಉಳಿದುಕೊಂಡು ಬಂದಿದೆ. ವಿಶ್ವದ ಸಮಸ್ತ ಚಟುವಟಿಕೆಗಳು ಮಾನವನ ಊಹೆಗೂ ನಿಲುಕದ ಅತ್ಯಂತ ಕರಾರುವಾಕ್ಕಾದ ರೀತಿ ನಿಯಮಗಳಿಗನುಸಾರವಾಗಿ ನಡೆಯುತ್ತಿರುವುದನ್ನು ದೇವರು ಎಂದು ಗುರುತಿಸಿ ನಂಬಲಾಗಿದೆ ಹೊರತು ಸೀಮಿತ ಮೂಢನಂಬಿಕೆಗಳನ್ನು ಧರ್ಮ ಎಂದು ಪರಿಗಣಿಸಿರುವುದರ ಪರಿಣಾಮ, ಅಶಾಂತಿಯಿಂದ ಬಳಲುತ್ತಿರುವ ಭೂಮಿ.

ಬೆಂಗಳೂರು **ನರೇಂದ್ರ ಸಿರಕಜೆ**

**ಭಾವೆಯವರ 'ದೇವರು'**

ನಾವು ಸಾಧಕರನ್ನೇ ದೇವರು ಮಾಡಿ ಅವರ ಚಿಂತನೆಗಳನ್ನು ಗಾಳಿಗೆ ತೂರಿ ಅವರಿಗೊಂದು ಮಂದಿರ ಕಟ್ಟಿ ಪೂಜೆ ಮಾಡಲು ಪ್ರಾರಂಭಿಸುತ್ತೇವೆ. ಜಾತಿಗೊಂದು ಮತಕ್ಕೊಂದು ದೇವರುಗಳನ್ನು ಸೃಷ್ಟಿಸಿಕೊಂಡು ಕೋಟ್ಯಾಂತರ ರೂಪಾಯಿ ವೆಚ್ಚದಲ್ಲಿ ದೇವಸ್ಥಾನಗಳ ನಿರ್ಮಾಣ ಮಾಡುವುದರಲ್ಲೇ ತಲ್ಲೀನರಾಗಿದ್ದೇವೆ. ಬಡವನಿಗೆ ಬದುಕಲು ಸೂರಿಲ್ಲವೆಂಬ ವಾಸ್ತವವನ್ನು ಮರೆತು ಕಲ್ಲುದೇವರಿಗೆ ವಜ್ರ, ವೈಢೂರ್ಯ, ಧನ, ಕನಕಗಳನ್ನು ಅರ್ಪಿಸಿ ಧನ್ಯರಾದೆವೆಂಬ ಭ್ರಮೆಯಲ್ಲಿದ್ದೇವೆ.

ಇಲ್ಲಿ ಮೊದಲು ಮಾನವನ ಬದುಕು ಮುಖ್ಯ. ಆ ನಂತರ ಉಳಿದ ಆತನ ಆಶೋತ್ತರಗಳು. ಆದರೆ ನಾವು ಬದುಕನ್ನೇ ಮರೆತು ಬೇರೇನನ್ನೋ ಹುಡುಕುತ್ತಿದ್ದೇವೆ.

ದೇವರು ಬೇಕೇ ಬೇಕು ಎನ್ನುವವರು ಏಕೆ 'ನಿರಾಕಾರ' ಕಲ್ಪನೆಯತ್ತ ಒಲವು ತೋರಬಾರದು ?

ಶಿವಮೊಗ್ಗ **ಎಂ. ನವೀನ್‌ಕುಮಾರ್**

**ಮಂಗಳೂರಿನ ಇಲಿಗಳು**

ಅನೇಕರು ಕಥೆಯನ್ನು ಪ್ರಶಂಸಿಸಿದ್ದಾರೆ. ಈ ಪ್ರಶಂಸೆ ನನಗಲ್ಲ, ಜೆ.ಬಿ.ಎಸ್. ಹಾಲ್ಡೇನ್‌ಗೆ ಸಲ್ಲಬೇಕು. ಇದನ್ನು ಕನ್ನಡಕ್ಕೆ ಅನುವಾದ ಮಾಡಲು ಪ್ರೇರೇಪಣೆ ಸಿಕ್ಕಿದ್ದು ಪಾತಾಳದಲ್ಲಿ ಪಾಪಚ್ಚಿ ಮತ್ತು ಬೊಮ್ಮನಹಳ್ಳಿಯ ಕಿಂದರಿಜೋಗಿ ಇಂತಹ ಕೃತಿಗಳಿಂದ.

ಕಥೆಯೊಡನೆ ಇರುವ ಚಿತ್ರಗಳನ್ನೂ ಹಾಲ್ಡೇನ್ ರಚಿಸಿದ್ದಾರೆ ಎಂಬುದು ಅತಿ ಮುಖ್ಯ. ಈ ಅಂಶ ಕಥೆಯ ಕೊನೆಯಲ್ಲಿ ಸೂಚಿಸಬೇಕಾಗಿತ್ತು. ಬಿಟ್ಟು ಹೋದುದಕ್ಕೆ ಕ್ಷಮೆ ಇರಲಿ.

ಬೆಂಗಳೂರು **ಬಿ. ಎಸ್. ಶೈಲಜಾ**

'ಮಂಗಳೂರಿನ ಇಲಿಗಳು...' ಕಥೆ ಓದಿ ಅವರಲ್ಲಿರುವ ಆಳದ ಹಾಸ್ಯ ಪ್ರಜ್ಞೆ ಹೀಗೆ ಆಗಾಗ ಓದಿಗೆ ಗ್ರಾಸವೊದಗಿಸುತ್ತಿರಲಿ ಎಂದೆನಿಸಿತು. ಅಂದ ಹಾಗೆ, ಬಹುಕೋಟಿ ಅಕ್ಕಿ ಹಗರಣ ಮೊದಲು ಪತ್ತೆಯಾಗಿದ್ದು ಮಂಗಳೂರಿನಲ್ಲಿ ! ಈಗ ಮುಗ್ಗಲು ಹಿಡಿದಿರುವ ಆ ಅಕ್ಕಿಯನ್ನು ಇಲ್ಲಿಯ 'ಹೆಗ್ಗಣ'ಗಳು ಸಹ ಮೂಸಿ ನೋಡುತ್ತಿಲ್ಲ. ಕೋಸಯ್ಯನ ಮಕ್ಕಳಾದರೂ ಏನಾದರೂ ಪ್ಲಾನ್ ಮಾಡಿ ಹೆಗ್ಗಣಗಳಿಗೆ ಮದ್ದಿಡುವಂತಾಗಿದ್ದರೆ...

ಧನ್ಯವಾದಗಳು, ಡಾ|| ಶೈಲಜಾರಿಗೂ, ಹೊಸತುವಿಗೂ.

ಮಂಗಳೂರು **ಭುವನೇಶ್ವರಿ ಹೆಗಡೆ**

ದೇಶ ಭಾಷೆಗಳ ಎಲ್ಲೆಗಳು, ಅವುಗಳ ಮೀರಿನಿಂತ ಇಲಿಗಳು, ಸ್ಥಂಭಿಸುವ ವ್ಯವಸ್ಥೆಗೊಂದು ಆಲಂಬನೆ ನೀಡುವ ನೇಟಿವಿಟಿಯ ಕುಟುಂಬ, ಅದಕ್ಕೊಂದಿಷ್ಟು ಅಂದದ ನೆರಿಗೆಗಳ ಸೊಗಸು, ಒಂದು ಮೂಲದ ಸಮಸ್ಯೆಯ ಪರಿಹಾರ, ಇನ್ನೊಂದು ತೀರಕೆ ಸಿಗುವ ಧಕ್ಕೆ; ಆದರೂ ತನಗರಿವಿಲ್ಲದೆಯೇ ಅದರಿಂದ ಲಾಭ ಪಡೆದವನ ಹಿತಕ್ಕೆ ವಿಪರೀತಾರ್ಥಗಳ ಗೋಜಿಲ್ಲದೆ ಅದೇನೋ ನಿಗೂಢದ ಪರಿ ತೆರೆದಿಡುತ್ತಿದೆ ಈ ಕಥೆ ಅಂತನಿಸಿತು.

ಪಾವಗಡ **ಕೆ. ಪುರುಷೋತ್ತಮ ರೆಡ್ಡಿ**

ಪ್ರೊ|| ಹಿರೇನ್ ಮುಖರ್ಜಿಯವರ ಬಗೆಗಿನ ಲೇಖನವನ್ನೋದಿ ಅವರ ಅಮೂಲ್ಯವಾದ ಪುಟ್ಟ ಪುಸ್ತಕ 'Vivekananda and Indian Freedom' ನೆನಪಾಯಿತು. ವಿವೇಕಾನಂದರ ಬಗೆಗೆ ಅವರು ಬರೆದಿರುವುದು ಹಾಗಿರಲಿ, 'ಶ್ರೀ ರಾಮಕೃಷ್ಣಕಥಾಮೃತ' ವನ್ನು ಕುರಿತು ಅವರು ಬರೆದಿರುವ ಈ ಮಾತುಗಳು ನನಗೆ ತುಸು ಅಚ್ಚರಿಯನ್ನುಂಟು ಮಾಡಿದುವು : ''ಅವರ ಗುರುವರ್ಯನ ವಾಣಿಯ ಬಗೆಗೆ ಬಂಗಾಳಿಯಲ್ಲಿರುವ 'ಮ' ಅವರ ಪುಸ್ತಕದಂಥ ಬೇರೊಂದು ಪುಸ್ತಕ ಸಮಸ್ತ ಸಾಹಿತ್ಯದಲ್ಲಿ ಎಲ್ಲಿದೆ?''

ಮೈಸೂರು **ಸಿಪಿಕೆ**

''ತುಳಿತಕ್ಕೊಳಗಾಗುವ ವ್ಯಕ್ತಿ (ಗಂಡಿರಲಿ, ಹೆಣ್ಣಿರಲಿ)ಗೆ ಎಲ್ಲಿಯ ತನಕ ಸಿಡಿದೇಳುವ, ಧ್ವನಿ ಎತ್ತಿ ಮಾತನಾಡುವ ಶಕ್ತಿ ಬರುವುದಿಲ್ಲವೋ, ಅಲ್ಲಿಯ ತನಕ ಈ ಸಮಾಜದಲ್ಲಿ ದಮನಕಾರಿ ಶಕ್ತಿಗಳು ದಬ್ಬಾಳಿಕೆ ನಡೆಸುತ್ತಲೇ ಇರುತ್ತವೆ. ಅಂತಹ ಸಂದರ್ಭವನ್ನು ಕಣ್ಣಾರೆ ಕಂಡ ಅಂಬೇಡ್ಕರರು ಹೊಸದಿಕ್ಕನ್ನು ತೋರಿಸಲು ಪ್ರಯತ್ನಿಸಿದವರು. ಇವರು ಮಹಿಳೆಯರ ಸಮಾನತೆಯ ಬಗ್ಗೆ ಪಾರ್ಲಿಮೆಂಟಿನಲ್ಲಿ ಪ್ರತಿಪಾದಿಸಿದಾಗ ಬೆಂಬಲ ಸಿಗಲಿಲ್ಲವೆಂಬ ಕಾರಣಕ್ಕೆ ರಾಜಿನಾಮೆ ಸಲ್ಲಿಸಿದವರು. ಮಾನವಿಕ ನೆಲೆಯಲ್ಲಿ ಚಿಂತಿಸುವ ಮನಸ್ಸು ಅವರದಲ್ಲವೇ ! ಅದಕ್ಕಾಗಿಯೇ ಅವರು ಮಹನೀಯರೆನ್ನಿಸಿಕೊಳ್ಳು ವಂಥವರು. ಮಂಗಳಾ ಅವರ ಲೇಖನ ಚೆನ್ನಾಗಿದೆ.

ಮದರಕಲ್ **ರಾಮರೆಡ್ಡಿ. ಜಿ.**

ದಲಿತ ಚಳುವಳಿಯ ಹೋರಾಟದ ಹಾಡು ಗಳನ್ನು ಸಂಗ್ರಹಿಸಿ ಪ್ರಕಟಿಸುವ ಯೋಜನೆ ನಮ್ಮದಾಗಿದೆ. ದಲಿತ ಹಾಗೂ ದಲಿತ ಪರ ಸಾಹಿತಿಗಳು, ಕಲಾವಿದರು, ಚಿಂತಕರು, ಹೋರಾಟಗಾರರು, ಸಹಾನುಭೂತಿ ಉಳ್ಳವರು ತಮ್ಮ ಅಥವಾ ತಮ್ಮಲ್ಲಿರುವ ಹೋರಾಟದ ಹಾಡುಗಳನ್ನು ಕಳಿಸಬೇಕಾಗಿ ವಿನಂತಿ.

***ಡಾ|| ಬಿ. ಎಂ. ಪುಟ್ಟಯ್ಯ**, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ - ೫೮೩ ೨೭೬*

# ಕರ್ನಾಟಕದ ಗಡಿ ಮತ್ತು ಜಲ ವಿವಾದಗಳು

ಕರ್ನಾಟಕ ಏಕೀಕರಣವಾಗಿ ಅರ್ಧ ಶತಮಾನವೇ ಸಮೀಪಿಸುತ್ತಿದ್ದರೂ ಗಡಿ ವಿವಾದ, ನದಿ ನೀರಿನ ಹಂಚಿಕೆ ವಿಚಾರಗಳು ಇನ್ನೂ ಜೀವಂತವಾಗಿ ಉಳಿದು ರಾಜ್ಯದ ಪ್ರಗತಿಗೆ ತೊಡಕಾಗಿವೆ. ದಕ್ಷಿಣ ಭಾರತದ ಎಲ್ಲರೂ ಪೂಜಿಸುವ ಕಾವೇರಿ, ಈ ರಾಜ್ಯಗಳನ್ನು ಒಂದುಗೂಡಿಸುವ ಸಾಧನವಾಗಬೇಕಿತ್ತು. ತಮಿಳುನಾಡಿನ 'ದೊಡ್ಡಣ್ಣ' ಧೋರಣೆಯಿಂದಾಗಿ ಒಂದೆರಡು ದಶಕಗಳಿಂದ ಕಾವೇರಿ ನೀರಿಗಾಗಿ ಕಾವೇರಿದ ಕಾದಾಟ ಕರ್ನಾಟಕ-ತಮಿಳುನಾಡುಗಳಲ್ಲಿ ವಾರ್ಷಿಕ ವಿಧಿಯಾಗಿಬಿಟ್ಟಿದೆ. ಇದರ ಜೊತೆಗೆ ಕೃಷ್ಣಾ, ಭೀಮಾ, ಮಹಾದಾಯಿ ನದಿಗಳ ವಿವಾದದಲ್ಲಿ ಕರ್ನಾಟಕ ಬಸವಳಿದು ಹೋಗಿದೆ. ಇದರಾಚೆಗೆ ಮಹಾರಾಷ್ಟ್ರ ಬೆಳಗಾವಿಯನ್ನು ಕಬಳಿಸಲು ಯತ್ನಿಸುತ್ತಿದೆ. ಕಾಸರಗೋಡು ಕೇರಳದಲ್ಲೇ ಉಳಿದಿದೆ. ಬೆಂಗಳೂರನ್ನೇ ಕೇಂದ್ರಾಡಳಿತ ಪ್ರದೇಶ ಮಾಡಿ ಎಂಬ ಧ್ವನಿ ಇದೆ.

ಹತ್ತನೇ ಶತಮಾನದಲ್ಲಿ ಕಾವೇರಿಯಿಂದ ಗೋದಾವರಿಯವರೆಗಿದ್ದ ಕರ್ನಾಟಕ ಇಂದು ಎಷ್ಟಿದೆ ಎಂಬುದು ಎಲ್ಲರಿಗೂ ತಿಳಿದಿದೆ. ರಾಜ್ಯಗಳ ಗಡಿ ಬದಲಾದಂತೆ ನದಿಗಳ ಪಾತ್ರ ಬದಲಾಗಲು ಸಾಧ್ಯವಿಲ್ಲ. ಹಾಗಾಗಿ ನದಿ ನೀರಿನ ವಿವಾದ ಒಂದು ಚಾರಿತ್ರಿಕ ಅನಿವಾರ್ಯ. 'ನದಿಗಳ ನೀರಿನ ಹಂಚಿಕೆಯಿಂದ ಮೂರನೇ ಜಾಗತಿಕ ಯುದ್ಧ ಉಂಟಾದೀತು' ಎಂದು ಕೆನಡಾ ಮಾಜಿ ಪ್ರಧಾನಿ ಲೆಸ್ಟರ್ ಬ್ರೌನ್ ಎಚ್ಚರಿಸಿದ್ದಾರೆ. ಒಂದು ರೀತಿಯಲ್ಲಿ ನದಿ ನೀರಿಗೆ ಕದನವೇ ನಡೆಯುತ್ತದೆ.

ಕಾವೇರಿ ನದಿ ನೀರಿನ ವಿವಾದ ಸಾವಿರ ವರ್ಷಗಳಷ್ಟು ಹಳೆಯದು. ಹನ್ನೊಂದನೇ ಶತಮಾನದಲ್ಲಿ ಚೋಳರು ಕಾವೇರಿ ನದಿಗೆ ಕಟ್ಟೆ ಕಟ್ಟಿದ್ದರೆ, ಅದನ್ನು ಒಡೆದು ಹಾಕಲಾಗುವುದು ಎಂದು ಹೇಳಿದ ಉಲ್ಲೇಖವಿದೆ. ೧೩ನೇ ಶತಮಾನದ ಕನ್ನಡ ವ್ಯಾಕರಣ ಗ್ರಂಥ ಶಬ್ದಮಣಿದರ್ಪಣದಲ್ಲಿ 'ಕಾವೇರಿಯ ಕಾಲನ್ ಆತಿಗುಳನೇಂ ಕಡಂಗೊಂಡನೋ ಬಡ್ಡಿಂಗೊಂಡನೋ' ಎಂಬ ಮಾತಿದೆ. ಇದರ ಅರ್ಥ ಕಾವೇರಿ ನೀರಿನ ಹರಿವನ್ನು ತಮಿಳ ಎರವಲು ಸಾಲವಾಗಿ ತೆಗೆದುಕೊಂಡಿದ್ದಾನೋ ಇಲ್ಲವೇ ಬಡ್ಡಿಸಹಿತ ಸಾಲಾಗಿ ಪಡೆದಿದ್ದಾನೆಯೋ! ಎಂಬಲ್ಲಿ ಅಂದೂ ತಮಿಳರು ಕಾವೇರಿ ನೀರನ್ನು ಸ್ವೇಚ್ಛೆಯಿಂದ ಬಳಸುತ್ತಿದ್ದುದರ ಸೂಚನೆಯಿದೆ. ಇತಿಹಾಸದ ಪುಟಗಳಲ್ಲಿ ಇಂತಹ ಹಲವು ಉಲ್ಲೇಖಗಳು ಸಿಗುತ್ತವಾದರೂ, ಕಾವೇರಿ ನೀರಿನ ವಿಚಾರದಲ್ಲಿ ಕರ್ನಾಟಕವನ್ನು ಶಾಶ್ವತ ಅನ್ಯಾಯದ ಕೂಪಕ್ಕೆ ತಳ್ಳಿದ್ದು ಬ್ರಿಟಿಷರ ಆಡಳಿತ.

ಅನಾದಿ ಕಾಲದಿಂದಲೂ ತಮಿಳುನಾಡು ಕಾವೇರಿ ನೀರಿನ ಸಿಂಹಪಾಲು ಪಡೆಯುತ್ತಲೇ ಬಂದಿದೆ. ಅದಕ್ಕೆ ಐತಿಹಾಸಿಕ ಕಾರಣವಿದೆ. ೧೭೯೯ರಲ್ಲಿ ಟಿಪ್ಪು ಪತನದ ನಂತರ ಮೈಸೂರು ಸಂಸ್ಥಾನ ಬ್ರಿಟಿಷರ ಪಾಲಾಯಿತು. ಅಂದಿನಿಂದ ಮೈಸೂರಿನ ಎಲ್ಲ ಯೋಜನೆಗಳಿಗೂ ಆಂಗ್ಲರು ಮದ್ರಾಸ್ ಗವರ್ನರ್ ಮೂಲಕ ತಡೆ ಹಾಕುತ್ತಾ ಬಂದರು. ಅದಕ್ಕೆ ಕಾರಣ ಬ್ರಿಟಿಷರ ಸಾಮ್ರಾಜ್ಯ ವಿಸ್ತರಣಾ ದಾಹಕ್ಕೆ ಟಿಪ್ಪುಸುಲ್ತಾನ್ ಪ್ರತಿರೋಧ ವ್ಯಕ್ತಪಡಿಸಿದ್ದೇ ಆಗಿದೆ. ಮೈಸೂರು ಅರಸರು ಕಾವೇರಿ ನೀರಿನ ಬಳಕೆಗೆ ಮಾಡಿದ ಪ್ರಯತ್ನಗಳೆಲ್ಲ ವಿಫಲವಾದವು. ೧೮೮೯ರಲ್ಲಿ ದಿವಾನ್ ಕೆ. ಶೇಷಾದ್ರಿ ಅಯ್ಯರ್ ಕಾವೇರಿ ಯೋಜನೆ ಬಗ್ಗೆ ಭಾರತ ಸರ್ಕಾರಕ್ಕೆ ಪತ್ರ ಬರೆದರು. ಮದ್ರಾಸ್ ಸರ್ಕಾರ 'ಅನಾದಿ ಕಾಲದಿಂದ ಬಳಸಿಕೊಂಡು ಬರುತ್ತಿರುವ ಕಾವೇರಿ ನೀರಿಗೆ ಮೈಸೂರು ಯೋಜನೆ ಅಡ್ಡಿ ಬರುತ್ತದೆ' ಎಂದು ವಿರೋಧಿಸಿತು. ಪ್ರತಿಯಾಗಿ ಅಯ್ಯರ್ ೧೮೮೯ರ ಸೆಪ್ಟೆಂಬರ್ ೭ರಂದು ಸುದೀರ್ಘ ಪತ್ರ ಬರೆದು ಕಾವೇರಿ ನದಿಗೆ ನೈಸರ್ಗಿಕವಾಗಿ ಬರುವ ನೀರನ್ನು ಬಳಸಲು ಮದ್ರಾಸ್ ಅಡ್ಡಿಬರಬಾರದು ಎಂದು ಸಮರ್ಥವಾಗಿ ಉತ್ತರಿಸಿದರು. ಆದರೂ ಮೈಸೂರು ಸೋತಿತು. ಅದಕ್ಕೆ ಕಾರಣ ಮೈಸೂರು ಬ್ರಿಟಿಷ್ ರೆಸಿಡೆಂಟರಿಂದ ನಿಯಂತ್ರಿಸಲ್ಪಡುತ್ತಿತ್ತು.



■ ರಾ. ನಂ. ಚಂದ್ರಶೇಖರ್

ಕಾವೇರಿ ನದಿ ನೀರಿನ ವಿವಾದ ಸಾವಿರ ವರ್ಷಗಳಷ್ಟು ಹಳೆಯದು. ಹನ್ನೊಂದನೇ ಶತಮಾನದಲ್ಲಿ ಚೋಳರು ಕಾವೇರಿ ನದಿಗೆ ಕಟ್ಟೆ ಕಟ್ಟಿದ್ದರೆ, ಅದನ್ನು ಒಡೆದು ಹಾಕಲಾಗುವುದು ಎಂದು ಹೇಳಿದ ಉಲ್ಲೇಖವಿದೆ. ೧೩ನೇ ಶತಮಾನದ ಕನ್ನಡ ವ್ಯಾಕರಣ ಗ್ರಂಥ ಶಬ್ದಮಣಿದರ್ಪಣದಲ್ಲಿ 'ಕಾವೇರಿಯ ಕಾಲನ್ ಆತಿಗುಳನೇಂ ಕಡಂಗೊಂಡನೋ ಬಡ್ಡಿಂಗೊಂಡನೋ' ಎಂಬ ಮಾತಿದೆ. ಇದರ ಅರ್ಥ ಕಾವೇರಿ ನೀರಿನ ಹರಿವನ್ನು ತಮಿಳ ಎರವಲು ಸಾಲವಾಗಿ ತೆಗೆದುಕೊಂಡಿದ್ದಾನೋ ಇಲ್ಲವೇ ಬಡ್ಡಿಸಹಿತ ಸಾಲಾಗಿ ಪಡೆದಿದ್ದಾನೆಯೋ! ಎಂಬಲ್ಲಿ ಅಂದೂ ತಮಿಳರು ಕಾವೇರಿ ನೀರನ್ನು ಸ್ವೇಚ್ಛೆಯಿಂದ ಬಳಸುತ್ತಿದ್ದುದರ ಸೂಚನೆಯಿದೆ. ಇತಿಹಾಸದ ಪುಟಗಳಲ್ಲಿ ಇಂತಹ ಹಲವು ಉಲ್ಲೇಖಗಳು ಸಿಗುತ್ತವಾದರೂ, ಕಾವೇರಿ ನೀರಿನ ವಿಚಾರದಲ್ಲಿ ಕರ್ನಾಟಕವನ್ನು ಶಾಶ್ವತ ಅನ್ಯಾಯದ ಕೂಪಕ್ಕೆ ತಳ್ಳಿದ್ದು ಬ್ರಿಟಿಷರ ಆಡಳಿತ.

ಪ್ರತಿಯಾಗಿ ಮದ್ರಾಸ್ ಗೌರ್ನರ್ ಅವರಿಂದ ಆಳಲ್ಪಡುತ್ತಿತ್ತು. ರೆಸಿಡೆಂಟನ ಸ್ಥಾನಮಾನ ಗೌರ್ನರ್ ಮುಂದೆ ಸಾಮಂತನದ್ದಾಗಿದ್ದರಿಂದ ಮೈಸೂರಿನ ಮಾತಿಗೆ ಬೆಲೆ ಸಿಗಲಿಲ್ಲ. ಆದರೂ ೧೮೯೨ರಲ್ಲಿ "Rules defining limits within which no new irrigation works are to be constructed by Mysore without previous reference to Madras Government" ಎಂಬ 'ಒಪ್ಪಂದ'ವಾಯಿತು. ಇದು ಒಪ್ಪಂದದ ಹೆಸರಿನಲ್ಲಿ ಮೈಸೂರಿನ ಮೇಲೆ ಹೇರಿದ ಮಿತಿಗಳ ನಿಯಮಾವಳಿಗಳಾಗಿದ್ದವು.

ಎಂ. ವಿಶ್ವೇಶ್ವರಯ್ಯನವರು ಮುಖ್ಯ ಎಂಜಿನಿಯರ್ ಆದಮೇಲೆ ೧೯೧೧ರಲ್ಲಿ ಕನ್ನಂಬಾಡಿ ಕಟ್ಟೆ ಕಟ್ಟುವ ಪ್ರಸ್ತಾಪವನ್ನು ಮುಂದಿಟ್ಟರು. ೧೮೯೨ರ ಒಪ್ಪಂದದ ೩ನೇ ಅನುಚ್ಛೇದದ ಪ್ರಕಾರ ಅನುಮತಿ ನಿರಾಕರಿಸಿ, ಅದೇ ಒಪ್ಪಂದದ ೪ನೇ ಅನುಚ್ಛೇದದನ್ವಯ ಈ ವಿವಾದವನ್ನು ಎಚ್. ಡಿ. ಗ್ರಿಫಿನ್ ನೇತೃತ್ವದಲ್ಲಿ ಪಂಚಾಯಿತ್ಗೆ ಒಪ್ಪಿಸಿತು. ಪಂಚಾಯ್ತಿ ನೀಡುವ ತೀರ್ಮಾನವೇ ಅಂತಿಮವೆಂದೂ, ಇದಕ್ಕೆ ಉಭಯರಾಜ್ಯಗಳೂ ಬದ್ಧವಾಗಿರಬೇಕೆಂದೂ, ತೀರ್ಪಿನ ವಿರುದ್ಧ ಮೇಲ್ಮನವಿಗೆ ಅವಕಾಶ ಇಲ್ಲವೆಂದೂ ಸ್ಪಷ್ಟಪಡಿಸಿತು. ವಿಶ್ವೇಶ್ವರಯ್ಯನವರು ವೈಜ್ಞಾನಿಕ ತಳಹದಿಯಲ್ಲಿ ಅಣೆಕಟ್ಟಿನ ಅಗತ್ಯದ ಬಗ್ಗೆ ಸಮರ್ಥವಾಗಿ ಪ್ರತಿಪಾದಿಸಿದರು. ೧೯೧೪ರಲ್ಲಿ ಗ್ರಿಫಿನ್ ಅವರು ಮೈಸೂರಿನ ನ್ಯಾಯಯುತ ಪ್ರಸ್ತಾವನೆ ಒಪ್ಪಿ ವರದಿ ನೀಡಿದರು. ಕೇಂದ್ರ ಸರ್ಕಾರ ಅಣೆಕಟ್ಟಿನ ನಿರ್ಮಾಣಕ್ಕೆ ಅನುಮತಿ ನೀಡಿತು. ಮದ್ರಾಸ್‌ಗೆ ಇದು ಸಹ್ಯವಾಗಲಿಲ್ಲ. ಕಾನೂನಿನ ಚೌಕಟ್ಟಿನಲ್ಲಿ ಪ್ರಶ್ನಿಸಲು ಸಾಧ್ಯವಿಲ್ಲದ್ದರಿಂದ, ರಾಜಕೀಯ ತಂತ್ರಗಾರಿಕೆ, ಪ್ರಭಾವಗಳನ್ನು ಬಳಸಿ ಲಂಡನ್ನಿನಲ್ಲಿದ್ದ ಸೆಕ್ರೇಟರಿ ಆಫ್ ಸ್ಟೇಟ್ಸ್‌ಗೆ ಅಪೀಲು ಒಯ್ದಿತು. ಇದರ ಪರಿಣಾಮವಾಗಿ ೧೮-೧೨-೧೯೨೪ರಂದು ಮೈಸೂರಿನ ಮೇಲೆ ೫೦ ವರ್ಷಗಳು ಚಾಲ್ತಿಯಲ್ಲಿರುವ ಎರಡನೆಯ ಒಪ್ಪಂದವನ್ನು ಹೇರಲಾಯಿತು. ಅಣೆಕಟ್ಟಿನ ಎತ್ತರ ೧೩೨ ಅಡಿಗಳಿಂದ ೧೨೪ ಅಡಿಗಳಿಗೆ ಇಳಿಯಿತು. 'ಕೆಳ ಕಣಿವೆ ರಾಜ್ಯವು ಮೇಲ್ಕಣಿವೆ ರಾಜ್ಯದ ನೀರಿನ ಬಳಕೆ ಹಕ್ಕನ್ನು ಮೊಟಕುಗೊಳಿಸಲಾಗದು' ಎಂಬ ಅಂತರರಾಷ್ಟ್ರೀಯ ಜಲನೀತಿಯನ್ನು ಉಲ್ಲಂಘಿಸಿದ ಈ ಒಪ್ಪಂದವನ್ನು ವಿಶ್ವವಿಖ್ಯಾತ ಜಲತಜ್ಞ F. J. ಬರ್ಬರ್ 'RIVERS IN INTERNATIONAL LAW' ಪುಸ್ತಕದಲ್ಲಿ "ಕಾವೇರಿ ನದಿ ನೀರಿನ ಹಂಚಿಕೆ ಬಗ್ಗೆ ೧೯೨೪ರಲ್ಲಿ ಆದ ಒಪ್ಪಂದವು ಕಾನೂನಿನ ಚೌಕಟ್ಟಿನಲ್ಲಿ ಆಗಿಲ್ಲ; ಬ್ರಿಟಿಷರ ಒತ್ತಡದಿಂದ ಆದದ್ದು" ಎಂದಿದ್ದಾರೆ.

೫೦ ವರ್ಷಗಳ ಅಸ್ತಿತ್ವದಲ್ಲಿರುವ ೧೯೨೪ರ ಒಪ್ಪಂದ ಮೈಸೂರಿಗೆ ೪೧.೫ TMC ಸಾಮರ್ಥ್ಯದ ಕನ್ನಂಬಾಡಿ ಅಣೆಕಟ್ಟೆಗೆ ಅವಕಾಶ ನೀಡಿ ಇದರ ಮೂಲಕ ೧.೨೫ ಲಕ್ಷ ಎಕರೆಗೆ ನೀರಾವರಿ ಕಲ್ಪಿಸಲು ಆಸ್ಪದ ನೀಡಿತು. ಪ್ರತಿಯಾಗಿ ಮದ್ರಾಸ್‌ಗೆ ಮೆಟ್ಟೂರಿನಲ್ಲಿ ೯೩.೫ TMC ಸಾಮರ್ಥ್ಯದ ಗ್ರಾಂಡ್ ಅಣೆಕಟ್ಟೆಗೆ ಅನುಮತಿಸಿ, ೩.೧ ಲಕ್ಷ ಎಕರೆಗೆ ನೀರಾವರಿ ಕಲ್ಪಿಸಲು ಅವಕಾಶ ಮಾಡಿಕೊಟ್ಟಿತು.

ಭಾಷಾವಾರು ಪ್ರಾಂತ್ಯಗಳ ರಚನೆಯಾದ ನಂತರ ಕಾವೇರಿ ಕಣಿವೆ ಸ್ವರೂಪ ಬದಲಾಗಿದ್ದು ಮದ್ರಾಸ್ ಪ್ರಾಂತ್ಯದಲ್ಲಿದ್ದ ಕೊಳ್ಳೇಗಾಲ ಮತ್ತು ಪ್ರತ್ಯೇಕ ರಾಜ್ಯವಾಗಿದ್ದ ಕೊಡಗು ಕರ್ನಾಟಕದಲ್ಲಿ ವಿಲೀನವಾದರೆ, ಮಲಬಾರ್ ಪ್ರದೇಶ ಕೇರಳಕ್ಕೆ ಸೇರಿದೆ. ಈ ಬದಲಾವಣೆ ಗಮನಿಸದೆ, ಕಾವೇರಿ ವಿವಾದ ಚರ್ಚಿಸುವುದು ಸರಿಯಲ್ಲ; ಜೊತೆಗೆ ಸ್ವತಂತ್ರ ಭಾರತದಲ್ಲಿ ಎಲ್ಲ ರಾಜ್ಯಗಳಿಗೂ ಸಮಾನ ಅವಕಾಶ ಹಕ್ಕಿರುವ ಹಿನ್ನೆಲೆಯಲ್ಲಿ ಬ್ರಿಟಿಷರು ೧೯೨೪ರಲ್ಲಿ ಹೇರಿದ ಪಕ್ಷಪಾತದ ಒಪ್ಪಂದವನ್ನು ಮುಂದುವರಿಸುವುದು ಪ್ರಜಾಪ್ರಭುತ್ವಕ್ಕೆ ಅಪಮಾನ ಮಾಡಿದಂತೆ ಎಂದು ೧೯೭೦ರಲ್ಲಿ ಕರ್ನಾಟಕ ಘೋಷಿಸಿತು. ಇದನ್ನೊಪ್ಪದ ತಮಿಳುನಾಡು ಎಲ್ಲ ಕಾಲಕ್ಕೂ ೧೮೯೨, ೧೯೨೪ರ ಒಪ್ಪಂದಗಳೇ ಆಧಾರವಾಗಿರಬೇಕೆಂದು ಹೇಳಿ, ೧೯೨೪ರ ಒಪ್ಪಂದದ ಅವಧಿ ಮುಗಿದ ನಂತರವೂ ರಾಜ್ಯಕ್ಕೆ ಬೇಕಾದ ಕಾವೇರಿ ನೀರನ್ನೊದಗಿಸಲು ಶಾಶ್ವತ ನ್ಯಾಯ ಮಂಡಳಿ ರಚಿಸಲು ಆಗ್ರಹಿಸಿತು. ಕರ್ನಾಟಕ ಮಾತುಕತೆಯ ಮೂಲಕ ಪರಿಹಾರ ಕಂಡುಕೊಳ್ಳಲು ಒಲವು ತೋರಿತು. ಇದನ್ನು ೧೯೭೨ರಲ್ಲಿ ನಡೆದ ದಕ್ಷಿಣ ರಾಜ್ಯಗಳ ಮುಖ್ಯಮಂತ್ರಿಗಳ ಸಭೆ ಅನುಮೋದಿಸಿತು. ಆಗ ತಮಿಳುನಾಡು ಸಮಗ್ರ ಪರಿಹಾರ ರೂಪಿಸುವ ಪ್ರಯತ್ನಕ್ಕೆ ಒಪ್ಪಿಕೊಂಡಿತು. ಅದರಂತೆಯೇ ೧೯೭೩ರಲ್ಲಿ ಗುಜರಾತಿನ ಸಿ. ಸಿ. ಪಟೇಲ್ ನೇತೃತ್ವದಲ್ಲಿ 'ಕಾವೇರಿ ಮಾಹಿತಿ ಸಂಗ್ರಹಣ' ಅಧ್ಯಯನ ತಂಡ ನೇಮಕವಾಯಿತು. ಈ ತಂಡದ ಶಿಫಾರಸುಗಳನ್ನು ಅನುಸರಿಸಿ ಕೇಂದ್ರ ಒಂದು ಸಲಹೆ ನೀಡಿತು. ಅದನ್ನು ಎರಡೂ ರಾಜ್ಯಗಳು ನಿರಾಕರಿಸಿದವು.

೧೯೭೬ರಲ್ಲಿ ಕೇಂದ್ರ ಸರ್ಕಾರ ಇನ್ನೊಂದು ತಜ್ಞರ ಸಮಿತಿ ರಚಿಸಿತು. ಆ ಸಮಿತಿಯು ತಮಿಳುನಾಡು-ಕರ್ನಾಟಕಗಳು ಅನುಕ್ರಮವಾಗಿ ೧೦೦ ಮತ್ತು ೨೫ TMCಗಳನ್ನು ಉಳಿತಾಯ ಮಾಡಿ, ಆ ನೀರಿನ ಹಂಚಿಕೆಗೆ 'ಕಾವೇರಿ ಕಣಿವೆ ಪ್ರಾಧಿಕಾರ' ರಚಿಸಲು ಸೂಚಿಸಿತ್ತು. ವರದಿಯ ಕರಡು ಒಪ್ಪಂದಕ್ಕೆ ನಾಲ್ಕು ರಾಜ್ಯಗಳ ಪ್ರತಿನಿಧಿಗಳೂ ಸಹಿ ಹಾಕಿದ್ದರು. ಈ ಬಗ್ಗೆ ಸಂಸತ್ತಿನಲ್ಲಿ ಸಚಿವರು ಹೇಳಿಕೆಯನ್ನು ನೀಡಿದ್ದರು. ಇದರನ್ವಯ ಕೇರಳಕ್ಕೆ ೩೩, ಕರ್ನಾಟಕಕ್ಕೆ ೮೫, ತಮಿಳುನಾಡಿಗೆ ೫ ಮತ್ತು ಪಾಂಡಿಚೆರಿಗೆ ೨ TMCಗಳ ನೀರು ಹಂಚಿಕೆ ಆಗಬೇಕಿತ್ತು. ಈ ಒಪ್ಪಂದವಾದಾಗ ತಮಿಳುನಾಡಿನಲ್ಲಿ ಚುನಾಯಿತ ಸರ್ಕಾರವಿರಲಿಲ್ಲ ಎಂಬ ನೆಪವೊಡ್ಡಿ ೧೯೭೮ರಲ್ಲಿ ಆ ವರದಿಯನ್ನು ತಿರಸ್ಕರಿಸಿತು. ಮಾತುಕತೆ ಮೂಲಕ ಪರಿಹಾರ ಕಂಡುಕೊಳ್ಳುವ ಪ್ರಕ್ರಿಯೆಯಿದ್ದಾಗಲೇ ತಮಿಳುನಾಡು ೧೯೮೩ರಲ್ಲಿ ಹಿಂಬಾಗಿಲು ಮೂಲಕ ಸುಪ್ರೀಂಕೋರ್ಟ್‌ಗೆ ತಂಜಾವೂರಿನ ರೈತರ ಮೂಲಕ ರಿಟ್ ಅರ್ಜಿ ಹಾಕಿಸಿಬಿಟ್ಟಿತು. ಈ ಅರ್ಜಿಗೆ ಜೀವ ಬಂದದ್ದು ೧೯೯೦ರಲ್ಲಿ, ಕೇಂದ್ರದಲ್ಲಿ ರಾಷ್ಟ್ರೀಯ ರಂಗ ಅಧಿಕಾರಕ್ಕೆ ಬಂದಾಗ ಡಿ.ಎಂ.ಕೆ.ಯನ್ನು ತೃಪ್ತಿಪಡಿಸಲು ವಿವಾದ ಪರಿಹಾರದ ಹೊಣೆಗಾರಿಕೆಯನ್ನು ನ್ಯಾಯಾಲಯಕ್ಕೆ ಬಿಟ್ಟುಬಿಟ್ಟಿತು.

ಕಾವೇರಿ ಕಣಿವೆಯಲ್ಲಿ ಸಂಗ್ರಹವಾಗುವ ಸರಾಸರಿ ನೀರು ೭೯೦ TMC ಎಂದು ಅಂದಾಜು ಮಾಡಿದೆ. ಇದರಲ್ಲಿ ಕರ್ನಾಟಕದ ಕಾಣಿಕೆ ೫೩.೮% (೪೨೫ TMC), ತಮಿಳು ನಾಡು ೩೧.೯ (೨೫೨ TMC) ಮತ್ತು ಕೇರಳದ ಕಾಣಿಕೆ ೧೪.೩ (೧೧೩ TMC). ತಮಿಳು ನಾಡು ೫೦೦ TMC ಮತ್ತು ಕರ್ನಾಟಕ ೨೮೮ TMC ನೀರನ್ನು ಬಳಸುತ್ತಿವೆ ಎಂದು ಅಂದಾಜು ಮಾಡಲಾಗಿದೆ. ಕರ್ನಾಟಕದಲ್ಲಿ ನೀರಾವರಿ ಪ್ರದೇಶ ೧೧ ಲಕ್ಷ ಎಕರೆಗಳಿದ್ದರೆ, ತಮಿಳುನಾಡಿನಲ್ಲಿ ೩೪ ಲಕ್ಷ ಎಕರೆಗಳಷ್ಟಿದೆ. ಕರ್ನಾಟಕದ ಅರ್ಧದಷ್ಟು ಮಾತ್ರ ನೀರು ನೀಡುವ ತಮಿಳುನಾಡು ಕರ್ನಾಟಕದ ಎರಡು ಪಟ್ಟು ಹೆಚ್ಚು ನೀರು ಬಳಸಿ ನಿಸರ್ಗದ ನ್ಯಾಯವನ್ನು ಉಲ್ಲಂಘಿಸಿದೆ ಎನ್ನುವುದು ಅಲ್ಲಗಳೆಯಲಾಗದ ಸಂಗತಿ. ನಮ್ಮ ರಾಜ್ಯದಲ್ಲಿ ಒಂದು ಬೆಳೆಗೇ ನೀರಿಲ್ಲದಿರುವಾಗ ತಮಿಳುನಾಡಿನ ೩ ಬೆಳೆಗೆ ನೀರು ಕೊಡುವುದು ಹೇಗೆ? ಇದು ಕರ್ನಾಟಕದ ಪ್ರಶ್ನೆ. ಒಪ್ಪಂದದಂತೆ ನೀರು ಕೊಡುವುದು ಕರ್ನಾಟಕದ ಜವಾಬ್ದಾರಿ ಎಂದು ತಮಿಳುನಾಡು ನ್ಯಾಯಾಲಯದಲ್ಲಿ ಪ್ರಶ್ನಿಸಿತು. ಹಲವು ವರ್ಷಗಳ ಛಲಬಿಡದ ತಮಿಳುನಾಡಿನ ಪ್ರಯತ್ನ ಹಾಗೂ ಕರ್ನಾಟಕದ ರಾಜಕಾರಣಿಗಳ ನಿರ್ಲಿಪ್ತತೆಯಿಂದ ಕಾವೇರಿ ನ್ಯಾಯ ಮಂಡಳಿ ರಚನೆ ಆಯಿತು. ಈ ನ್ಯಾಯ ಮಂಡಳಿ ೧೯೯೧ರ ಜೂನ್ ೨೫ರಂದು ನೀಡಿದ ಮಧ್ಯಂತರ ಆದೇಶ, ಇಲ್ಲಿಯವರೆಗೆ ಪ್ರಸ್ತಾಪಿಸಿದ್ದಕ್ಕಿಂತ ಹೆಚ್ಚು ಅನ್ಯಾಯದ್ದಾಗಿದೆ. ಇದು 'ಕರ್ನಾಟಕದ ಕಾವೇರಿ ಕಣಿವೆಯ ರೈತರ ಮರಣ ಶಾಸನ' ಎಂದು ರೈತ ನಾಯಕರು ಹೇಳಿದರು. ಈ ಆದೇಶದಂತೆ ಕರ್ನಾಟಕ ಪ್ರತಿವರ್ಷ ೨೦೫ TMC ನೀರನ್ನು ತಮಿಳುನಾಡಿಗೆ ಬಿಡಬೇಕು. ತಿಂಗಳು / ವಾರಗಳನ್ವಯ ಬಿಡಬೇಕು. ಒಂದು ವೇಳೆ ಗೊತ್ತು ಪಡಿಸಿದಷ್ಟು ನೀರನ್ನು ಒಂದು ವಾರ ಬಿಡಲಾಗದಿದ್ದರೆ ಅದನ್ನು ಮುಂದಿನ ಕಂತಿನಲ್ಲಿ ಬಿಡಬೇಕು. ಹೆಚ್ಚು

---

*೫ನೇ ಪುಟದಿಂದ.... (ಸಂಪಾದಕೀಯ)*

ಮಾಸ್ಕೋ ಒಲಿಂಪಿಕ್ಸ್‌ನ್ನು ಬಹಿಷ್ಕರಿಸಿದೆವು ಮತ್ತು ಈಗ ಆ ದೇಶದ ಮೇಲೆ ಬಾಂಬಿನ ಮಳೆ ಸುರಿಸುತ್ತಿದ್ದೇವೆ. ಇರಾಕಿನ ಮೇಲೆ ಆಕ್ರಮಣ ನಡೆಸಿ ಅಲ್ಲೇ ಬೀಡುಬಿಟ್ಟಿದ್ದೇವೆ, ಅದನ್ನು ರಾಜಕೀಯಕ್ಕಾಗಿ ಬಳಸುತ್ತಿದ್ದೇವೆ. ಇರಾಕಿನ ಫುಟ್‌ಬಾಲ್ ಆಟಗಾರರು ಕೋಪ ವ್ಯಕ್ತಪಡಿಸಿರುವುದು ಏತಕ್ಕಾಗಿ ಎಂಬುದು ಎಲ್ಲರಿಗೂ ಗೊತ್ತು. ಆಟಗಾರರನ್ನು ಬೆಂಬಲಿಸುವುದೇ ಬೇರೆ, ಅದನ್ನು ರಾಜಕೀಯ ಅಸ್ತ್ರವನ್ನಾಗಿಸಿಕೊಳ್ಳುವುದೇ ಬೇರೆ.''

ಒಲಿಂಪಿಕ್ಸ್ ಕ್ರೀಡಾಕೂಟದ ಮುಕ್ತಾಯ ಸಮಾರಂಭದಲ್ಲಿ ಅಮೆರಿಕಾದ ವಿದೇಶಾಂಗ ಕಾರ್ಯದರ್ಶಿ ಕಾಲಿನ್ ಪವೆಲ್ ಭಾಗವಹಿಸಬೇಕೆಂದಿದ್ದರು; ಗ್ರೀಸಿನ ಜನರ ಪ್ರತಿಭಟನೆಗಳಿಗೆ ಮಣಿದು ದೂರವೇ ಉಳಿಯಬೇಕಾಯಿತು. ಸಿಡ್ನಿ ಒಲಿಂಪಿಕ್ಸ್ ಸಂದರ್ಭದಲ್ಲಿ ಅಮೆರಿಕಾದ ರಾಯಭಾರಿ ಕಚೇರಿಯ ಒಬ್ಬ ಪ್ರತಿನಿಧಿ ಕ್ಯೂಬಾದ ಕುಸ್ತಿಪಟುವೊಬ್ಬನನ್ನು ಸಂಧಿಸಿ ಆತ ಅಮೆರಿಕಾಕ್ಕೆ ವಲಸೆ ಹೋಗುವಂತೆ ಸೂಚಿಸುವ ಕೀಳುತನವನ್ನು ತೋರಿದ್ದ. ಆಗ ಆ ಕ್ಯೂಬಾದ ಕ್ರೀಡಾಪಟು ಹೇಳಿದ್ದ: ನನ್ನ ದೇಶದ ಅಧ್ಯಕ್ಷ ನಿಮ್ಮ ದೇಶದ ಅಧ್ಯಕ್ಷನಂತಲ್ಲ, ಬೇಕಾದರೆ ನಾನು ಆತನನ್ನು ಭೇಟಿಯಾಗಬಲ್ಲೆ. ನನ್ನ ದೇಶದಲ್ಲಿ ವೈಭವಗಳಿಲ್ಲ ನಿಜ, ಆದರೆ ಪ್ರೀತಿ -ಗೌರವ -ಅಭಿಮಾನ ಸಾಕಷ್ಟಿದೆ. ನನ್ನ ದೇಶಕ್ಕಾಗಿ ಆಡುವುದಕ್ಕಿಂತ ಹೆಚ್ಚಿನ ಸನ್ಮಾನ ನನಗೇನೂ ಬೇಕಾಗಿಲ್ಲ. ನಿಮ್ಮ ಹಣಕ್ಕಾಗಿ ನಾನು ದೇಶದಿಂದ ಓಡಿಬರುತ್ತೇನೆಂದು ನಿರೀಕ್ಷಿಸುವ ನಿಮ್ಮ ಮೂರ್ಖತನಕ್ಕೆ ಏನು ಹೇಳಲಿ!

ಬಹುಶಃ ಒಲಿಂಪಿಕ್ಸ್ ಕ್ರೀಡಾಕೂಟದ ತತ್ತ್ವ ಪ್ರಣಾಳಿಕೆ ಆ ಮಾತುಗಳಲ್ಲಡಗಿದೆ. ಭಾರತದ ಕ್ರೀಡಾಪಟುಗಳು ಪದಕ ಪಡೆಯದಿದ್ದರೇನಂತೆ, ಕ್ಯೂಬಾದ ಆ ನಮ್ಮ ಆಟಗಾರನ ಭಾವನೆಗಳನ್ನು ಪ್ರತಿಫಲಿಸಿದರೆ ಸಾಕು.

ನೀರುಬಿಟ್ಟರೆ ಅದು ಲೆಕ್ಕಕ್ಕೆ ಬರುವುದಿಲ್ಲ. ನ್ಯಾಯ ಮಂಡಳಿಯ ಈ ೨೦೫ TMC 'ಮ್ಯಾಜಿಕ್ ಫಿಗರ್'ಗೆ ಆಧಾರ ೧೯೮೧-೯೦ರ ನಡುವಿನ ೧೦ವರ್ಷಗಳ ನೀರಿನ ಹರಿವಿನ ಸರಾಸರಿಯೇ ಆಗಿದೆ (ಇದರಲ್ಲಿ ಅತಿ ಹೆಚ್ಚು ಮಳೆ ಆದ ೧೯೮೦-೮೧, ೮೧-೮೨ ಹಾಗೂ ಅತಿ ಕಡಿಮೆ ಮಳೆ ಆದ ೧೯೮೫-೮೬, ೮೭-೮೮ರ ನೀರಿನ ಹರಿವನ್ನು ಪರಿಗಣಿಸಿಲ್ಲ). ಈ ನ್ಯಾಯ ಮಂಡಳಿಯ ಕೂಡುವ-ಕಳೆಯುವ ಲೆಕ್ಕ ಹೇಗಿದೆ ಎಂದರೆ, ಗಣಿತ ಪಂಡಿತರು ಹೊಳೆ ದಾಟಿದ ನೆನಪಾಗುತ್ತದೆ! ಹೊಳೆ ಆಳದ ಸರಾಸರಿ ತೆಗೆದಾಗ ಪಂಡಿತರು ಕಂಡು ಹಿಡಿದದ್ದು ೪ ಅಡಿ ಆಳವನ್ನ. ಯಾವುದೇ ಅಪಾಯವಿಲ್ಲವೆಂದು ನಿರ್ಧರಿಸಿದ ಪಂಡಿತರು ನದಿದಾಟಲು ಹೋಗಿ ೭ ಅಡಿ ಆಳವಿದ್ದಲ್ಲಿ ಮುಳುಗಿ ಹೋದರಂತೆ. ಕಾವೇರಿ ಮಧ್ಯಂತರ ತೀರ್ಪನ್ನು ಕೇಂದ್ರ ಶಾಸನ ಮಾಡಹೊರಟಾಗ ಆದ ಪ್ರಾಣ ಹಾನಿ, ಹಿಂಸೆ, ಆಸ್ತಿ ಹಾನಿಗಳ ಬಗ್ಗೆ ಹೇಳಹೊರಟರೆ ಅದೇ ದೊಡ್ಡ ಲೇಖನವಾಗಿಬಿಡುತ್ತದೆ. ಆ ಹಿಂಸೆಯೇ ಕಾವೇರಿ ನೀರನ್ನು ಕರ್ನಾಟಕದಲ್ಲಿ ಉಳಿಸಿತು ಎನ್ನುವುದು ದುರಂತವೆನಿಸಿದರೂ ಸತ್ಯ.

ಕಾವೇರಿ ಜಲವಿವಾದದಲ್ಲಿ ಸುಪ್ರೀಂಕೋರ್ಟ್ ಪಾತ್ರ ಎದ್ದು ಕಾಣುತ್ತದೆ. ತಂಜಾವೂರಿನ ರೈತರು ಹೂಡಿದ್ದ ದಾವೆಯನ್ನು ಪುರಸ್ಕರಿಸಿ ಕೇಂದ್ರಕ್ಕೆ ಅಂತಿಮ ಗಡುವು ನೀಡಿದ್ದು, ನ್ಯಾಯ ಪಂಚಾಯ್ತಿ ರಚಿಸಲು ಆದೇಶಿಸಿದ್ದು, ನ್ಯಾಯ ಮಂಡಳಿ ಮಧ್ಯಂತರ ತೀರ್ಪಿನ ವಿಚಾರದಲ್ಲಿ ಅಭಿಪ್ರಾಯ ನೀಡಿದ್ದು, ಹೀಗೆ ೧೯೯೦ರಿಂದ ಕಾವೇರಿ ವಿಚಾರದಲ್ಲಿ ಸುಪ್ರೀಮ್‌ಕೋರ್ಟ್ ಒಂದಲ್ಲ ಒಂದು ಹಂತದಲ್ಲಿ ಮಧ್ಯಪ್ರವೇಶಿಸಿ ತಮಿಳುನಾಡಿಗೆ ನೀರು ಹರಿಯುವಂತೆ ನೋಡಿಕೊಂಡಿದೆ. ಹಲವು ಸಂದರ್ಭಗಳಲ್ಲಿ 'ಕಪ್ಪುಕೋಟಿನ ಸರ್ವಜ್ಞ'ರು ಕರ್ನಾಟಕದ ವಿಚಾರದಲ್ಲಿ ತೆಗೆದುಕೊಂಡ ನಿರ್ಧಾರಗಳು ಪ್ರಶ್ನಾರ್ಹವಾದದ್ದು ಎಂದು ಕಾನೂನು ತಜ್ಞರೇ ಹೇಳಿದ್ದಾರೆ. ಇದೇ ನ್ಯಾಯಾಲಯ ಅಂತರರಾಜ್ಯ ಜಲವಿವಾದದಲ್ಲಿ ಹಿಂದೆ ನಡೆದು ಕೊಂಡುದರ ಎರಡು ನಿದರ್ಶನಗಳು ಹೀಗಿವೆ : (೧) ೧೯೭೨ರಲ್ಲಿ ತಮಿಳುನಾಡು ಕರ್ನಾಟಕದ ಕಾವೇರಿ ಯೋಜನೆಗಳಿಗೆ ತಡೆ ನೀಡಬೇಕೆಂದು ಮನವಿ ಮಾಡಿತು. ಆಗ ನ್ಯಾಯಾಲಯ ೧೯೫೬ರ ಅಂತರರಾಜ್ಯ ಜಲ ವಿವಾದ ಕಾಯಿದೆ ತನ್ನ ವ್ಯಾಪ್ತಿಗೆ ಹೊರತಾದದ್ದು ಎಂದು ರಿಟ್ ಹಿಂದಕ್ಕೆ ಪಡೆಯಿರಿ ಇಲ್ಲವೇ ತಿರಸ್ಕರಿಸಲಾಗುವುದು ಎಂದಿತ್ತು. (೨) ೧೯೭೪ರಲ್ಲಿ ಕರ್ನಾಟಕ ಸರ್ಕಾರವು ಕೃಷ್ಣಾನದಿ ಪಂಚಾಯ್ತಿ ತೀರ್ಪು ತನಗೆ ಅನ್ಯಾಯ ಮಾಡಿದೆ ಎಂದು ಸುಪ್ರೀಂಕೋರ್ಟಿಗೆ ದೂರು ಒಯ್ದಾಗ ಮೇಲಿನ ಅಭಿಪ್ರಾಯವನ್ನೇ ಪುನರುಚ್ಚರಿಸಿತು. ೧೯೭೨ರ ನಂತರ ಜಲವಿವಾದ ಕಾಯ್ದೆಯಾಗಲಿ, ಸಂವಿಧಾನವಾಗಲಿ ತಿದ್ದುಪಡಿಯಾಗಿಲ್ಲ. ಆದರೆ ಕೋರ್ಟಿನ ವರ್ತನೆಯಲ್ಲಿ ಬದಲಾಗಿದೆ. ಈ ಬದಲಾವಣೆ ಹಲವು ಗೊಂದಲಗಳಿಗೆ ಕಾರಣವಾಗಿದೆ. ಈಗ ಅಮೆರಿಕದ ಕೊಲರ್‍ಯಾಡೋ ನದಿ ಒಪ್ಪಂದದ ಮಾದರಿ ಕಾವೇರಿ ನ್ಯಾಯಾಧಿಕರಣಕ್ಕೆ ಪ್ರವೇಶವಾಗಿದೆ. ಅದರಿಂದಲಾದರೂ ಕಾವೇರಿ ವಿವಾದ ಬಗೆಹರಿದೀತೇ ? ಕಾಲವೇ ಉತ್ತರಿಸಬೇಕು.

### ಕೃಷ್ಣಾ ಕಣಿವೆ ಜಲವಿವಾದ

೧೯೫೧ರಲ್ಲಿ ಯೋಜನಯುಗ ಆರಂಭವಾಯಿತು. ಮೊದಲ ಪಂಚವಾರ್ಷಿಕ ಯೋಜನೆಯಲ್ಲಿ ವಿದ್ಯುತ್ ಮತ್ತು ನೀರಾವರಿಗೆ ಆದ್ಯತೆ ನೀಡಿದ ಕೇಂದ್ರ ಸರ್ಕಾರ ಕೃಷ್ಣಾ, ಗೋದಾವರಿ ನದಿ ಪಾತ್ರಗಳ ರಾಜ್ಯಗಳಿಗೆ ಪತ್ರ ಬರೆದು ನದಿ ನೀರಿನ ಬಳಕೆಗೆ ಯೋಜನೆ ಸಿದ್ಧಪಡಿಸಲು ಸೂಚಿಸಿತು. ಸಂಬಂಧಪಟ್ಟ ರಾಜ್ಯಗಳ ನಡುವೆ ಒಡಂಬಡಿಕೆ ಮೂಡಿಸುವ ಉದ್ದೇಶದಿಂದ ಜುಲೈ ೧೯೫೧ರಲ್ಲಿ ಅಂತರ್ ರಾಜ್ಯ ಸಮಾವೇಶವನ್ನು ಕರೆದು, ಇಲ್ಲಿ ಮೂಡಿಬರುವ ಒಪ್ಪಂದವನ್ನು ೨೫ ವರ್ಷಗಳ ನಂತರ ಪುನರ್ವಿಮರ್ಶೆಗೊಳಿಸಲು ಅವಕಾಶ ಮಾಡಿಕೊಟ್ಟಿತು. ಸಮಾವೇಶದ ನಂತರ ಮದ್ರಾಸ್, ಮುಂಬೈ, ಹೈದರಾಬಾದ್, ಮಧ್ಯಪ್ರದೇಶಗಳು ಈ ಒಪ್ಪಂದವನ್ನು ಸ್ಥಿರೀಕರಿಸಿದವು. ಮೈಸೂರು ಒಪ್ಪಂದವನ್ನು ದೃಢೀಕರಿಸಲಿಲ್ಲ. ೧೯೫೬ರಲ್ಲಿ ಭಾಷಾವಾರು ಪ್ರಾಂತ್ಯಗಳು ರಚನೆಯಾದ ಮೇಲೆ ೧೯೫೮ರಲ್ಲಿ ಕರ್ನಾಟಕ, ಮಹಾರಾಷ್ಟ್ರಗಳು ರಾಜ್ಯಗಳ ಎಲ್ಲೆ ಬದಲಾದ ಹಿನ್ನೆಲೆಯಲ್ಲಿ ಒಪ್ಪಂದವನ್ನು ಪುನರ್‌ವಿಮರ್ಶೆ ಮಾಡುವಂತೆ ಒತ್ತಾಯಿಸಿದವು. ಕೇಂದ್ರ ಜಲ ಮತ್ತು ಶಕ್ತಿ ಆಯೋಗವು ೧೯೫೮ರಲ್ಲಿ ಪುನಃ ಕೆಳಗಿನಂತೆ ಹಂಚಿತು.

| ಕ್ರಮ ಸಂಖ್ಯೆ | ರಾಜ್ಯ | ಆಯೋಗದ ಹಂಚಿಕೆ | | ಕಣಿವೆಗೆ ನೀಡುವ ವಂತಿಗೆ(ಶೇಕಡ) |
|---|---|---|---|---|
| | | TMC | ಶೇಕಡ | |
| ೧. | ಕರ್ನಾಟಕ | ೪೭೬ | ೨೭.೨ | ೪೭.೫ |
| ೨. | ಮಹಾರಾಷ್ಟ್ರ | ೨೮೬ | ೧೬.೪ | ೨೮.೦ |
| ೩. | ಆಂಧ್ರಪ್ರದೇಶ | ೯೮೩ | ೫೬.೪ | ೨೪.೫ |
| | ಒಟ್ಟು | ೧೭೪೫ | ೧೦೦ | ೧೦೦ |

ಈ ಹಂಚಿಕೆಯಿಂದ ೪೭.೫%ರಷ್ಟು ನೀರು ಪಡೆಯಬೇಕಿದ್ದ ಕರ್ನಾಟಕ ೨೭.೨%ನ್ನು ಮಾತ್ರ ಪಡೆದರೆ ೨೪.೫% ಪಾಲು ಪಡೆಯಬೇಕಿದ್ದ ಆಂಧ್ರ ೫೬.೪% ನೀರನ್ನು ಪಡೆಯಿತು.

ಮಹಾರಾಷ್ಟ್ರ ಮತ್ತು ಕರ್ನಾಟಕ ೧೯೫೮ರ ಹಂಚಿಕೆಯಲ್ಲಾದ ಅನ್ಯಾಯದ ವಿರುದ್ಧ ಧ್ವನಿಯೆತ್ತಿ ಜಲವಿವಾದವಿದೆ ಎಂದು ಸಾರಿದವು. ಗೋದಾವರಿ ವಿಚಾರದಲ್ಲಿ ಮಧ್ಯ ಪ್ರದೇಶ, ಒರಿಸ್ಸಾ ಅನ್ಯಾಯ ಸರಿಪಡಿಸಲು ಕೋರಿದವು. ೧೯೬೦ರ ಸೆಪ್ಟೆಂಬರ್‌ನಲ್ಲಿ ಕೇಂದ್ರ ನೀರಾವರಿ ಮತ್ತು ವಿದ್ಯುತ್ ಸಚಿವರು ಈ ವಿಚಾರದಲ್ಲಿ ಸಭೆ ಕರೆದರು. ಮೈಸೂರು, ಮಹಾರಾಷ್ಟ್ರ ೧೯೫೧ರ ಒಪ್ಪಂದದ ಸಿಂಧುತ್ವವನ್ನೇ ಪ್ರಶ್ನಿಸಿದರೆ, ಒರಿಸ್ಸಾ, ಮಧ್ಯಪ್ರದೇಶಗಳು ಇಡೀ ವಿವಾದವನ್ನೇ ಹೊಸದಾಗಿ ಪರಿಶೀಲಿಸಬೇಕೆಂದು ಒತ್ತಾಯಿಸಿದವು. ನಿಗದಿ ಪಡಿಸಿದ ೨೫ ವರ್ಷಗಳಾಗದೆ ಒಪ್ಪಂದಕ್ಕೆ ಯಾವುದೇ ಬದಲಾವಣೆ ಮಾಡಕೂಡದೆಂದು ಆಂಧ್ರ ಹಠ ಹಿಡಿಯಿತು. ರಾಜ್ಯಗಳ ಒತ್ತಡ ಹೆಚ್ಚಿದ್ದರಿಂದ ೧೯೬೧ರಲ್ಲಿ 'ಗುಲಾಟಿ ಆಯೋಗ' (ಕೃಷ್ಣಾ-ಗೋದಾವರಿ ಆಯೋಗ) ರಚನೆ ಆಯಿತು. ೧೯೬೨ರಲ್ಲಿ ಆಯೋಗವು ಕೃಷ್ಣಾ ತೀರದ ೩ ರಾಜ್ಯಗಳ ಅಗತ್ಯಗಳನ್ನು ಪೂರೈಸಲು ಗೋದಾವರಿಯಿಂದ ೩೦೦ TMC ನೀರು ವರ್ಗಾಯಿಸಲು ಯೋಜನೆ ರೂಪಿಸುವಂತೆ ಸಲಹೆ ನೀಡಿತು. ಕೇಂದ್ರ ಇದನ್ನು ಕಡೆಗಣಿಸಿತು.

೧೯೬೨ರಿಂದ ಕರ್ನಾಟಕ-ಮಹಾರಾಷ್ಟ್ರ ರಾಜ್ಯಗಳು ಕೃಷ್ಣಾನದಿ ನ್ಯಾಯಮಂಡಳಿ ರಚನೆಗೆ ಒತ್ತಾಯಿಸುತ್ತಲೇ ಇದ್ದವು. ೧೯೬೩ರಲ್ಲಿ ಕೇಂದ್ರ ಸರ್ಕಾರ ಕರ್ನಾಟಕದ ಯೋಜನೆಗಳಿಗೆ ೬೦೦ TMC ಮಹಾರಾಷ್ಟ್ರಕ್ಕೆ ೪೦೦ TMC ಮತ್ತು ಆಂಧ್ರಪ್ರದೇಶಕ್ಕೆ ೮೦೦ TMCಗಳೆಂದು ತಾತ್ಕಾಲಿಕವಾಗಿ ನಿಗದಿ ಮಾಡಿತು. ನಾಗಾರ್ಜುನ ಸಾಗರದ ನಿರ್ಮಾಣ ಕರ್ನಾಟಕ-ಮಹಾರಾಷ್ಟ್ರಗಳಿಗೆ ಆತಂಕ ಮೂಡಿಸಿತ್ತು. ಮೈಸೂರು ರಾಜ್ಯವು 'ರಾಜ್ಯಗಳ ಜಲಾನಯನ ಪ್ರದೇಶ, ಕೊಡುಗೆಯನ್ನು ಆಧರಿಸಿ' ಜಲಹಂಚಿಕೆಗೆ ರಾಷ್ಟ್ರೀಯ ಜಲನೀತಿ ರೂಪಿಸಲು ಒತ್ತಾಯಿಸಿತು. ನ್ಯಾಯ ಮಂಡಳಿ ರಚನೆಗೆ ಎಷ್ಟೇ ಒತ್ತಡ ಇದ್ದರೂ ಕೇಂದ್ರದಲ್ಲಿ ನೀರಾವರಿ ಸಚಿವರಾಗಿದ್ದ ಆಂಧ್ರದ ಡಾ॥ ಕೆ. ಎಲ್. ರಾವ್ ನಾಗಾರ್ಜುನ ಸಾಗರ ನಿರ್ಮಾಣ ಪೂರ್ಣಗೊಂಡ ನಂತರವೇ ೧೯೬೯ರಲ್ಲಿ ನ್ಯಾ॥ ಬಚಾವತ್ ಅಧ್ಯಕ್ಷತೆಯಲ್ಲಿ ಕೃಷ್ಣಾ ಕೊಳ್ಳದ ನೀರಿನ ಹಂಚಿಕೆಗೆ ನ್ಯಾಯ ಮಂಡಲಿ ರಚಿಸಿದರು.

ಈ ಮಂಡಳಿಯು ೧೯೭೩ರಲ್ಲಿ ಮಹಾರಾಷ್ಟ್ರಕ್ಕೆ ೫೬೫, ಕರ್ನಾಟಕಕ್ಕೆ ೬೯೫ ಮತ್ತು ಆಂಧ್ರಕ್ಕೆ ೮೦೦ TMC ಎಂದು ಮೊದಲ ಆದೇಶ ನೀಡಿತು. ತುಂಗಭದ್ರಾ ನೀರಿನ ಬಳಕೆ ವರ್ಷದಲ್ಲಿ ೨೯೫ TMC ಮೀರಬಾರದೆಂದು ಕರ್ನಾಟಕಕ್ಕೆ ಆದೇಶಿಸಿತು. ಈ ತೀರ್ಪಿನಿಂದ ಕರ್ನಾಟಕಕ್ಕೆ ತೀವ್ರ ಅನ್ಯಾಯವಾಗಿತ್ತು. ಇದನ್ನು ಪ್ರತಿಭಟಿಸಿ ಕೆಲಕಾಲ ನ್ಯಾಯ ಮಂಡಳಿಯಿಂದ ಹೊರಬಂದಿತು. ೧೯೭೬ರಲ್ಲಿ ಬಚಾವತ್ ಆಯೋಗ ಅಂತಿಮ ತೀರ್ಪು ನೀಡಿ ನೀರನ್ನು ಕೆಳಗಿನಂತೆ ಹಂಚಿತು.

| ಕ್ರಮ ಸಂಖ್ಯೆ | ರಾಜ್ಯ | ಹಂಚಿಕೆ | | ಕಣಿವೆಗೆ ನೀಡುವ ವಂತಿಗೆ(ಶೇಕಡ) |
|---|---|---|---|---|
| | | TMC | ಶೇಕಡ | |
| ೧. | ಕರ್ನಾಟಕ | ೭೦೦ | ೩೪% | ೪೭.೫ |
| ೨. | ಮಹಾರಾಷ್ಟ್ರ | ೫೬೦ | ೨೭% | ೨೮.೦ |
| ೩. | ಆಂಧ್ರಪ್ರದೇಶ | ೮೦೦ | ೩೮% | ೨೪.೫ |

ಮತ್ತು ತುಂಗಭದ್ರಾ ನಿರ್ಬಂಧವನ್ನು ೨೯೫ರಿಂದ ೩೨೦ TMCಗೆ ಸಡಿಲಿಸಿತು.

### ಬಚಾವತ್ ಆಯೋಗದ ತೀರ್ಮಾನದಿಂದ ಕರ್ನಾಟಕಕ್ಕಾದ ಅನ್ಯಾಯಗಳು

೧. ಕೃಷ್ಣಾ ಕಣಿವೆಯಲ್ಲಿ ೨೩೪೯ TMC ನೀರು ಲಭ್ಯವಿದ್ದರೂ ೨೦೬೦ TMC ನೀರನ್ನು ಮಾತ್ರ ಹಂಚಿ, ಸಾಮರ್ಥ್ಯದ ಹೆಸರಿನಲ್ಲಿ ಆಂಧ್ರಕ್ಕೆ ೨೫೦ TMC ಹೆಚ್ಚುವರಿ ನೀರನ್ನು ಬಳುವಳಿ ನೀಡಿತು.

೨. ಶೇಖರಣಾ ಪ್ರಮಾಣಕ್ಕನುಗುಣವಾಗಿ ನೀರನ್ನು ಹಂಚದೆ, ಬಳಕೆಯ ಸಾಮರ್ಥ್ಯಕ್ಕನುಗುಣವಾಗಿ ನೀರನ್ನು ಹಂಚಿ, ಧಾರವಾಡ, ಚಿತ್ರದುರ್ಗದಂತಹ ಕ್ಷಾಮ ಪೀಡಿತ ಜಿಲ್ಲೆಗಳ ಹಿತಾಸಕ್ತಿಗೆ ಮಾರಕವಾಗುವ ರೀತಿಯಲ್ಲಿ ತುಂಗಭದ್ರಾ ನೀರಿನ ಬಳಕೆಗೆ ಮಿತಿ ಹೇರಿತು ಹಾಗೂ ೨೦೦೦ದ ಮೇ ಒಳಗೆ ಹಂಚಿದ ನೀರನ್ನು ಬಳಸಬೇಕೆಂದು ನಿರ್ಬಂಧಿಸಿತು.

೩. ಕೃಷ್ಣಾದ ಹೆಚ್ಚುವರಿ ನೀರನ್ನು 'ಬಿ - ಸ್ಕೀಮ್'ನಲ್ಲಿ ಬಳಸಿಕೊಳ್ಳಲು ಮಹಾರಾಷ್ಟ್ರಕ್ಕೆ ೨೫%, ಕರ್ನಾಟಕಕ್ಕೆ ೫೦% ಮತ್ತು ಆಂಧ್ರಕ್ಕೆ ೨೫% ನೀರನ್ನು ಹಂಚಿದೆ. ಈ ಯೋಜನೆ ಜಾರಿಗೆ ಬರಬೇಕಾದರೆ ೩ ರಾಜ್ಯಗಳೂ ಒಪ್ಪಂದಕ್ಕೆ ಬರಲೇಬೇಕು. ಇಲ್ಲವಾದರೆ ಕೇಂದ್ರ ಸರ್ಕಾರವು ಸಂಸತ್‌ನಲ್ಲಿ ಶಾಸನ ಮಂಡಿಸಿ ಅನುಮೋದನೆ ಪಡೆಯಬೇಕೆಂದು ಸೂಚಿಸಿತ್ತು.

ಈ ಆಯೋಗದ ತೀರ್ಪನ್ನು ಪುನರ್ವಿಮರ್ಶೆಗೊಳಪಡಿಸುವವರೆಗೂ ಆಂಧ್ರ ತನ್ನ

ಪಾಲಿನ ನೀರಿನ ಜೊತೆಗೆ ಹೆಚ್ಚುವರಿ ನೀರನ್ನು ಬಳಸಬಹುದು ಎಂದು ಹೇಳಿದ್ದರ ಪರಿಣಾಮ ಆಂಧ್ರ ತೆಲುಗು ಗಂಗಾ ಯೋಜನೆ ರೂಪಿಸಿ ದೊಡ್ಡ ನಾಲೆಗಳನ್ನು ನಿರ್ಮಿಸಿ ವಿವಾದ ಉಂಟಾಗಿದೆ.

ನ್ಯಾಯ ಮಂಡಳಿ ಅಣೆಕಟ್ಟಿನ ಎತ್ತರದ ವಿಚಾರದಲ್ಲಿ ಯಾವುದೇ ನಿರ್ಬಂಧ ವಿಧಿಸಿಲ್ಲ. ಆದರೂ ಆಂಧ್ರ ತಕರಾರು ಎತ್ತಿ ಸುಪ್ರೀಂಕೋರ್ಟ್‌ಗೆ ಹೋಗಿ ಉದ್ದೇಶಿತ ಎತ್ತರ ೫೨೫ರಿಂದ ೫೨೦ ಅಡಿಗೆ ಇಳಿಯುವಂತೆ ಮಾಡಿತು.

ಈ ಎರಡು ನದಿಗಳ ವಿವಾದದ ಜೊತೆಗೆ ಗೋವೆ ಯೊಡನೆ ಮಹಾದಾಯಿ ನೀರಿನ ಹಂಚಿಕೆ, ಪರಗೋಡು ಬಳಿ ಫೀಡರ್ ಕಾಲುವೆ ತೋಡಿ ಆಂಧ್ರ ಸೃಷ್ಟಿಸಿದ ಗದ್ದಲ, ಜೊತೆಗೆ ಚಿತ್ರಾವತಿ ನದಿಗೆ ಕಟ್ಟಿದ ಬ್ಯಾರೇಜ್‌ಗೆ ಆಂಧ್ರ ಅಡ್ಡಿ. ಇದರಾಚೆಗೆ ಮಹಾರಾಷ್ಟ್ರವು ಬಚಾವತ್ ತೀರ್ಪನ್ನು ಗಾಳಿಗೆ ತೂರಿ ಏಷ್ಯಾ ಖಂಡದಲ್ಲೆ ಅತಿದೊಡ್ಡದಾದ ೨೫ ಕಿ. ಮಿ. ಉದ್ದದ ಭೀಮಾ-ಸೀನಾ ನದಿ ಜೋಡಣೆ ಕಾಲುವೆ ನಿರ್ಮಿಸಿದೆ. ಜೊತೆಗೆ ೭ ಅನಧಿಕೃತ ಯೋಜನೆಗಳನ್ನು ಪೂರೈಸಿ ಆಯೋಗವು ನಿಗದಿಪಡಿಸಿದ್ದ ೯೦ TMCಗೆ ವಿರುದ್ಧವಾಗಿ ೧೩೫ TMC ನೀರು ಬಳಸುತ್ತಿದೆ. ಹೀಗಾಗಿ ವರ್ಷದ ೮ ತಿಂಗಳು ಭೀಮೆ ಕರ್ನಾಟಕದಲ್ಲಿ ಹರಿಯುವುದೇ ಇಲ್ಲ. ಇದನ್ನು ಸರಿಪಡಿಸಲು ಕರ್ನಾಟಕ ಸರ್ಕಾರ ಸೂಕ್ತ ಗಮನ ನೀಡಲಿಲ್ಲ. ಆಗ 'ಭೀಮಾನದಿ ನೀರು ರಕ್ಷಣಾ ರೈತರ ಸಂಘ' ಅಸ್ತಿತ್ವಕ್ಕೆ ಬಂದು ಭೀಮಾನದಿ ಬಗ್ಗೆ ಸರ್ವೋಚ್ಚ ನ್ಯಾಯಾಲಯಕ್ಕೆ ಹೋಗಿ, ಮಹಾರಾಷ್ಟ್ರದಲ್ಲಿ ಭೀಮಾ ನದಿಗೆ ಕಟ್ಟಿದ್ದ ಹಲವು ಬ್ಯಾರೇಜ್‌ಗಳಲ್ಲಿ ಒಂದನ್ನು ಒಡೆದು ಸುದ್ದಿ ಮಾಡಿತು. ಕೊನೆಗೂ ರೈತರ ಹೋರಾಟದಿಂದ ಭೀಮಾನದಿಗೆ ೧೦೦೦೦ ಕ್ಯೂಸೆಕ್ಸ್ ನೀರು ಬಿಡುವಂತೆ ಮಹಾರಾಷ್ಟ್ರಕ್ಕೆ ಸುಪ್ರೀಂ ಕೋರ್ಟ್ ಆದೇಶಿಸಿದೆ. ಅಂತರ ರಾಜ್ಯಗಳ ಜಲವಿವಾದದ ಜೊತೆಗೆ ಮೈಸೂರು-ಮಂಡ್ಯ ನಡುವೆ ವರುಣಾ ನಾಲೆ, ಹಾಸನ-ತುಮಕೂರು ನಡುವೆ ಬಾಗೂರು-ನವಿಲೆ ನಾಲೆ ವಿವಾದಗಳಂತಹ ಅಂತರ ಜಿಲ್ಲಾವಿವಾದಗಳೂ ಇವೆ.

ಜಲವಿವಾದದ ಕತೆ ಇದಾದರೆ ಗಡಿವಿವಾದ ಇನ್ನೊಂದು ಬಗೆ. ಏಕೀಕರಣದ ಸಂದರ್ಭದಲ್ಲೇ ೧೭ ಜಿಲ್ಲೆಗಳನ್ನು ಕಳೆದುಕೊಂಡ ಕರ್ನಾಟಕವು ಆಕ್ರಮಣಕಾರಿ ನೆರೆಯ ರಾಜ್ಯಗಳಿಂದ ಉಳಿದಿರುವ ಭಾಗವನ್ನು ರಕ್ಷಿಸಿಕೊಳ್ಳಲು ದೊಡ್ಡ ಸಾಹಸ ಮಾಡಬೇಕಿದೆ.

೧೯೫೬ರಲ್ಲಿ ರಾಜ್ಯಗಳ ಪುನರ್ವಿಂಗಡಣಾ ಆಯೋಗವು ನೀಡಿದ ತೀರ್ಪನ್ನು ಬಹಳಷ್ಟು ರಾಜ್ಯಗಳು ಒಪ್ಪಿದವು. ಆದರೆ, ಮಹಾರಾಷ್ಟ್ರವು ಭಾಷಾವಾರು ಪ್ರಾಂತ್ಯಗಳು ಅಸ್ತಿತ್ವಕ್ಕೆ ಬಂದ ತರುಣದಲ್ಲೇ ಅಂದರೆ ೧೯೫೭ರ ಜೂನ್ ೨೫ರಂದು ಕೇಂದ್ರದ ಗೃಹಮಂತ್ರಿ ಗಳಿಗೆ ಪತ್ರ ಬರೆದು 'ಮೈಸೂರಿಗೆ ಈಗ ಸೇರಿರುವ ಕಾರವಾರದಿಂದ ಬೀದರ್‌ವರೆಗೆ ಬೆಳಗಾವಿ ಸೇರಿದಂತೆ ಆರು ಪಟ್ಟಣಗಳು ಮತ್ತು ೮೧೪ ಹಳ್ಳಿಗಳಲ್ಲಿ ಮರಾಠಿಗಳೇ ಬಹುಸಂಖ್ಯಾತರಾಗಿದ್ದಾರೆ; ಅವುಗಳನ್ನು ಮಹಾರಾಷ್ಟ್ರಕ್ಕೆ ಸೇರಿಸಿ' ಎಂದು ಒತ್ತಾಯಿಸಿತು. ತನ್ನ ಗುರಿಸಾಧನೆಗೆ 'ಮಹಾರಾಷ್ಟ್ರ ಏಕೀಕರಣ ಸಮಿತಿ'ಯನ್ನು ಹುಟ್ಟುಹಾಕಿ ಗಡಿ ಭಾಗದಲ್ಲಿ ನಿರಂತರವಾಗಿ ಗೊಂದಲ ಸೃಷ್ಟಿಸಿತು. ಇದು ಫಲ ನೀಡದಿದ್ದಾಗ ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಬಾಪಟ್ ಅವರನ್ನು ಆಮರಣಾಂತ ಉಪವಾಸ ಕೂರಿಸಿ, ಎಲ್ಲ ರೀತಿಯ ಒತ್ತಡ ಹೇರಿ ೧೯೬೬ರ ಅಕ್ಟೋಬರ್ ೨೫ರಂದು ಮೆಹರ್‌ಚಂದ್ ಮಹಾಜನ್ ಏಕ ಸದಸ್ಯ ಆಯೋಗ ರಚನೆಯಾಗುವಂತೆ ಮಾಡಿತು. ಆಯೋಗದ ರಚನೆಯನ್ನು ಮಹಾರಾಷ್ಟ್ರದ ಎಲ್ಲ ನಾಯಕರೂ ಮುಕ್ತಕಂಠದಿಂದ ಸ್ವಾಗತಿಸಿ, ಅದು ನೀಡುವ ತೀರ್ಪಿಗೆ ಬದ್ಧರಾಗಿರುತ್ತೇವೆ ಎಂದರು. ಆಯೋಗ ರಚನೆಗೆ ಕರ್ನಾಟಕ ಅರೆ ಮನಸ್ಸಿನಿಂದ ಕೇರಳದ ಗಡಿ ಸಮಸ್ಯೆಯನ್ನು ಈ ಆಯೋಗಕ್ಕೆ ಒಪ್ಪಿಸಬೇಕೆಂಬ ಷರತ್ತಿನೊಡನೆ ಒಪ್ಪಿಗೆ ನೀಡಿತು. ಕೇರಳದಲ್ಲಿ ಚುನಾಯಿತ ಸರ್ಕಾರವಿಲ್ಲದ್ದರಿಂದ ತೀರ್ಮಾನವನ್ನು ಬರುವ ಚುನಾಯಿತ ಸರ್ಕಾರಕ್ಕೆ ಬಿಟ್ಟಿತು. ಕರ್ನಾಟಕದಲ್ಲಿ ಮಹಾಜನ್ ಆಯೋಗದ ವಿರುದ್ಧ ತೀವ್ರ ಪ್ರತಿಭಟನೆ ವ್ಯಕ್ತವಾಯಿತು. ೧೯೫೭ರಲ್ಲಿ ಭಾಷೆಯ ಆಧಾರದ ಮೇಲೆ ತನಗೆ ವರ್ಗಾಯಿಸಲು ಬೇಡಿಕೆ ಇಟ್ಟಿದ್ದ ೮೧೪ ಹಳ್ಳಿಗಳ ಪಟ್ಟಿಗೆ ಹೆಚ್ಚುವರಿಯಾಗಿ ೬೯ ಹಳ್ಳಿಗಳನ್ನು ತನಗೆ ವರ್ಗಾಯಿಸಬೇಕೆಂದು ಹೊಸ ಬೇಡಿಕೆಯನ್ನು ಮಹಾರಾಷ್ಟ್ರ ಆಯೋಗಕ್ಕೆ ಸಲ್ಲಿಸಿ, ತಾನೇ ವರ್ಗಾಯಿಸಲು ಒಪ್ಪಿ ಕೊಂಡಿದ್ದ ೨೬೦ ಕನ್ನಡ ಹಳ್ಳಿಗಳ ಪೈಕಿ ೪೭ ಗ್ರಾಮಗಳನ್ನು ತಾನೇ ಇಟ್ಟುಕೊಳ್ಳುವುದಾಗಿ ಹೊಸ ಪ್ರಮಾಣ ಪತ್ರ ಸಲ್ಲಿಸಿತು. ಅದಕ್ಕೆ ಪ್ರತಿಯಾಗಿ ಕರ್ನಾಟಕವು ಮಹಾರಾಷ್ಟ್ರವು ವರ್ಗಾಯಿಸಲು ಒಪ್ಪಿಕೊಂಡಿದ್ದ ೨೬೦ ಹಳ್ಳಿಗಳ ಜೊತೆಗೆ ಇನ್ನೂ ೨೫೬ ಹಳ್ಳಿಗಳನ್ನು ಸೇರಿಸಿ ಅಂದರೆ ಒಟ್ಟು ೫೧೬ ಹಳ್ಳಿಗಳನ್ನು ವರ್ಗಾಯಿಸುವಂತೆ ಪ್ರಮಾಣ ಪತ್ರ ಸಲ್ಲಿಸಿತು. ಅಂತಿಮವಾಗಿ ೨೮-೮-೧೯೬೭ರಂದು ಮಹಾಜನ್ ವರದಿಯನ್ನು ಸಲ್ಲಿಸಿದರು. ಮಹಾಜನ್ ವರದಿಯಂತೆ ಶ್ರೀಮಂತವಾದ ನಿಪ್ಪಾಣಿ, ಖಾನಾಪುರಗಳು ಸೇರಿದಂತೆ ೨೪೯ ಹಳ್ಳಿಗಳನ್ನು ಮಹರಾಷ್ಟ್ರಕ್ಕೂ, ಪ್ರತಿಯಾಗಿ ಮಹರಾಷ್ಟ್ರವೇ ಕೊಡಲು ಒಪ್ಪಿದ್ದ ೨೬೦ ಹಳ್ಳಿಗಳಲ್ಲಿ ೧೪೯ ಹಳ್ಳಿಗಳನ್ನು ಕರ್ನಾಟಕಕ್ಕೆ ವರ್ಗಾಯಿಸುವಂತೆ ಸೂಚಿಸಲಾಗಿದ್ದಿತು. ಇದರಲ್ಲಿ ಅತೀ ಹಿಂದುಳಿದ ಜತ್‌ನ ೪೪ ಹಳ್ಳಿಗಳನ್ನು ಕರ್ನಾಟಕಕ್ಕೆ ಸೇರಿಸಿದ್ದರು. ಕಾಸರಗೋಡು ಕರ್ನಾಟಕಕ್ಕೆ ಬರುವುದೆಂದಿದ್ದರೂ, ಕೇರಳ ಈ ಆಯೋಗಕ್ಕೆ ಒಪ್ಪಿಗೆ ಸೂಚಿಸಿಲ್ಲದ ಕಾರಣ ಅದು ನಮಗೆ ಬರುವುದು ಕಷ್ಟಸಾಧ್ಯ. ಆದರೂ ಕೊಟ್ಟ ಮಾತಿಗೆ ತಪ್ಪಬಾರದೆಂದು ಕರ್ನಾಟಕ ಮಹಾಜನ ವರದಿಗೆ ಒಪ್ಪಿತು. ಬೆಳಗಾವಿ, ಕಾರವಾರಗಳನ್ನು ತನಗೆ ನೀಡಲಿಲ್ಲ ಎಂಬ ಕಾರಣದಿಂದ ಮಹಾರಾಷ್ಟ್ರ ವರದಿಯನ್ನು ತಿರಸ್ಕರಿಸಿ ಗ್ರಾಮಘಟಕ ಪ್ರತಿಪಾದಿಸುವ, ಗುಜರಾತಿ ಗಡಿ ವಿಚಾರದಲ್ಲಿ ತಾನೆ ತಿರಸ್ಕರಿಸಿದ 'ಪಾಟಸ್ಕರ ಸೂತ್ರ'ವನ್ನು ಮುಂದಿಟ್ಟಿತು. ಏನಾದರೂ ಮಾಡಿ ಬೆಳಗಾವಿಯನ್ನು ಪಡೆಯಲೇಬೇಕೆಂದು ಇಂದಿಗೂ ಮಹಾರಾಷ್ಟ್ರ ಪ್ರಯತ್ನಿಸುತ್ತಿದೆ. ಆಗಾಗ ಆಕ್ರಮಣಕಾರಿ ಹೇಳಿಕೆಗಳನ್ನು ನೀಡುತ್ತಿದೆ. ೧೯೦೮ರಿಂದ ಗಡಿವಿಚಾರದಲ್ಲಿ ನೇಮಕವಾದ ನೆಹರು ಕಮಿಟಿ, ದಾರ ಕಮೀಷನ್, ಜೆ. ವಿ. ಪಿ. ಕಮೀಷನ್, ಖೇಳ್ಕರ್ ಅವಾರ್ಡ್, ವಾಂಚು ಸಮಿತಿ, ಎಸ್. ಆರ್. ಆಯೋಗದಿಂದ ಮಹಾಜನ್‌ವರೆಗೆ ಯಾರೊಬ್ಬರೂ ಮಹಾರಾಷ್ಟ್ರದ ಕಾರವಾರ, ಬೆಳಗಾವಿ ಬೇಡಿಕೆಯನ್ನು ಮನ್ನಿಸಿಲ್ಲ. ಆದರೂ ಅವರು ಪ್ರಯತ್ನ ಕೈಬಿಟ್ಟಿಲ್ಲ. ಕಾಸರಗೋಡು ವಿಚಾರದಲ್ಲಿ ಇ. ಎಂ. ಎಸ್. ನಂಬೂದರಿಪಾದ್‌ರವರೇ ಅದು ಕರ್ನಾಟಕದ್ದು ಎಂದಿದ್ದಾರೆ. ಆದರೆ ನಾವು ಗಂಭೀರ ಪ್ರಯತ್ನ ಮಾಡಲೇ ಇಲ್ಲ. ಇಂದಿನ ಕರ್ನಾಟಕಕ್ಕೆ ರಾಜಕೀಯ ಗಡಿಗಳು ಇವೆಯೇ ಹೊರತು ಭಾಷಿಕ ಅಥವಾ ಸಾಂಸ್ಕೃತಿಕ ಗಡಿಗಳೇ ಇಲ್ಲ. ಈಗ ಆಂಧ್ರದಲ್ಲಿ ಆರಂಭವಾಗಿರುವ 'ಪ್ರತ್ಯೇಕ ರಾಯಲು ಸೀಮಾ' ಆಂದೋಲನದವರು ರೂಪಿಸಿರುವ ರಾಯಲುಸೀಮೆ ನಕಾಶೆಯಲ್ಲಿ ಬಳ್ಳಾರಿ ಸೇರಿಸಿಕೊಂಡಿದ್ದಾರೆ. ೨೦೦೧ರಲ್ಲಿ ತಮಿಳು ವಿಮೋಚನಾ ರಂಗದವರು ತಮಿಳು ನಾಡಿನ ಜೊತೆಗೆ ಕೋಲಾರ, ಬೆಂಗಳೂರು, ಮಂಡ್ಯ, ಮೈಸೂರು ಸೇರಿದಂತೆ ಕರ್ನಾಟಕದ ೯ ಜಿಲ್ಲೆಗಳನ್ನು ಸೇರಿಸಿ 'ವಿಶಾಲ ದ್ರಾವಿಡ ನಾಡು' ರಚಿಸುವುದಾಗಿ ಘೋಷಿಸಿದ್ದಾರೆ. ''ಬೆಂಗಳೂರಿನಲ್ಲಿ ಕನ್ನಡಿಗರು ಅಲ್ಪಸಂಖ್ಯಾತರು. ಎಲ್ಲ ಭಾಷಿಕರೂ ಇದ್ದಾರೆ. ಕೇಂದ್ರದ ಪ್ರಮುಖ ಕೈಗಾರಿಕೆಗಳಿವೆ. ಇಲ್ಲಿ ಕನ್ನಡಿಗರು ಇತರ ಭಾಷಿಕರಿಗೆ ಕಿರುಕುಳ ನೀಡುತ್ತಿದ್ದಾರೆ. ಇದೆಲ್ಲಾ ತಪ್ಪಿಸಲು ಬೆಂಗಳೂರನ್ನು ಕೇಂದ್ರಾಡಳಿತ ಪ್ರದೇಶ ಮಾಡಿ'' ಎಂದು ವಿ. ವಿ. ಗಿರಿ ಅವರು ರಾಷ್ಟ್ರಪತಿ ಆಗಿದ್ದಾಗ ಮನವಿ ಮಾಡಿದ್ದರು. ಮತ್ತೆ ಆರ್. ವೆಂಕಟರಾಮನ್ ರಾಷ್ಟ್ರಪತಿ ಗಳಾದಾಗ ಮತ್ತೊಮ್ಮೆ ಮನವಿ ಮಾಡಿದ್ದರು. ಕೆ. ಜಿ. ಎಫ್. ಹೆಸರಿಗೆ ಕರ್ನಾಟಕದಲ್ಲಿದೆ. ಅಲ್ಲಿನ ಜನಸಂಖ್ಯೆಯಲ್ಲಿ ೮೫% ತಮಿಳರು. ಅನಧಿಕೃತವಾಗಿ ಅಲ್ಲಿರುವುದು ತಮಿಳುನಾಡು ಸರ್ಕಾರ!




ಮೈಸೂರಿನ ಸಂತ ಫಿಲೋಮಿನ ಪದವಿಪೂರ್ವ ಕಾಲೇಜಿನಲ್ಲಿ ನಡೆದ ನವಕರ್ನಾಟಕ ಪುಸ್ತಕ ಪ್ರದರ್ಶನವನ್ನು ಪ್ರಾಂಶುಪಾಲರಾದ ಕೆ. ಫಾ. ಎಂ. ವಿನ್ಸೆಂಟ್ ಉದ್ಘಾಟಿಸಿದರು.

**ರಾ. ನಂ. ಚಂದ್ರಶೇಖರ್**
೧, ಶ್ರೀನಿಲಯ, ಮಾರಮ್ಮ ದೇವಸ್ಥಾನದ ರಸ್ತೆ, ಕತ್ರಿಗುಪ್ಪೆ ಗ್ರಾಮ
ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

# ಮಹಾನ್ ಮಾನವತಾವಾದಿ ದಾರ್ಶನಿಕ

# ಎಂ. ಎನ್. ರಾಯ್



ಹೋರಾಟದ ಸಾಗರಕ್ಕೆ ಸಾವಿರಾರು ನದಿಗಳು. ಇದಕ್ಕೆ ಉತ್ತಮ ನಿದರ್ಶನ ನಮ್ಮ ಸ್ವಾತಂತ್ರ್ಯ ಸಂಗ್ರಾಮ. ಹಲವು ವಿಚಾರಧಾರೆ, ಸಂಘಟನೆಗಳಿಂದ ಪ್ರೇರೇಪಿತರಾದ ವ್ಯಕ್ತಿಗಳು ಬ್ರಿಟಿಷ್ ದಾಸ್ಯದ ಸಂಕೋಲೆಯನ್ನು ಕಿತ್ತೆಸೆಯಲು ಅಪಾರ ಶ್ರಮ ವಹಿಸಿದ್ದಾರೆ. ತ್ಯಾಗ, ಬಲಿದಾನಗಳನ್ನು ಮಾಡಿದ್ದಾರೆ. ಅಂತಹವರಲ್ಲಿ ಕೆಲವರಿಗೆ ಸ್ವತಂತ್ರ ಭಾರತದ ಬಗ್ಗೆ ಸ್ಪಷ್ಟ ಕಲ್ಪನೆಗಳಿದ್ದವು. ನವ ಸಮಾಜವನ್ನು ನಿರ್ಮಿಸುವುದರ ಬಗ್ಗೆ ಅನೇಕ ಯೋಜನೆಗಳಿದ್ದವು. ತಾವು ಭಾಗವಹಿಸುತ್ತಿದ್ದ ಸಂಘಟನೆಗಳ ಮುಖಾಂತರ ಅವುಗಳನ್ನು ಸಾಕಾರಗೊಳಿಸಲು ಪ್ರಯತ್ನಿಸುತ್ತಿದ್ದರು. ಆ ಅಪ್ರತಿಮ ಹೋರಾಟಗಾರರ ಗುಂಪಿಗೆ ಸೇರಿದ ವಿಶಿಷ್ಟ ಮಾನವತಾವಾದಿ, ದಾರ್ಶನಿಕರಾಗಿದ್ದವರು ಮಾನಬೇಂದ್ರನಾಥ್ ರಾಯ್.

ಮಾನಬೇಂದ್ರನಾಥ ರಾಯ್ ಈಗಿನ ಪಶ್ಚಿಮ ಬಂಗಾಲದ ೨೪ ಪರಗಣ ಜಿಲ್ಲೆಯ ಅರಬಾಲಿಯ ಎಂಬ ಸಣ್ಣ ಹಳ್ಳಿಯಲ್ಲಿ ಮಾರ್ಚ್ ೨೧, ೧೮೮೭ರಂದು ಜನಿಸಿದರು. ಅವರ ಮೂಲ ಹೆಸರು ನರೇಂದ್ರನಾಥ ಭಟ್ಟಾಚಾರ್ಯ. ತಂದೆ ಪಂಡಿತ ದೀನಬಂಧು ಭಟ್ಟಾಚಾರ್ಯ ಶಿಕ್ಷಕರಾಗಿದ್ದರು. ಪೌರೋಹಿತ್ಯದ ಹಿನ್ನೆಲೆಯಿದ್ದ ಈ ಕುಟುಂಬಕ್ಕೆ ಚಿಂಗ್ರಿಫೇಟ ಎಂಬ ಸಣ್ಣ ಗ್ರಾಮದಲ್ಲಿ ಸ್ವಲ್ಪ ಜಮೀನಿದ್ದುದರಿಂದ ದೀನಬಂಧು ಅಲ್ಲೇ ನೆಲೆವೂರಿದರು. ಮಾನಬೇಂದ್ರರ ಪ್ರಾರಂಭಿಕ ಶಿಕ್ಷಣ ಜರುಗಿದ್ದು ಈ ಗ್ರಾಮದಲ್ಲಿಯೇ. ನಂತರ ಪದವೀಧರರಾಗಲು ಕಲ್ಕತ್ತದ ಅರಬಿಂದೊ ಘೋಷ್ ಸ್ಥಾಪಿಸಿದ ನ್ಯಾಷನಲ್ ಕಾಲೇಜಿನ ಮೆಟ್ಟಿಲು ಹತ್ತಿದರು. ಗುರಿ ಸಾಧಿಸಿದ ನಂತರ ಸ್ವಲ್ಪ ಸಮಯ ತಾಂತ್ರಿಕ ಸಂಸ್ಥೆಯಲ್ಲಿ ಕಳೆದರು. ಅವರಿಗೆ ವಿದ್ಯಾರ್ಥಿ ದಿನಗಳಲ್ಲೇ ರಾಜಕೀಯ ಚಳುವಳಿಗಳಲ್ಲಿ ಆಸಕ್ತಿ. ಅವುಗಳ ಪ್ರಭಾವದಿಂದ ರಾಷ್ಟ್ರೀಯ ವಿಮೋಚನಾ ಚಳುವಳಿಯತ್ತ ಸೆಳೆಯಲ್ಪಟ್ಟರು. ಅದು ಬಂಗಾಲದಲ್ಲಿ ಕ್ರಾಂತಿಕಾರಿಗಳು ರಣಕಹಳೆಯನ್ನು ಮೊಳಗಿಸುತ್ತಿದ್ದ ಕಾಲ. ಬ್ರಿಟಿಷರನ್ನು ದೇಶದಿಂದ ತೊಲಗಿಸುವ ಪಣ ತೊಟ್ಟ ಕ್ರಾಂತಿಕಾರಿ ಚಟುವಟಿಕೆಗಳತ್ತ ತರುಣ ರಾಯ್ ಆಕರ್ಷಿತರಾದದ್ದು ಸಹಜವೇ ಆಗಿತ್ತು.

ರಾಯ್ ಜತೀಂದ್ರನಾಥ ಬ್ಯಾನರ್ಜಿಯ ನೇತೃತ್ವವಿದ್ದ 'ಅನುಶೀಲನ ಸಮಿತಿ' ಎಂಬ ಉಗ್ರಪಂಥದ ಸಕ್ರಿಯ ಕಾರ್ಯಕರ್ತರಾದರು. ೧೯೦೭ರಲ್ಲಿ ಜರುಗಿದ ಚಿಂಗ್ರಿಕಪೋಟ ರಾಜಕೀಯ ದರೋಡೆಯಲ್ಲಿ ಆಪಾದಿತರಾಗಿ ಪ್ರಥಮ ಬಾರಿ ಜೈಲುವಾಸಿಯಾದರು. ೧೯೧೦ರಲ್ಲಿ ಹೌರ ಗುಪ್ತ ಚಟುವಟಿಕೆಗಳ ಮೊಕದ್ದಮೆಯಿಂದ ಕಾರಾಗೃಹವಾಸ. ನಂತರ ಸರಿಯಾದ ಸಾಕ್ಷ್ಯಾಧಾರಗಳಿಲ್ಲದೆ ಬಂಧಮುಕ್ತರಾದ ಬಳಿಕ ಜಾವಾ ದ್ವೀಪ, ಬಾಟಾಬಿಯಾ, ಜಪಾನ, ಚೀನಾ ಹಾಗೂ ಅಮೆರಿಕಾ ದೇಶಗಳಿಗೆ ಕ್ರಾಂತಿಕಾರಿ ಚಟುವಟಿಕೆಗಳ ಗುಪ್ತಚಾರರಾಗಿ ಭೇಟಿ. ಜೂನ್ ೧೯೧೬ರಲ್ಲಿ ಅಮೆರಿಕದ ಸ್ಯಾನ್‌ಫ್ರಾನ್ಸಿಸ್ಕೋ ನಗರ ತಲುಪಿದರು. ಪೊಲೀಸರಿಗೆ ಇವರ ಸುಳಿವು ಸಿಗಲಿಕ್ಕೆ ಬಹಳ ಸಮಯವೇನೂ ಬೇಕಾಗಲಿಲ್ಲ. ಅವರಿಂದ ತಪ್ಪಿಸಿಕೊಳ್ಳಲು ರಾಯ್ ಪಾಲೊ ಆಲ್ಟೊ ನಗರಕ್ಕೆ ಧಾವಿಸಿದರು. ಅಲ್ಲಿನ ವಿಖ್ಯಾತ ಸ್ಟ್ಯಾನ್‌ಫೋರ್ಡ್ ವಿಶ್ವವಿದ್ಯಾನಿಲಯದಲ್ಲಿ ಭಾರತದಲ್ಲಿ ಅವರ ಕ್ರಾಂತಿಕಾರಿ ಒಡನಾಡಿಯಾಗಿದ್ದ ಧನಗೋಪಾಲ್ ಮುಖರ್ಜಿಯವರೊಡನೆ ಭೇಟಿ. ಧನಗೋಪಾಲ್‌ರ ಸಲಹೆಯ ಮೇರೆಗೆ ಅವರು ತಮ್ಮ ಹೆಸರನ್ನು ಮಾನಬೇಂದ್ರನಾಥ್ ರಾಯ್ (ಎಂ. ಎನ್. ರಾಯ್) ಎಂದು ಬದಲಾಯಿಸಿಕೊಂಡರು. ಈ ಘಟ್ಟದಲ್ಲೇ ಅವರು ಎಡಪಂಥೀಯ ವಿಚಾರಧಾರೆಯನ್ನು ಅಧ್ಯಯನ ಮಾಡಲು ತೊಡಗಿದರು. ಆಗಲೇ ಅವರಿಗೆ ಎವಲಿನ್ ಟ್ರೆಂಟ್ ಎಂಬ ವಿದ್ಯಾರ್ಥಿನಿಯ ಪರಿಚಯ. ಮಾರ್ಕ್ಸ್‌ವಾದ ಸಿದ್ಧಾಂತವೇ ಅವರ ನಡುವಿನ ಅನುರಾಗದ ಕೊಂಡಿಯಾಯಿತು! ಚರ್ಚೆ, ಅಧ್ಯಯನ ನಡೆಸುತ್ತ, ಸೈದ್ಧಾಂತಿಕ ಒಳ-ಹೊರಗುಗಳನ್ನು ವಿಶ್ಲೇಷಿಸುತ್ತ ಬೌದ್ಧಿಕವಾಗಿ ಇಬ್ಬರೂ ಬೆಳೆದರು. ನಂತರ ವಿವಾಹಿತರಾದರು. ಒಂದು ದಶಕದ ನಂತರ ಬೇರ್ಪಟ್ಟರು. ರಾಯ್ ಅಮೆರಿಕಾದಲ್ಲಿದ್ದಾಗ ಲಾಲಾ ಲಜಪತ ರಾಯ್ ಅವರನ್ನು ಭೇಟಿಯಾದದ್ದು ಇಬ್ಬರ ಜೀವನದಲ್ಲೂ ಒಂದು ವಿಶೇಷ ಘಟನೆ. ಅವರೀರ್ವರ ಸ್ನೇಹಕ್ಕೆ ಎಡಪಂಥೀಯ ವಿಚಾರಧಾರೆಯೇ ಮುಖ್ಯ ಪ್ರೇರಣೆ.

ನಂತರ ಎಂ. ಎನ್. ರಾಯ್ ಹಿಂದೂ-ಜರ್ಮನ್ ಒಳಸಂಚಿನ ಆಪಾದನೆಯಲ್ಲಿ ಸಿಲುಕಿದರು. ಇದರಿಂದ ಅವರು ಮೆಕ್ಸಿಕೊ ನಗರಕ್ಕೆ ತೆರಳಬೇಕಾಯಿತು. ರಷ್ಯಾದಲ್ಲಿ ಅಕ್ಟೋಬರ್ ಕ್ರಾಂತಿ ಜರುಗಿದ ಸಂದರ್ಭವದು. ಈ ಚರಿತ್ರಾರ್ಹ ಘಟನೆ ಇಡೀ ವಿಶ್ವದ ಗಮನ ಸೆಳೆಯಿತು. ಇದಾದ ಸ್ವಲ್ಪ ಸಮಯದಲ್ಲೇ ರಾಯ್‌ರಿಗೆ ಕಮ್ಯುನಿಸ್ಟ್ ಅಂತರರಾಷ್ಟ್ರೀಯ ಒಕ್ಕೂಟದ ಪ್ರತಿನಿಧಿಯಾದ ಬೊರೊಡಿನ್‌ರ ಪರಿಚಯ. ನಂತರ ರಾಯ್ ಅವರಿಗೆ ಮೆಕ್ಸಿಕನ್ ಸಮಾಜವಾದಿ ಪಕ್ಷದ ಪ್ರಧಾನ ಕಾರ್ಯದರ್ಶಿಯಾಗಿ ದುಡಿಯುವ ಅವಕಾಶ. ಮೆಕ್ಸಿಕೋದ ಕಮ್ಯುನಿಸ್ಟ್ ಪಕ್ಷ ಸ್ಥಾಪಿಸುವುದರಲ್ಲಿ ಅವರ ಪಾತ್ರ ಪ್ರಮುಖವಾದುದು. ಪ್ರಪಂಚದ ಎರಡನೇ ಕಮ್ಯುನಿಸ್ಟ್ ಪಕ್ಷವಾಗಿದ್ದದ್ದು ಅದರ ಹೆಗ್ಗಳಿಕೆ. ೧೯೧೯ರಲ್ಲಿ ಮೆಕ್ಸಿಕೋದ ಪ್ರತಿನಿಧಿಯಾಗಿ ಅಂತರರಾಷ್ಟ್ರೀಯ ಎರಡನೇ ಸಂಸತ್ತಿನಲ್ಲಿ ಪಾಲ್ಗೊಂಡರು. ಮೆಕ್ಸಿಕೋದ ಹೋರಾಟಗಾರರಿಗೆ ಹಾಗೂ ಕ್ರಾಂತಿಕಾರಿಗಳಿಗೆ ರಾಯ್ ಸ್ಫೂರ್ತಿಯ ಚಿಲುಮೆ.

ಈ ಸಂದರ್ಭದಲ್ಲೇ ಅವರ ಚೊಚ್ಚಲ ಕೃತಿ ''ಅಧ್ಯಕ್ಷ ವಿಲ್ಸನ್‌ರಿಗೊಂದು ಬಹಿರಂಗ ಪತ್ರ'' ಸ್ಪಾನಿಷ್ ಭಾಷೆಯಲ್ಲಿ ಪ್ರಕಟವಾಯಿತು. ಘಟನೆಗಳು ತೀವ್ರಗತಿಯಲ್ಲಿ ಜರುಗಿದವು. ಭಾರತದಲ್ಲಿ ಸಮಾಜವಾದಿ ಸರ್ಕಾರವನ್ನು ಸ್ಥಾಪಿಸಬೇಕೆಂಬ ತಮ್ಮ ಉದ್ದೇಶವನ್ನು ಕಾರ್ಯರೂಪಕ್ಕೆ ತರಲು ರಾಯ್ ರಷ್ಯಾದಲ್ಲಿ ನೆಲೆಸಲು ನಿರ್ಧರಿಸಿದರು. ಆ ಹೊತ್ತಿಗಾಗಲೇ ಅವರು ಅಂತರರಾಷ್ಟ್ರೀಯ ಮಟ್ಟದಲ್ಲಿ ಧೀಮಂತ ಕಮ್ಯುನಿಸ್ಟ್ ಚಿಂತಕರೆಂದು ಗುರುತಿಸಲ್ಪಟ್ಟಿದ್ದರು. ರಾಷ್ಟ್ರೀಯವಾದ ಮತ್ತು ವಸಾಹತುಶಾಹಿ ಅಂಶಗಳ ಬಗ್ಗೆ ತಮ್ಮ ಶ್ರೇಷ್ಠ ಪ್ರಬಂಧವನ್ನು ಬರೆದಿದ್ದು ಆ ಕಾಲಘಟ್ಟದಲ್ಲಿ. ಲೆನಿನ್‌ರು ಆ ನಿರ್ಣಯದ ಮೊದಲ ಪುಟದ ಎಡಭಾಗದಲ್ಲಿ ''ಕಾಮ್ರೇಡ್ ರಾಯ್‌ರಿಗೆ ವಿಮರ್ಶೆ ಹಾಗೂ ಸಲಹೆಗಳಿಗಾಗಿ'' ಎಂದು ಬರೆದಿದ್ದದ್ದು ಅಂತರರಾಷ್ಟ್ರೀಯ ಕಮ್ಯುನಿಸ್ಟ್ ಚಳುವಳಿಯಲ್ಲಿ ರಾಯ್ ಅವರ ಬಗೆಗಿದ್ದ ಗೌರವದ ದ್ಯೋತಕವೆನ್ನಬಹುದು.

**ಮ. ಶ್ರೀ. ಮುರಳಿ ಕೃಷ್ಣ**

ಹೋರಾಟದ ಸಾಗರಕ್ಕೆ ಸಾವಿರಾರು ನದಿಗಳು. ಇದಕ್ಕೆ ಉತ್ತಮ ನಿದರ್ಶನ ನಮ್ಮ ಸ್ವಾತಂತ್ರ್ಯ ಸಂಗ್ರಾಮ. ಹಲವು ವಿಚಾರಧಾರೆ, ಸಂಘಟನೆಗಳಿಂದ ಪ್ರೇರೇಪಿತರಾದ ವ್ಯಕ್ತಿಗಳು ಬ್ರಿಟಿಷ್ ದಾಸ್ಯದ ಸಂಕೋಲೆಯನ್ನು ಕಿತ್ತೆಸೆಯಲು ಅಪಾರ ಶ್ರಮ ವಹಿಸಿದ್ದಾರೆ. ತ್ಯಾಗ, ಬಲಿದಾನಗಳನ್ನು ಮಾಡಿದ್ದಾರೆ. ಅಂತಹವರಲ್ಲಿ ಕೆಲವರಿಗೆ ಸ್ವತಂತ್ರ ಭಾರತದ ಬಗ್ಗೆ ಸ್ಪಷ್ಟ ಕಲ್ಪನೆಗಳಿದ್ದವು. ನವ ಸಮಾಜವನ್ನು ನಿರ್ಮಿಸುವುದರ ಬಗ್ಗೆ ಅನೇಕ ಯೋಜನೆಗಳಿದ್ದವು. ತಾವು ಭಾಗವಹಿಸುತ್ತಿದ್ದ ಸಂಘಟನೆಗಳ ಮುಖಾಂತರ ಅವುಗಳನ್ನು ಸಾಕಾರಗೊಳಿಸಲು ಪ್ರಯತ್ನಿಸುತ್ತಿದ್ದರು. ಆ ಅಪ್ರತಿಮ ಹೋರಾಟಗಾರರ ಗುಂಪಿಗೆ ಸೇರಿದ ವಿಶಿಷ್ಟ ಮಾನವತಾವಾದಿ, ದಾರ್ಶನಿಕರಾಗಿದ್ದವರು ಮಾನಬೇಂದ್ರನಾಥ್ ರಾಯ್.

ಆದರೆ ಲೆನಿನ್ ಹಾಗೂ ರಾಯ್ ಇಬ್ಬರಿಗೂ ಕೆಲವು ವಿಷಯಗಳಲ್ಲಿ ಭಿನ್ನಾಭಿಪ್ರಾಯಗಳಿಲ್ಲದಿರಲಿಲ್ಲ. ಅದರಲ್ಲೂ ವಸಾಹತು ಮತ್ತು ವಿಮೋಚನಾ ಹೋರಾಟಗಳ ವಿಚಾರಗಳಲ್ಲಿ ಲೆನಿನ್‌ರ ನಿಲುವುಗಳ ಬಗ್ಗೆ ರಾಯ್‌ಗೆ ಸಹಮತವಿರಲಿಲ್ಲ. ಆದ್ದರಿಂದ ಅಂತರರಾಷ್ಟ್ರೀಯ ಕಮ್ಯುನಿಸ್ಟ್ ಸಂಸತ್ತಿನಲ್ಲಿ ಇವರೀರ್ವರು ತಮ್ಮ ಪ್ರಬಂಧ-ಪ್ರಣಾಲಿಕೆಗಳನ್ನು ಪ್ರತ್ಯೇಕವಾಗಿ ಮಂಡಿಸಿದರು. ರಾಯ್‌ರ ಅಭಿಪ್ರಾಯಗಳ ಬಗ್ಗೆ ಗಹನ, ಗಂಭೀರ ಚರ್ಚೆಗಳಾದವು. ಕೆಲವು ಮಾರ್ಪಾಟುಗಳೊಂದಿಗೆ ಅವರ ಪ್ರಬಂಧ, ಲೆನಿನ್‌ರ ಪ್ರಬಂಧದ ಜೊತೆಗೆ ಅಂಗೀಕೃತವಾಯಿತು. ನಂತರ ರಾಯ್ ಭಾರತದ ಸ್ವಾತಂತ್ರ್ಯಕ್ಕಾಗಿ ಹಾಗೂ ಅಲ್ಲಿ ಸಮಾಜವಾದಿ ವ್ಯವಸ್ಥೆಯನ್ನು ಸ್ಥಾಪಿಸಬೇಕೆಂಬ ಉದ್ದೇಶದಿಂದ ಹಲವು ದೇಶಗಳಿಗೆ ಭೇಟಿಯಿತ್ತರು. ತಮ್ಮ ಕ್ರಾಂತಿಕಾರಿ ಹಿನ್ನೆಲೆಯಿಂದಾಗಿ ಹಲವು ಸಂಕಷ್ಟಗಳಿಗೆ ಗುರಿಯಾಗಬೇಕಾಯಿತು. ಹಲವು ಸರ್ಕಾರಗಳು ಅವರನ್ನು ಗುಮಾನಿಯಿಂದ ಕಂಡು ಉಚ್ಚಾಟಿಸುತ್ತಿದ್ದುದು ಸರ್ವೇಸಾಮಾನ್ಯ.

೧೯೨೭ರಲ್ಲಿ ಅಂತರರಾಷ್ಟ್ರೀಯ ಕಮ್ಯುನಿಸ್ಟ್ ಸಂಸತ್ತಿನ ಪ್ರತಿನಿಧಿಯಾಗಿ ಚೀನಾಕ್ಕೆ ರಾಯ್ ಅವರ ಭೇಟಿ. ಆಗ ಅಲ್ಲಿ ಕಮ್ಯುನಿಸ್ಟ್ ಚಳುವಳಿ ಉತ್ತುಂಗದಲ್ಲಿತ್ತು. ಆದರೆ ಕ್ರಾಂತಿಗೆ ಸಂಬಂಧಪಟ್ಟಂತೆ ಅನೇಕ ಅಂಶಗಳ ಬಗ್ಗೆ ರಾಯ್ ಅವರಿಗೂ ಚೀನಾದ ಕಮ್ಯುನಿಸ್ಟ್ ಪಕ್ಷಕ್ಕೂ ಭಿನ್ನಾಭಿಪ್ರಾಯಗಳಿದ್ದವು. ಚೀನಾದಲ್ಲಿ ಕ್ರಾಂತಿ ಚಳುವಳಿ ಹಲವಾರು ತೀವ್ರ ತೆರನಾದ ಸಮಸ್ಯೆಗಳನ್ನು ಎದುರಿಸುತ್ತಿತ್ತು. ಈ ಬಿಕ್ಕಟ್ಟಿಗೆ ರಾಯ್‌ರ ವಿಚಾರಗಳೇ ಕಾರಣವೆಂದು ಆಪಾದಿಸಿ ಅವರನ್ನು ಅಂತರರಾಷ್ಟ್ರೀಯ ಕಮ್ಯುನಿಸ್ಟ್ ಸಂಸತ್ತಿನಿಂದ ಹೊರಗಿಡಲಾಯಿತು. ನಂತರ ಒಂದು ವರ್ಷ ಬರ್ಲಿನ್‌ನಲ್ಲಿ ವಾಸ. ಆಗ ಅವರಿಗೆ ಎಲನ್ ಗಟ್ಟಾಶಾಕ್ ಎಂಬ ಮಹಿಳೆಯ ಪರಿಚಯ. ಮುಂದೆ ಆಕೆ ಭಾರತಕ್ಕೆ ಬಂದು ರಾಯ್‌ರನ್ನು ವಿವಾಹವಾದರು.

ಭಾರತಕ್ಕೆ ಮರಳಿದ ರಾಯ್ ಬ್ರಿಟಿಷರ ವಿರುದ್ಧ ಕಾರ್ಯಾಚರಣೆಗಳಲ್ಲಿ ತೊಡಗಿದರು. ಕಾಂಗ್ರೆಸ್‌ನ ಅನೇಕ ಉನ್ನತ ನಾಯಕರನ್ನು ಭೇಟಿ ಮಾಡಿದರು. ಕಾನ್ಪುರ ಪಿತೂರಿ ಮೊಕದ್ದಮೆಯಲ್ಲಿ ಬ್ರಿಟಿಷರಿಂದ ಜೈಲಿಗೆ ತಳ್ಳಲ್ಪಟ್ಟರು. ಆರು ವರ್ಷಗಳ ಕಾಲ ಕಾರಾಗೃಹವಾಸ. ಈ ಅವಧಿಯಲ್ಲಿ ತತ್ವಶಾಸ್ತ್ರ, ವಿಜ್ಞಾನ ಹಾಗೂ ಇತರ ವಿಚಾರಗಳ ಬಗ್ಗೆ ಆಳವಾದ ಅಧ್ಯಯನ. ೧೯೩೬ರಲ್ಲಿ ಜೈಲಿನಿಂದ ಹೊರಬಂದಮೇಲೆ ಕಾಂಗ್ರೆಸ್ ಪಕ್ಷ ಸೇರಿ, ಎ.ಐ.ಸಿ.ಸಿ.ಯ ಸದಸ್ಯರಾದರು. ಪಕ್ಷದ ಹಾಗೂ ಗಾಂಧೀಜಿಯವರ ಕೆಲವು ನಿಲುವುಗಳ ಬಗ್ಗೆ ಅವರಿಗೆ ಮತಭೇದವಿತ್ತು. ಅವರ ವಿಚಾರ ಮಂಡನೆ, ವಾದಸರಣಿ ಯಾವತ್ತಿಗೂ ನೇರ, ಸ್ಪಷ್ಟ. ಮೇ ೧೯೩೯ರಲ್ಲಿ ಕಾಂಗ್ರೆಸ್‌ನ ಒಂದು ಭಾಗವಾಗಿ ಕ್ರಾಂತಿಕಾರಿ ಸದಸ್ಯರ ಕೂಟ ಅಸ್ತಿತ್ವಕ್ಕೆ ಬಂದಿತು. ಅದರ ರೂವಾರಿ ರಾಯ್. ಸೆಪ್ಟೆಂಬರ್ ೧೯೪೦ರಲ್ಲಿ ಕಾಂಗ್ರೆಸ್ ಪಕ್ಷದೊಂದಿಗಿದ್ದ ತಮ್ಮ ಸಂಬಂಧವನ್ನು ಕಡಿದುಕೊಂಡರು. ಡಿಸೆಂಬರ್‌ನಲ್ಲಿ ''ರ್‍ಯಾಡಿಕಲ್ ಡೆಮೋಕ್ರೆಟಿಕ್ ಪಾರ್ಟಿ''ಯನ್ನು ಕಟ್ಟಿದರು. ಆಗಲೇ ಅವರ ಶ್ರಮದಿಂದ ಭಾರತ ಕಾರ್ಮಿಕ ಒಕ್ಕೂಟದ ಸ್ಥಾಪನೆಯಾದದ್ದು.

ಈ ಅವಧಿಯಲ್ಲಿ ರಾಯ್‌ರ ಚಿಂತನೆಗಳಲ್ಲಿ ಕೆಲವು ಬದಲಾವಣೆಗಳಾದವು. ಮಾರ್ಕ್ಸ್‌ವಾದದ ತತ್ವಗಳನ್ನು ವಿಮರ್ಶೆಯ ಒರೆಗಲ್ಲಿಗೆ ಹಚ್ಚಿದಾಗ ಅವುಗಳ ಕೆಲವು ಇತಿಮಿತಿಗಳು ಅವರ ಅರಿವಿಗೆ ಬಂದವು. ''ಮಾರ್ಕ್ಸ್ ಮಂಡಿಸಿದ ಆರ್ಥಿಕ ಏಕನಿಖರತೆ (Economic Determinism) ಮಾನವನ ಸ್ವಾತಂತ್ರ್ಯವನ್ನೇ ಉಪೇಕ್ಷಿಸುತ್ತದೆ. ವ್ಯಕ್ತಿ ವಿಭಿನ್ನತೆ, ಕ್ರಿಯಾತ್ಮಕತೆ ಹಾಗೂ ಸ್ವಾಯತ್ತತೆಯ ಬಗ್ಗೆ ಈ ಸಿದ್ಧಾಂತ ಒತ್ತು ನೀಡಿಲ್ಲ. ಮಾನವನ ಚರಿತ್ರೆಯೆಂದರೆ ಬರೀ ವರ್ಗ ಸಂಘರ್ಷದ ಚರಿತ್ರೆಯಲ್ಲ. ಸಮಾಜದ ಬೆಳವಣಿಗೆಗೆ ಹಾಗೂ ಪ್ರಗತಿಯಲ್ಲಿ ಸಹಕಾರ, ಸಹಾಯ, ಒಡಂಬಡಿಕೆಗಳ ಜೊತೆ ಐಕ್ಯತೆಯೂ ಇದ್ದುದರಿಂದ ಅದು ವಿಘಟನೆಯಾಗಲಿಲ್ಲ,'' ಎಂಬುದು ಅವರ ವಿಶ್ಲೇಷಣೆಯಾಗಿತ್ತು. ಆದರೆ ಅವರು ಕಮ್ಯುನಿಸ್ಟ್ ಸಿದ್ಧಾಂತವನ್ನು ಸಾರಾಸಗಟಾಗಿ ತಿರಸ್ಕರಿಸಲಿಲ್ಲ. ತಮ್ಮ ಜೀವಮಾನದ ಕೊನೆಯವರೆಗೂ ಮಾರ್ಕ್ಸ್‌ನನ್ನು ಒಬ್ಬ ಸಾಮಾಜಿಕ ಪರಿವರ್ತನೆಯ ಕ್ರಾಂತಿಕಾರಿಯೆಂದು ಗೌರವಾದರದಿಂದ ಕಾಣುತ್ತಿದ್ದರು.



ಹಾಳಾದ್ದು ಈ 'ಅಕ್ಕಿ ಹಗರಣಕ್ಕೆ ಮೂಲ ಕಾರಣ 'ಬರಗಾಲ' ಕಂತ್ರೀ..!

ಗಾಂಧೀಜಿಯ ವಿಚಾರಗಳ ಬಗ್ಗೆ ಸಹ ಅವರಿಗೆ ಭಿನ್ನಾಭಿಪ್ರಾಯಗಳಿದ್ದವು. ಶ್ರೀಮಂತವರ್ಗದ ಭೂಮಾಲೀಕರು, ಕೈಗಾರಿಕೋದ್ಯಮಿಗಳು ಕಾರ್ಮಿಕರ ಹಾಗೂ ಕೃಷಿ ಕೆಲಸಗಾರರ ಹಿತ ರಕ್ಷಣೆ ಮಾಡುವವರೆಂಬುದು ಗಾಂಧೀಜಿಯವರ ನಿಲುವಾಗಿತ್ತು. ಆದರೆ ಶೋಷಕ ಹಾಗೂ ಶೋಷಿತ ವರ್ಗಗಳ ನಡುವೆ ಇರುವ ವೈರುಧ್ಯಗಳನ್ನು ಪರಿಗಣಿಸದ ಗಾಂಧೀಜಿಯವರ ಟ್ರಸ್ಟಿಷಿಪ್ ಪರಿಕಲ್ಪನೆ ಅನುಷ್ಠಾನದಲ್ಲಿ ಸೋಲುತ್ತದೆ ಎಂಬುದು ರಾಯ್‌ರ ಖಚಿತ ಅಭಿಪ್ರಾಯವಾಗಿತ್ತು. ಗಾಂಧೀಜಿ ಧರ್ಮ ಹಾಗೂ ರಾಜಕಾರಣಗಳ ಮಿಲನದ ಬಗ್ಗೆ ವಿಶೇಷ ಗಮನ ಹರಿಸಿದ್ದರು. ಆದರೆ ಈ ರೀತಿಯ ಮೇಳೈಸುವಿಕೆ ಪ್ರಜಾಪ್ರಭುತ್ವ ವ್ಯವಸ್ಥೆಗೆ ಮಾರಕ ಮತ್ತು ಗಾಂಧೀವಾದವು ಯಥಾಸ್ಥಿತಿ ವಾದವನ್ನು ಪುಷ್ಟೀಕರಿಸುತ್ತದೆ ಎಂಬುದಾಗಿ ರಾಯ್ ಪ್ರತಿಪಾದಿಸಿದರು. ಆದರೂ ಅವರಿಗೆ ಗಾಂಧೀಜಿ ನೈತಿಕತೆ, ಉನ್ನತ ಆದರ್ಶಗಳನ್ನು ಮೈಗೂಡಿಸಿಕೊಂಡಿದ್ದ ಒಬ್ಬ ಮಹಾಪುರುಷರು ಎಂಬ ಗೌರವವಿತ್ತು.

ಹೀಗೆ ದೀರ್ಘ ಚಿಂತನ-ಮಂಥನ ನಡೆಸಿ ಕೊನೆಗೆ ರಾಯ್ ತಮ್ಮ 'ಕ್ರಾಂತಿಕಾರಿ ಮಾನವತಾವಾದ'ವನ್ನು ಪ್ರತಿಪಾದಿಸಿದರು. ಇದರಲ್ಲಿ ಮುಖ್ಯವಾಗಿ ಪ್ರಸ್ತುತವಾಗಿದ್ದು ಸಂಘಟಿತ ಪ್ರಜಾಪ್ರಭುತ್ವ ವ್ಯವಸ್ಥೆಯ ನಿರ್ಮಾಣ ಹಾಗೂ ಪ್ರಜಾಸಮಿತಿಗಳ ರಚನೆ. ಅವರ ಸಂಘಟಿತ ಪ್ರಜಾಪ್ರಭುತ್ವ ವ್ಯವಸ್ಥೆಯ ಕಲ್ಪನೆಯಲ್ಲಿ ರಾಜಕೀಯ ಪಕ್ಷಗಳಿಗೆ ಸ್ಥಾನವಿಲ್ಲ ಮತ್ತು ವಿಕೇಂದ್ರೀಕರಣಕ್ಕೆ ಹೆಚ್ಚು ಪ್ರಾಮುಖ್ಯತೆ. ಹಳ್ಳಿಯಿಂದ ರಾಜ್ಯಮಟ್ಟದವರೆಗೆ ಪ್ರಜಾಸಮಿತಿಗಳನ್ನು ರಚಿಸಿ, ಅವುಗಳ ಮೂಲಕ ಜನರಿಗೆ ನೈಜ ಅಧಿಕಾರವನ್ನು ನೀಡುವುದು ಈ ವಾದದ ಸಾರಾಂಶ. ಒಟ್ಟಿನಲ್ಲಿ ವೈಯಕ್ತಿಕ ಮಟ್ಟದಲ್ಲಿ ತಾತ್ವಿಕ ಹಾಗೂ ನೈತಿಕ ಕ್ರಾಂತಿಯಾದಾಗ ಮಾತ್ರ ಸಮಾಜದ ಸರ್ವತೋಮುಖ ಅಭಿವೃದ್ಧಿ ಸಾಧ್ಯ ಎಂಬುದು ರಾಯ್‌ರ ದೃಷ್ಟಿಕೋನ. ಅವರ ಆದರ್ಶದ ಸಮಾಜದಲ್ಲಿ ವ್ಯಕ್ತಿಯೇ ಸಾರ್ವಭೌಮ. ಇಂತಹ ನಿಲುವಿಗೆ ಬದ್ಧರಾದ ರಾಯ್ ತಾವೇ ಸ್ಥಾಪಿಸಿದ್ದ ಕ್ರಾಂತಿಕಾರಿ ಪ್ರಜಾಪ್ರಭುತ್ವ ಪಕ್ಷವನ್ನು ವಿಸರ್ಜಿಸಿದರು. ನಂತರ ಮಾನವತಾ ಚಳುವಳಿಯ ಬೆಳವಣಿಗೆಗೆ ಹೆಚ್ಚು ಸಮಯ ವಿನಿಯೋಗಿಸಿದರು. ೧೯೫೪ರ ಜನವರಿ ೨೫ರಂದು ಡೆಹರಾಡೂನ್‌ನಲ್ಲಿ ಅಸು ನೀಗಿದರು.

ಅವರ ಜೀವನದಲ್ಲಿ ಮೂರು ಹಂತಗಳನ್ನು ಪ್ರಮುಖವಾಗಿ ಗುರುತಿಸಬಹುದು. ಮೊದಲನೆಯ ಹಂತ ಅವರ ತೀವ್ರಗಾಮಿತನ. ಅವರ ತಾರುಣ್ಯದಲ್ಲಿದ್ದಾಗಿನ ಬಂಗಾಲದ ಸಾಮಾಜಿಕ-ರಾಜಕೀಯ ಪರಿಸ್ಥಿತಿಯೂ ಇದಕ್ಕೆ ಪೂರಕವಾಗಿತ್ತೆನ್ನಬೇಕು. ಎರಡನೆಯದು ಅವರು ಕಮ್ಯುನಿಸ್ಟರಾಗಿ ಅಂತರರಾಷ್ಟ್ರೀಯ ಮಟ್ಟದಲ್ಲಿ ತಮ್ಮ ವಿಶಿಷ್ಟ ಛಾಪನ್ನು ಮೂಡಿಸಿದ್ದು. ಕೊನೆಯ ಹಂತ ಅವರು ಪ್ರಜಾಪ್ರಭುತ್ವ ಹಾಗೂ ಸಮಾಜವಾದಗಳನ್ನು ತೀವ್ರ ವಿಶ್ಲೇಷಣೆಗೆ ಒಳಪಡಿಸಿ ಕ್ರಾಂತಿಕಾರಿ ಮಾನವತಾವಾದದ ಹರಿಕಾರರಾದದ್ದು.

ರಾಯ್ ಅವರು ಬಹುಭಾಷಾ ಕೋವಿದ. ''ಕ್ರಾಂತಿ ಹಾಗೂ ಪ್ರತಿಸ್ಪರ್ಧಿ ಸಂಸ್ಕೃತಿ'', ''ನನ್ನ ಪ್ರತಿಪಾದನೆ'', ''ಕಾರಾಗೃಹದಿಂದ ಪತ್ರಗಳು'', ''ಕಾರಣ, ಕಾಲ್ಪನಿಕತೆ ಹಾಗೂ ಕ್ರಾಂತಿ'', ''ಬದಲಾವಣೆಯ ಹಾದಿಯಲ್ಲಿ ಭಾರತ'', ''ಕಮ್ಯುನಿಸಂನಿಂದಾಚೆಗೆ'', ''ಹೊಸದೃಷ್ಟಿ'', ''ಅಸಹಕಾರದ ಒಂದು ವರ್ಷ'', ''ಭಾರತದ ಸಮಸ್ಯೆಗಳು ಮತ್ತು ಪರಿಹಾರೋಪಾಯಗಳು'', ''ಭಾರತದ ಸಂವಿಧಾನ: ಒಂದು ಕರಡುಪ್ರತಿ'', ''ಸ್ವಾತಂತ್ರ್ಯದ ಸಮಸ್ಯೆ'' ಹಾಗೂ ಇತರ ಗ್ರಂಥಗಳು, ಕರಪತ್ರಗಳು ಹಾಗೂ ಕಿರುಹೊತ್ತಿಗೆಗಳ ಕರ್ತೃ.

ಅಂತೂ, ಯಾವಜ್ಜೀವ ನಂಬಿದ ಊರ್ಧ್ವ ಮೌಲ್ಯ, ಆದರ್ಶಗಳ ಬಗ್ಗೆ ಎಂ. ಎನ್. ರಾಯ್ ಅವರಿಗೆ ಇದ್ದ ಬದ್ಧತೆ ಅಪೂರ್ವ. ತಮ್ಮ ಸಾರ್ವಜನಿಕ ಜೀವನದಲ್ಲಿ ಎಂದೂ ಅಧಿಕಾರಕ್ಕಾಗಿ ಅವರು ಹೊತೊರೆಯಲಿಲ್ಲ. ರಾಜಕೀಯ ರಂಗದಲ್ಲಿ ಧ್ರುವತಾರೆ ಎನಿಸಿದರು. ಅನುಕರಣೀಯ ಸಾರ್ಥಕ ಜೀವನ ಅವರದು. ಇಂತಹ ಮಹಾ ಚೇತನ ಗತಿಸಿ ಐವತ್ತು ವರ್ಷಗಳು ಸಂದಿವೆ. ಈ ಸಂದರ್ಭದಲ್ಲಿ ಇಂತಹ ಮಹಾನ್ ಮಾನವತಾವಾದಿಯ ಜೀವನಾದರ್ಶಗಳನ್ನು ನೆನಪಿಸಿಕೊಳ್ಳುವ ಕಾರ್ಯಕ್ರಮಗಳು ಜರುಗಿರುವುದರ ವರದಿಗಳು ಕಡಿಮೆಯೇ. ಈ ಅವಜ್ಞೆ ಪ್ರಸ್ತುತ ನಮ್ಮ ರಾಜಕೀಯ-ಸಾಮಾಜಿಕ (ದು)ಸ್ಥಿತಿಯ ಕೈಗನ್ನಡಿಯೆನ್ನಬಹುದೆ ?

ಆಕರ: ಡಾ|| ವಿಘ್ನೇಶ್ ಎನ್. ಭಟ್ ಬರೆದ ಎಂ. ಎನ್. ರಾಯ್ ಪುಸ್ತಕ ಹಾಗೂ ಇತರ ಮೂಲಗಳು.

ಮ. ಶ್ರೀ. ಮುರಳಿ ಕೃಷ್ಣ
ನಂ. ೧೦೦, ೨ನೇ ''ಎ'' ಕ್ರಾಸ್, ಗವೀಪುರಂ ಬಡಾವಣೆ
ಬೆಂಗಳೂರು – ೫೬೦ ೦೧೯

ಮೂಲ : ಸಾದಾತ್ ಹಸನ್ ಮಾಂಟೊ
ಅನುವಾದ : ಡಾ|| ಮಹಾಬಲೇಶ್ವರ ರಾವ್



# ಗಲಭೆ ರಕ್ತ

ಮುಮ್ತಾಜ್ ತುಂಬ ಭಾವುಕವಾಗಿ ಮಾತನಾಡುತ್ತಿದ್ದ: ''ಇನ್ನೂರು ಸಾವಿರ ಹಿಂದೂ ಮುಸ್ಲಿಮರನ್ನು ಕೊಚ್ಚಿ ಕೊಲೆಗೈದರೆಂದು ನನಗೆ ಹೇಳಬೇಡಿ. ಇನ್ನೂರು ಸಾವಿರ ಜನರನ್ನು ಕೊಂದದ್ದು ದುರಂತವಲ್ಲ. ಆದರೆ ಈ ಅಪಾರ ಜೀವ ಹಾನಿ ವ್ಯರ್ಥ. ನೂರು ಸಾವಿರ ಹಿಂದೂಗಳನ್ನು ಕೊಂದ ಮುಸ್ಲಿಮರಿಗೆ ಹಿಂದೂ ಧರ್ಮವನ್ನೇ ಉಚ್ಚಾಟನೆ ಮಾಡಿದ್ದೇವೆ ಎಂಬ ಭಾವನೆ. ಆದರೆ ಹಿಂದೂ ಧರ್ಮ ಜೀವಂತವಾಗಿದೆ. ಅದು ಮುಂದೆಯೂ ಜೀವಂತವಾಗಿರುತ್ತದೆ. ನೂರು ಸಾವಿರ ಮುಸಲ್ಮಾನರನ್ನು ಕೊಂದಮೇಲೆ ಹಿಂದೂಗಳು ಇಸ್ಲಾಂ ಧರ್ಮದ ಉಚ್ಚಾಟನೆಯನ್ನು ಸಂಭ್ರಮದಿಂದ ಆಚರಿಸಿರಬಹುದು. ಆದರೆ ಇದರಿಂದ ಇಸ್ಲಾಂಗೇನೂ ಧಕ್ಕೆಯಾಗಿಲ್ಲ. ಬಂದೂಕಿನ ಸಹಾಯದಿಂದ ಧರ್ಮದ ಮೂಲೋತ್ಪಾಟನ ಮಾಡಬಹುದು ಎಂದು ಹುಂಬರು ಮಾತ್ರವೇ ಭಾವಿಸಬಹುದು. ಶ್ರದ್ಧೆ, ನಂಬಿಕೆ, ಅರ್ಪಣಾಭಾವ ಏನೇ ಹೆಸರಿನಿಂದ ಕರೆಯಿರಿ ಅದು ಆತ್ಮಕ್ಕೆ ಸಂಬಂಧಿಸಿದ ವಿಚಾರ; ಅದು ಭೌತಿಕವಲ್ಲ. – ಬಂದೂಕುಗಳು, ಚೂರಿಗಳು ಅದನ್ನು ನಾಶಗೊಳಿಸಲು ಸಾಧ್ಯವಿಲ್ಲ.''

ಆ ದಿವಸ ಮುಮ್ತಾಜ್ ತುಂಬ ಭಾವುಕವಾಗಿ ಬಿಟ್ಟಿದ್ದ. ನಾವು ಮೂವರು ಅವನನ್ನು ಬೀಳ್ಕೊಡಲು ಬಂದಿದ್ದೆವು. ಆತ ನಮಗೇನೂ ಗೊತ್ತಿಲ್ಲದ ಪಾಕಿಸ್ತಾನಕ್ಕೆ ಹೊರಟಿದ್ದ. ನಾವು ಮೂವರೂ ಹಿಂದೂಗಳು. ಪಶ್ಚಿಮ ಪಂಜಾಬ್, ಈಗ ಅದು ಪಾಕಿಸ್ತಾನವಾಗಿದೆ. ಅಲ್ಲಿ ನಮ್ಮ ಸಂಬಂಧಿಕರಿದ್ದಾರೆ. ಅವರಲ್ಲಿ ಕೆಲವರು ಹಿಂದೂ ವಿರೋಧಿ ಗಲಭೆಗಳಲ್ಲಿ ಪ್ರಾಣ ಕಳೆದುಕೊಂಡಿದ್ದಾರೆ. ಈ ಕಾರಣಕ್ಕಾಗಿಯೇ ಮುಮ್ತಾಜ್ ನಮ್ಮನ್ನು ಬಿಟ್ಟು ಹೋಗುತ್ತಿರುವುದೇ ?

ಒಂದು ದಿವಸ ಜುಗಲ್‌ಗೆ ಒಂದು ಕಾಗದ ಬಂದಿತು. ಅವನ ಚಿಕ್ಕಪ್ಪನನ್ನೂ ಲಾಹೋರಿನಲ್ಲಿ ಕೊಂದುಹಾಕಿದ್ದಾರೆಂದು ಆ ಪತ್ರದಲ್ಲಿ ತಿಳಿಸಲಾಗಿತ್ತು. ಅವನಿಗೆ ಅದನ್ನು ನಂಬುವುದಕ್ಕೆ ಆಗಲಿಲ್ಲ. ಆತ ಮುಮ್ತಾಜ್‌ಗೆ ಹೇಳಿದ : ''ಇಲ್ಲೂ ಕೂಡ ಹಿಂದೂ ಮುಸ್ಲಿಂ ಕೊಲೆಗಳು ಆರಂಭವಾದರೆ ನಾನೇನು ಮಾಡ್ತೇನೋ ನನಗೇ ಗೊತ್ತಿಲ್ಲ''

''ಏನು ಮಾಡ್ತೀಯಾ ?'' ಎಂದು ಮುಮ್ತಾಜ್ ಕೇಳಿದ.

''ನನಗೆ ಗೊತ್ತಿಲ್ಲ ಬಹುಶಃ ನಾನೇ ನಿನ್ನನ್ನು ಕೊಲ್ಲಬಹುದು.'' ಮುಮ್ತಾಜ್ ಮಾತನಾಡಲಿಲ್ಲ. ಮುಂದಿನ ಎಂಟು ದಿನಗಳ ಕಾಲ ಅವನು ಯಾರ ಜೊತೆಗೂ ಮಾತಾಡಲಿಲ್ಲ. ಒಂಬತ್ತನೆಯ ದಿನ ತಾನು ಆ ದಿನ ಮಧ್ಯಾಹ್ನ ಕರಾಚಿಗೆ ಹೊರಡಲಿದ್ದೇನೆ ಎಂದು ಎಲ್ಲರಿಗೂ ತಿಳಿಸಿದ. ನಾವು ಅವನಿಗೆ ಏನೂ ಹೇಳಲಿಲ್ಲ. ಅದರ ಬಗ್ಗೆ ಮಾತೂ ಆಡಲಿಲ್ಲ. ತನ್ನ ಮಾತಿನಿಂದಾಗಿಯೇ ಮುಮ್ತಾಜ್ ಕರಾಚಿಗೆ ಹೊರಟಿದ್ದಾನೆ ಎಂದು ಜುಗಲ್ ಭಾವಿಸಿದ. ಕೋಮುಗಲಭೆಯ ಹುಚ್ಚುತನದಿಂದ ತನ್ನ ಆಪ್ತ ಸ್ನೇಹಿತನನ್ನು ಕೊಲ್ಲುವ ಪರಿಸ್ಥಿತಿ ಬರಬಹುದೇ ಎಂಬ ಬಗ್ಗೆಯೂ ಅವನಿಗೆ ಗೊಂದಲ. ಅಂದು ಮಧ್ಯಾಹ್ನ ಜುಗಲ್ ತುಂಬ ಮೌನವಾಗಿದ್ದ. ಆದರೆ ಮುಮ್ತಾಜ್ ಮಾತ್ರ ಹೊರಡುವ ಗಳಿಗೆ ಹತ್ತಿರವಾದ ಹಾಗೆ ಮಾತು ಶುರು ಮಾಡಿದವನು ನಿಲ್ಲಿಸಲೇ ಇಲ್ಲ.

ಮುಮ್ತಾಜ್ ಹಾಸಿಗೆಯಿಂದ ಎದ್ದ ಗಳಿಗೆಯಿಂದಲೇ ಕುಡಿಯುವುದನ್ನು ಶುರುಮಾಡಿದ. ಪಿಕ್‌ನಿಕ್‌ಗೆ ಹೋಗುತ್ತಿರುವ ರೀತಿಯಲ್ಲಿ ಅವನು ಸಾಮಾನುಗಳನ್ನು ತುಂಬಿಸುತ್ತ ನಗೆಚಾಟಿಕೆಗಳನ್ನು ಸಿಡಿಸುತ್ತ ತನ್ನ ವಿನೋದಕ್ಕೆ ತಾನೆ ನಗುತ್ತಿದ್ದ. ಬೇರೆ ಯಾರಾದರೂ ಅವನನ್ನು ಅವತ್ತು ನೋಡಿದ್ದರೆ ಅವನು ಬೊಂಬಾಯಿ ಬಿಟ್ಟು ಹೋಗುತ್ತಿರುವುದು ಬಹಳ ಉತ್ತಮ ಎಂದು ಭಾವಿಸುತ್ತಿದ್ದರು. ಆದರೂ ಅವನ ಗಟ್ಟಿ ಗಂಟಲು, ಉಮೇದು ಇತ್ಯಾದಿಗಳಿಗೆ ನಾವು ಯಾರೂ ಮರುಳಾಗಲಿಲ್ಲ. ಅವನು ತನ್ನ ಭಾವನೆಗಳನ್ನು ಬಚ್ಚಿಡಲು, ತನ್ನನ್ನು ತಾನು ವಂಚಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾನೆ ಎಂಬುದು ನಮಗೆ ಗೊತ್ತು.

ಇದ್ದಕ್ಕಿದ್ದ ಹಾಗೆ ಬೊಂಬಾಯಿ ಬಿಟ್ಟು ಹೋಗುವ ಅವನ ನಿರ್ಧಾರದ ಬಗ್ಗೆ ನಾನು ಒಂದೆರಡು ಸಲ ಮಾತನಾಡಲು ಪ್ರಯತ್ನಿಸಿದೆ. ಆದರೆ ಅವನು ಆ ವಿಷಯದಲ್ಲಿ ಮಾತು ಮುಂದುವರಿಸುವುದಕ್ಕೆ ಎಡೆಕೊಡಲಿಲ್ಲ.

ಮೂರು ನಾಲ್ಕು ಗುಟುಕು ಕುಡಿದ ಮೇಲೆ ಜುಗಲ್ ಮತ್ತಷ್ಟು ಮೌನ ವಹಿಸಿದ. ಅಷ್ಟು ಮಾತ್ರವಲ್ಲದೆ ಪಕ್ಕದ ಕೋಣೆಗೆ ಹೋಗಿ ಮಲಗಿಬಿಟ್ಟ. ಬ್ರಿಜ್‌ಮೋಹನ್ ಮತ್ತು ನಾನು ಮುಮ್ತಾಜ್ ಜೊತೆ ಇದ್ದೆವು. ಮಾಡಬೇಕಾದ ಕೆಲಸ ಸಾಕಷ್ಟಿತ್ತು. ಮುಮ್ತಾಜ್ ಡಾಕ್ಟರರ ಬಿಲ್ ಪಾವತಿ ಮಾಡುವುದಿತ್ತು. ಅವನ ಬಟ್ಟೆಗಳು ಲಾಂಡ್ರಿಯಲ್ಲಿದ್ದವು ಇತ್ಯಾದಿ. ಈ ಎಲ್ಲ ಕೆಲಸಗಳನ್ನೂ ಆತ ಶರವೇಗದಲ್ಲಿ ಮುಗಿಸಿದ. ಆದರೂ ನಾವು ಸಿಗರೇಟು ಕೊಂಡುಕೊಳ್ಳುವುದಕ್ಕೆ ನಮ್ಮ ಅಂಗಡಿಗೆ ಹೋದಾಗ ಅವನು ಬ್ರಿಜ್‌ಮೋಹನನ ಹೆಗಲ ಮೇಲೆ ಕೈ ಹಾಕಿ

''ನನ್ನನ್ನು ನೀನು ನೆನಪು ಮಾಡಿಕೊಳ್ತೀಯಾ ಬ್ರಿಜ್... ಹತ್ತು ವರ್ಷಗಳ ಹಿಂದೆ ನಾವು ಉಪವಾಸದಿಂದ ಸಾಯುತ್ತಿದ್ದಾಗ ನಮ್ಮ ಈ ಅಂಗಡಿಯ ಗೋವಿಂದ ನಮಗೆ ಸಾಲ ಕೊಟ್ಟ ಅಲ್ವಾ?'' ಎಂದು ಹೇಳಿದ. ಅವನ ಕಣ್ಣುಗಳು ತೇವಗೊಂಡವು.

ನಾವು ಮನೆಗೆ ಬರುವವರೆಗೂ ಮತ್ತೆ ಅವನು ಮಾತಾಡಲಿಲ್ಲ. ಆಮೇಲೆ ಶುರುವಾಯ್ತು ಸುದೀರ್ಘ ಸ್ವಗತ. ಅವನ ಎಲ್ಲ ಮಾತುಗಳು ಅರ್ಥಪೂರ್ಣ ವಾಗಿರಲಿಲ್ಲ, ಆದರೆ ಅತ್ಯಂತ ಪ್ರಾಮಾಣಿಕತೆಯಿಂದ ಮಾತಾಡುತ್ತಿದ್ದ. ಹೀಗಾಗಿ ನಾವು ಅವನಿಗೆ ಅಡ್ಡಿಪಡಿಸಲಿಲ್ಲ. ಹೊರಡುವ ಸಮಯ ಬಂದಾಗ ಜುಗಲ್ ಬಂದ, ನಾವು ಬಂದರಿಗೆ ಹೋಗಲೆಂದು ಟ್ಯಾಕ್ಸಿ ಹತ್ತಿದೆವು. ಎಲ್ಲರೂ ಮೌನವಾಗಿದ್ದೆವು.

ಮುಮ್ತಾಜ್ ಕಿಟಕಿಯಿಂದ ಹೊರಗಡೆ ನೋಡುತ್ತಿದ್ದ. ಬೊಂಬಾಯಿಗೆ, ಅದರ ಭವ್ಯ ಕಟ್ಟಡಗಳಿಗೆ, ಸುಂದರ ದೃಶ್ಯಾವಳಿಗಳಿಗೆ ಮೌನವಾಗಿ ವಿದಾಯ ಹೇಳುತ್ತಿದ್ದ. ಬಂದರಿನಲ್ಲಿ ಪಾಕಿಸ್ತಾನಕ್ಕೆ ಹೊರಟ ಬಡ ನಿರಾಶ್ರಿತರ ಸಂದಣಿ. ಆದರೆ ನನ್ನ ಮಟ್ಟಿಗೆ ಹೇಳುವುದಾದರೆ, ಒಬ್ಬನೇ ಒಬ್ಬ ಅಂದು ಈ ದೇಶ ಬಿಟ್ಟು ಇನ್ನೊಂದು ದೇಶಕ್ಕೆ ಹೋಗುತ್ತಿದ್ದ. ಅಲ್ಲಿ ಅವನು ಎಷ್ಟು ವರ್ಷ ಬದುಕಿದರೂ ಪರಕೀಯನೇ.

ಅವನ ಬ್ಯಾಗ್‌ಗಳನ್ನು ಪರೀಕ್ಷಿಸಿದ ಮೇಲೆ, ಮುಮ್ತಾಜ್ ನಮ್ಮನ್ನು ಡೆಕ್‌ಗೆ ಬರಲು ವಿನಂತಿಸಿದ. ಜುಗಲ್‌ನ ಕೈ ಹಿಡಿದುಕೊಂಡು ಅವನು ''ಸಾಗರ ಮತ್ತು ಆಕಾಶ ಎಲ್ಲಿ ಸಂಧಿಸುತ್ತವೆ ಎಂದು ಹೇಳಬಹುದು? ಅದೊಂದು ಭ್ರಮೆ. ಏಕೆಂದರೆ ಅವೆರಡೂ ಸಂಧಿಸಲು ಸಾಧ್ಯವೇ ಇಲ್ಲ. ಆದರೆ ಎಂಥ ಸುಂದರ ಕಲ್ಪನೆ ಅಲ್ಲವೆ?'' ಎಂದು ಹೇಳಿದ.

ಜುಗಲ್ ಮಾತಾಡಲಿಲ್ಲ. ಪ್ರಾಯಶಃ ಅವನು ಇನ್ನೇನೋ ಯೋಚಿಸುತ್ತಿದ್ದ: ''ಒಂದು ವೇಳೆ ಹಾಗೇನಾದ್ರೂ ಆದ್ರೆ, ನಾನು ನಿನ್ನನ್ನು ಕೊಲ್ಲಬಹುದು.''

ಮುಮ್ತಾಜ್ ಬಾರ್‌ನಲ್ಲಿ ಕೊನ್ಯಾಕ್‌ಗೆ ಆರ್ಡರ್ ಮಾಡಿದ.

ಏಕೆಂದರೆ ಬೆಳಗ್ಗಿನಿಂದ ಅವನು ಅದನ್ನೇ ಕುಡೀತಾ ಇದ್ದ. ನಾವು ನಾಲ್ವರೂ ಅಲ್ಲಿ ನಿಂತಿದ್ದೆವು. ಕನ್ನಡಕಗಳು ನಮ್ಮ ಕೈಯಲ್ಲಿದ್ದವು. ನಿರಾಶ್ರಿತರು ಹಡಗನ್ನೇರಲು ಆರಂಭಿಸಿದರು. ಜುಗಲ್ ತನ್ನ ಗ್ಲಾಸಿನಲ್ಲಿರುವುದನ್ನು ಗಟಗಟನೆ ಕುಡಿದು ಮುಮ್ತಾಜ್‌ಗೆ ''ನನ್ನನ್ನು ಕ್ಷಮಿಸು. ಆ ದಿವಸ ನಾನು ನಿನ್ನನ್ನು ತುಂಬ ನೋಯಿಸಿದೆ ಅಂತ ಕಾಣುತ್ತೆ'' ಎಂದ. ಸುದೀರ್ಘ ಮೌನದ ಬಳಿಕ ಮುಮ್ತಾಜ್ ಪ್ರಶ್ನಿಸಿದ : ''ನಾನು ನಿನ್ನನ್ನು ಕೊಂದರೂ ಕೊಲ್ಲಬಹುದು ಅಂತ ಆ ದಿವಸ ಹೇಳಿದೆಯಲ್ಲ, ನಿಜವಾಗಿಯೂ ನಿನಗೆ ಹಾಗೆ ಅನ್ನಿಸಿತ್ತಾ ?''

ಜುಗಲ್ ತಲೆದೂಗಿ ''ಹೌದು. ಆದರೆ ಆ ಬಗ್ಗೆ ನಾನು ವಿಷಾದಿಸುತ್ತೇನೆ'' ಎಂದ. ''ಒಂದು ವೇಳೆ ನೀನು ನನ್ನನ್ನು ಕೊಂದರೆ, ನಿನಗೆ ಇನ್ನೂ ಹೆಚ್ಚಿನ ವಿಷಾದವಾಗುತ್ತದೆ.'' ಮುಮ್ತಾಜ್ ತತ್ವಜ್ಞಾನಿಯ ಹಾಗೆ ಹೇಳಿದ. ''ನೀನು ಕೊಂದದ್ದು ನಿನ್ನ ಮುಸ್ಲಿಂ ಗೆಳೆಯ ಮುಮ್ತಾಜ್‌ನನ್ನಲ್ಲ, ಆದರೆ ಒಬ್ಬ ಮನುಷ್ಯನನ್ನು ಕೊಂದೆ ಎಂದು ನಿನಗೆ ಅನ್ನಿಸುತ್ತದೆ. ಅಂದರೆ, ಅವನೊಬ್ಬ ಸೂಳೆ ಮಗನಾಗಿದ್ದರೆ ಅವನನ್ನು ಕೊಂದ ಮಾತ್ರಕ್ಕೆ ಅವನೊಳಗಿನ ಸೂಳೆ ಮಗನನ್ನು ಕೊಂದ ಹಾಗೆ ಆಗೋಲ್ಲ. ಅದೇ ರೀತಿ ಮುಸ್ಲಿಮನನ್ನು ಕೊಂದರೆ ಅವನ ಮುಸ್ಲಿಮತನವನ್ನು ಕೊಂದ ಹಾಗೆ ಆಗೊಲ್ಲ. ಅವನನ್ನೇ ಕೊಂದ ಹಾಗೆ ಆಗುತ್ತಷ್ಟೆ. ಅವನ ಹೆಣ ಮುಸ್ಲಿಮರ ಕೈಗೆ ಸಿಕ್ಕಿದರೆ ಇನ್ನೊಂದು ಸಮಾಧಿ ಎದ್ದು ಬರುತ್ತಷ್ಟೆ. ಆದರೆ ಕೊಲೆ ಮಾಡಿದ್ದರಿಂದ ಜಗತ್ತಿನಲ್ಲಿ ಒಬ್ಬ ಮನುಷ್ಯ ಕಡಿಮೆ ಆದ ಹಾಗೆ ಆಗುತ್ತದೆ.''

ಒಂದು ಗಳಿಗೆ ಮಾತು ನಿಲ್ಲಿಸಿ ಉಸಿರೆಳೆದುಕೊಂಡು ಮತ್ತೆ ಮುಂದುವರೆಸಿದ : ''ನೀನು ನನ್ನನ್ನು ಕೊಂದರೆ, ನನ್ನ ಮುಸ್ಲಿಂ ಗೆಳೆಯರು ನನ್ನನ್ನು ಹುತಾತ್ಮ ಎಂದು ಕರೆಯುವ ಸಾಧ್ಯತೆಗಳಿವೆ. ಹಾಗೇನಾದರೂ ಆದರೆ, ನಾನು ಆಣೆ ಮಾಡಿ ಹೇಳುತ್ತೇನೆ. ನಾನು ನನ್ನ ಗೋರಿಯಿಂದ ಮೇಲೆದ್ದು ನನಗೆ ಈ ಪದವಿ ಬೇಡ. ಏಕೆಂದರೆ ನಾನು ಯಾವ ಪರೀಕ್ಷೆಯನ್ನೂ ತೆಗೆದು ಕೊಂಡಿಲ್ಲ ಎಂದು ಕೂಗಿ ಹೇಳುತ್ತೇನೆ. ಲಾಹೋರಿನಲ್ಲಿ, ಒಬ್ಬ ಮುಸ್ಲಿಂ ನಿನ್ನ ಚಿಕ್ಕಪ್ಪನನ್ನು ಕೊಂದ. ನೀನು ಮುಂಬೈನಲ್ಲಿ ಆ ಸುದ್ದಿ ಕೇಳಿ ನನ್ನ ಕೊಂದೆ ಅಂತಿದ್ದೆ. ಇದರಿಂದ ನಿಂಗೆ ಯಾವ ಪದಕಗಳು ಸಿಗುತ್ತಿದ್ದವು, ಹೇಳು ? ನಿನ್ನ ಚಿಕ್ಕಪ್ಪ ಹಾಗೂ ಅವನ ಕೊಲೆಗಡುಕನ ಕತೆ ಏನು ? ಅವರಿಗೆ ಯಾವ ಗೌರವ ಲಭಿಸುತ್ತದೆ ?''

''ನಾನು ಹೇಳ್ತೀನೆ, ಯಾರು ಸತ್ತರೋ ಅವರನ್ನು ನಾಯಿಗಳನ್ನು ಕೊಂದ ಹಾಗೆ ಕೊಂದರು. ಯಾರು ಕೊಂದರೋ ಅವರು ಸುಮ್ಮನೆ ವ್ಯರ್ಥ ಕೊಂದರು.''

''ನೀನು ಹೇಳಿದ್ದು ಸರಿ'' ಎಂದೆ ನಾನು.

''ಇಲ್ಲ, ಇಲ್ಲ'' ಆತಂಕದ ದನಿಯಲ್ಲಿ ಅವನು ಹೇಳಿದ : ''ನಾನು ಹೇಳಿದ್ದು ಸರಿ ಇರಬಹುದು. ಆದರೆ ನಾನು ಏನು ಹೇಳಬೇಕಾಗಿತ್ತೋ ಅದನ್ನು ಸರಿಯಾಗಿ ಹೇಳಲಿಕ್ಕೆ ಆಗಲಿಲ್ಲ. ನಾನು ಧರ್ಮ ಅಥವಾ ಮತ ಅಂತ ಹೇಳುವಾಗ ಶೇ. ೯೦ರಷ್ಟು ಜನರನ್ನು ಬಾಧಿಸುತ್ತಿರುವ ಈ ಸಾಂಕ್ರಾಮಿಕ ಭಾವನೆಯನ್ನು ದೃಷ್ಟಿಯಲ್ಲಿಟ್ಟುಕೊಂಡಿಲ್ಲ. ನನ್ನ ಪಾಲಿಗೆ ಒಬ್ಬ ವ್ಯಕ್ತಿಯನ್ನು ಅನನ್ಯನನ್ನಾಗಿಸುವುದು, ಮಂದೆಯಿಂದ ಪ್ರತ್ಯೇಕಿಸುವುದು ಹಾಗೂ ಅವನ ಮಾನವೀಯತೆಯನ್ನು ಸಾಬೀತು ಪಡಿಸುವುದೇ ಮತ ಅಥವಾ ಧರ್ಮ.'' ಆಮೇಲೆ ಅವನ ಕಣ್ಣುಗಳಲ್ಲಿ ಒಂದು ವಿಶೇಷ ಹೊಳಪು ಉಕ್ಕಿತು. ''ಈ ಮನುಷ್ಯನ ಬಗ್ಗೆ ನಾನು ನಿನಗೆ ಹೇಳ್ತೀನೆ. ಆತ ತೀರ ಹೀನವ್ಯಕ್ತಿ, ಉಜ್ವಲ ಆತ್ಮದ ಕಟ್ಟಾ ಹಿಂದೂವಾದಿ.''

''ನೀನು ಯಾರ ಬಗ್ಗೆ ಹೇಳ್ತಾ ಇದ್ದೀಯಾ ?'' ನಾನು ಕೇಳಿದೆ.

''ಒಬ್ಬ ತಲೆಹಿಡುಕ.''

ನಾವು ಬೆಚ್ಚಿಬಿದ್ದೆವು. ''ನೀನು ತಲೆಹಿಡುಕ ಅಂದೆಯಾ ?'' ನಾನು ಕೇಳಿದೆ. ಅವನು ಹೌದೆಂದು ತಲೆತೂಗಿದ. ''ಹೌದು, ಎಂಥ ಮನುಷ್ಯ ? ಲೋಕದ ದೃಷ್ಟಿಯಲ್ಲಿ ಅವನೊಬ್ಬ ತಲೆಹಿಡುಕ, ಹೆಣ್ಣುಗಳನ್ನು ಸರಬರಾಜು ಮಾಡುವವ'' ಹೀಗೆಂದ ಮುಮ್ತಾಜ್ ಅವನ ಕಥೆ ಹೇಳಲು ಶುರುಮಾಡಿದ.

''ಅವನ ಪೂರ್ತಿ ಹೆಸರು ನನಗೆ ಗೊತ್ತಿಲ್ಲ. ಬಹುಶಃ ಸಹಾಯಿ ಅಂತ ಇರ್ಬೇಕು. ಅವನು ಮದ್ರಾಸಿನಿಂದ ಬಂದವನು. ಅವನ ಅಭ್ಯಾಸಗಳು ಬಲು ವಿಚಿತ್ರ. ಅವನ ಮನೆ ಬಹಳ ಚಿಕ್ಕದು. ಆದರೆ ಅದು ತುಂಬ ಚೊಕ್ಕಟ

ವಾಗಿರುತ್ತಿತ್ತು. ಮನೆಯಲ್ಲಿ ಹಾಸಿಗೆಗಳಿಲ್ಲ. ಆದರೆ ಸ್ವಚ್ಛವಾದ ದಿಂಬುಗಳಿದ್ದವು. ಒಬ್ಬ ಸೇವಕನಿದ್ದ. ಬಹಳಷ್ಟು ಕೆಲಸಗಳನ್ನು ಸೆಹಾಯಿ ಮಾಡುತ್ತಿದ್ದ. ಕಸಗುಡಿಸಿ ಒರೆಸುವುದನ್ನೆಲ್ಲ ಅವನೇ ಮಾಡುತ್ತಿದ್ದ. ಆತ ನೇರ ನಡೆನುಡಿಯ ನಿಸ್ಪೃಹ ವ್ಯಕ್ತಿ. ಉದಾಹರಣೆಗೆ, ರಾತ್ರಿ ತುಂಬ ತಡವಾಗಿದೆ. ಮದ್ಯ ಖಾಲಿಯಾಗಿದೆ ಎಂದಾದರೆ ''ಸಾಹೇಬರೆ, ಸುಮ್ಮನೆ ದುಡ್ಡು ದಂಡ ಮಾಡಬೇಡಿ. ಈ ಹೊತ್ತಿನಲ್ಲಿ ಈ ಭಾಗದಲ್ಲಿ ನಕಲಿ ಮದ್ಯ ಮಾರಾಟ ಮಾಡ್ತಾರೆ'' ಅಂತ ಹೇಳ್ತಿದ್ದ. ಯಾವುದಾದರೂ ಹುಡುಗಿಯ ಬಗ್ಗೆ ಅವನಿಗೇನಾದರೂ ಗುಮಾನಿ ಇದ್ದರೆ, ನಿಮಗೆ ಅದನ್ನಾತ ಹೇಳುತ್ತಿದ್ದ. ಒಂದು ಸಲ ಅವನು ''ನಾನು ಈಗಾಗಲೆ ಇಪ್ಪತ್ತು ಸಾವಿರ ರೂಪಾಯಿ ಉಳಿತಾಯ ಮಾಡಿದ್ದೇನೆ'' ಎಂದು ಹೇಳಿದ್ದ. ಶೇ. ೨೫ರ ದರದಲ್ಲಿ ಇಷ್ಟು ದುಡ್ಡು ಸಂಗ್ರಹಿಸಲು ಅವನಿಗೆ ಮೂರು ವರ್ಷ ಬೇಕಾಯಿತು. ''ಇನ್ನೊಂದು ಹತ್ತು ಸಾವಿರ ರೂಪಾಯಿ ದುಡ್ಡು ಮಾಡಿಕೊಂಡು ಆಮೇಲೆ ಬನಾರಸ್‌ಗೆ ಹೋಗಿ ನನ್ನದೇ ಬಟ್ಟೆ ಅಂಗಡಿ ತೆರೀತೇನೆ.'' ಅದಕ್ಕಿಂತ ಹೆಚ್ಚು ದುಡ್ಡು ಅವನಿಗೆ ಯಾಕೆ ಬೇಡವಾಯಿತು ! ಬಟ್ಟೆ ವ್ಯಾಪಾರದಲ್ಲಿ ಅವನಿಗೆ ಯಾಕೆ ಆಸಕ್ತಿ ಹುಟ್ಟಿತು ? ನನಗೆ ಗೊತ್ತಾಗಲಿಲ್ಲ.''

''ವಿಚಿತ್ರ ಮನುಷ್ಯ'' ನಾನೆಂದೆ.

ಮುಮ್ತಾಜ್ ಮುಂದುವರಿಸಿದ. ''ಅವನು ಮೇಲೆ ಕಾಣುವ ಹಾಗೆ ಒಳಗೆ ಅಲ್ಲಾ ಎಂದು ನನಗೆ ಅನ್ನಿಸಿತ್ತು. ಅವನು ದೊಡ್ಡ ಮೋಸಗಾರ ಎಂದು ಭಾವಿಸಿದ್ದೆ. ನಂಬಲಿಕ್ಕೆ ಆಗದ ಸಂಗತಿ ಎಂದರೆ ತನ್ನ ಗಿರಾಕಿಗಳಿಗೆ ಸರಬರಾಜು ಮಾಡುತ್ತಿದ್ದ ಎಲ್ಲ ಹುಡುಗಿಯರನ್ನು ಅವನು ತನ್ನ ಹೆಣ್ಣು ಮಕ್ಕಳೆಂದೇ ಭಾವಿಸುತ್ತಿದ್ದ. ಅವರಲ್ಲಿ ಪ್ರತಿಯೊಬ್ಬರ ಹೆಸರಿನಲ್ಲೂ ಒಂದು ಅಂಚೆ ಉಳಿತಾಯ ಖಾತೆ ತೆರೆದು ತಮ್ಮ ಸಂಪಾದನೆಯಲ್ಲಿ ಉಳಿತಾಯವನ್ನು ಆ ಖಾತೆಗೆ ತುಂಬಲು ಒತ್ತಾಯಿಸುತ್ತಿದ್ದ. ಕೆಲವು ಹುಡುಗಿಯರ ಸ್ವಂತ ವೆಚ್ಚವನ್ನು ತಾನೇ ನೋಡಿಕೊಳ್ಳುತ್ತಿದ್ದ. ಇವೆಲ್ಲ ನನ್ನ ಪಾಲಿಗೆ ಅವಾಸ್ತವಿಕ ಅನ್ನಿಸುತ್ತೆ. ಏಕೆಂದರೆ ನಿಜಜೀವನದಲ್ಲಿ ಯಾರೂ ಹೀಗೆ ಮಾಡುವುದಿಲ್ಲ. ಒಂದು ದಿನ ನಾನು ಅವನನ್ನು ನೋಡಲು ಹೋಗಿದ್ದೆ. ಆಗ ಅವನು ಹೇಳಿದ, ''ಇವತ್ತು ಅಮೀನಾ ಹಾಗೂ ಸಕೀನಾ ಇಬ್ಬರಿಗೂ ವಾರದ ರಜೆ. ನೋಡು, ಅವರು ಮುಸ್ಲಿಮರು. ಹೀಗಾಗಿ ಅವರಿಗೆ ಆಗಾಗ್ಗೆ ಮಾಂಸ ತಿನ್ನುವ ಚಪಲ. ಆದರೆ ಉಳಿದ ನಾವೆಲ್ಲ ಸಸ್ಯಾಹಾರಿಗಳಾದ್ದರಿಂದ ಈ ಮನೆಯಲ್ಲಿ ಮಾಂಸದಡುಗೆ ನಿಷೇಧ.'' ಒಂದು ದಿನ ಅವನು ಹೇಳಿದ. ಅಹಮದಾಬಾದಿನ ಹಿಂದೂ ಹುಡುಗಿಯ ಮದುವೆಯನ್ನು ಅವನು ತನ್ನ ಮುಸ್ಲಿಂ ಗಿರಾಕಿ ಜೊತೆ ಕುದುರಿಸಿದ್ದ. ಆ ಹುಡುಗಿ ಲಾಹೋರಿನಿಂದ ಅವನಿಗೆ ಹೀಗೆ ಪತ್ರ ಬರೆದಿದ್ದಳು, ''ನಾನು ದಾತ ಸಾಹಿಬ್‌ರ ದರ್ಗಾಕ್ಕೆ ಭೇಟಿಕೊಟ್ಟು ಹರಕೆ ಹೊತ್ತೆ. ಅದು ಫಲಿಸಿದೆ. ಆದಷ್ಟು ಬೇಗನೆ ನಿನ್ನ ಉಳಿತಾಯ ಮೂವತ್ತು ಸಾವಿರ ರೂಪಾಯಿ ಆಗಲಿ ಮತ್ತು ನೀನು ಬನಾರಸ್‌ಗೆ ಹೋಗಿ ಬೇಗ ಬಟ್ಟೆ ಅಂಗಡಿ ತೆರೆಯುವ ಹಾಗಾಗಲಿ ಅಂತ. ನಾನು ಇನ್ನೊಂದು ಹರಕೆ ಹೇಳಿಕೊಳ್ಳಬೇಕೆಂದಿದ್ದೇನೆ''. ಜನಪ್ರಿಯ ಮುಸ್ಲಿಮನ ಬಗ್ಗೆ ಈ ಕತೆಯನ್ನು ನನಗೆ ಹೇಳುತ್ತಿದ್ದಾನೆ. ಏಕೆಂದರೆ ನಾನೊಬ್ಬ ಮುಸ್ಲಿಂ ಎಂದು ಭಾವಿಸಿ ನಗಾಡಿದೆ.''

## ದಿಲ್ಲಿ

ದಿಲ್ಲಿ ಇಲ್ಲಿ ಎಲ್ಲ ರೀತಿಯ  
ಮಲ್ಲಮಲ್ಲಿಯರಿದ್ದಾರೆ  
ಗೆಲ್ಲಬೇಕೆಂದರೆ ಎರಡು ಬಿಡು  
ಮೌಲ್ಯಗಳು ಮಾನವತೆಯ ಮಂತ್ರ  
ಸಿಕ್ಕಲ್ಲಿ ವಾವ್ಹಾ ವಾಹ್ವಾ ಎನ್ನು  
ಅದೇ ಮುನ್ನಡೆದು ಸಾಗುವ ತಂತ್ರ

**ಶೈಲಜಾ ಉಡಚಣ**  
ಚೇತನ, ಜೇವರ್ಗಿ ಕಾಲನಿ  
ಮೇಲ್‌ಸೇತುವೆ ಹತ್ತಿರ, ಗುಲ್ಬರ್ಗಾ - ೫೮೫೧೦೨

''ಹಾಗಾದರೆ ನಿನ್ನ ಯೋಚನೆ ತಪ್ಪೇ ?'' ಎಂದು ನಾನು ಮುಮ್ತಾಜ್‌ನನ್ನು ಪ್ರಶ್ನಿಸಿದೆ. ''ಹೌದು - ಅವನು ಹೊರನೋಟಕ್ಕೆ ಹೇಗೆ ಕಾಣುತ್ತಾನೋ ಒಳಗೂ ಅದೇ ರೀತಿ. ಏನೂ ವ್ಯತ್ಯಾಸವಿಲ್ಲ. ಅವನಲ್ಲಿ ದೋಷಗಳಿಲ್ಲವೆಂದಲ್ಲ. ಆದರೆ ಆತ ಅದ್ಭುತ ವ್ಯಕ್ತಿ.''

''ಅವನು ಮೋಸಗಾರನಲ್ಲ ಎಂದು ನೀನು ಹೇಗೆ ಕಂಡುಕೊಂಡೆ'' ಇಷ್ಟರವರೆಗೆ ಬಾಯಿ ತೆರೆಯದಿದ್ದ ಜುಗಲ್ ಪ್ರಶ್ನಿಸಿದ. ಮುಮ್ತಾಜ್ ಹೇಳಿದ: ''ಅವನ ಸಾವಿನ ಮೂಲಕ. ಹಿಂದೂ-ಮುಸ್ಲಿಂ ಹತ್ಯಾಕಾಂಡ ಆರಂಭವಾಗಿತ್ತು. ಒಂದು ಮುಂಜಾನೆ, ನಾನು ಭಿಂಡಿ ಬಜಾರ್ ಮೂಲಕ ಅವಸರವಸರವಾಗಿ ಹಾದು ಹೋಗುತ್ತಿದ್ದೆ. ರಾತ್ರಿ ಕರ್ಫ್ಯೂ ದೆಸೆಯಿಂದಾಗಿ ರಸ್ತೆ ನಿರ್ಜನವಾಗಿತ್ತು. ಟ್ರಕ್‌ಗಳು ಓಡಾಡುತ್ತಿರಲಿಲ್ಲ. ಟ್ಯಾಕ್ಸಿಯ ಮಾತೇ ಇಲ್ಲ. ಜೆ.ಜೆ.ಆಸ್ಪತ್ರೆಯ ಎದುರು ಫುಟ್‌ಪಾತಿನ ಮೇಲೆ ಒಂದು ರಾಶಿಯಲ್ಲಿ ಒಬ್ಬ ವ್ಯಕ್ತಿ ಬಿದ್ದುಕೊಂಡಿರುವುದನ್ನು ಕಂಡೆ. ಅದು ಪಾಟಿವಾಲಾ ಇರಬೇಕು, ಇನ್ನೂ ನಿದ್ರೆ ಮಾಡ್ತಿದ್ದಾನೆ ಅಂದುಕೊಂಡೆ. ಆದರೆ ನೆತ್ತರು ನೋಡಿ ಅಲ್ಲೇ ನಿಂತುಬಿಟ್ಟೆ. ಅಲ್ಪ ಸ್ವಲ್ಪ ಚಲನೆ ಕಂಡು ವ್ಯಕ್ತಿಯ ಮುಖ ನೋಡಲು ಬಗ್ಗಿದೆ. ಅದು ಸೆಹಾಯಿ. ನನಗೆ ಆಘಾತವಾಯಿತು. ಆ ಫುಟ್‌ಪಾತಿಯಲ್ಲಿ ಅಲ್ಲೇ ಕುಳಿತೆ. ಅವನ ಗಂಜಿ ಹಾಕಿದ ಶುಭ್ರ ಅಂಗಿ ರಕ್ತಸಿಕ್ತವಾಗಿತ್ತು. ಅವನು ನರಳುತ್ತಿದ್ದ. ನಾನು ಅವನ ಹೆಗಲು ಹಿಡಿದು ಮೃದುವಾಗಿ ಅಲುಗಿಸಿದೆ. ಒಂದೆರಡು ಬಾರಿ ಹೆಸರು ಹಿಡಿದು ಕರೆದೆ. ಮೊದಲು ಅವನಿಂದ ಯಾವ ಪ್ರತಿಕ್ರಿಯೆಯೂ ಬರಲಿಲ್ಲ. ಆಮೇಲೆ ಅವನು ಕಣ್ಣುಗಳನ್ನು ತೆರೆದ. ಅವು ಅಭಿವ್ಯಕ್ತಿ ಶೂನ್ಯವಾಗಿದ್ದವು. ಇದ್ದಕ್ಕಿದ್ದ ಹಾಗೆ ಅವನ ಇಡೀ ದೇಹ ನಡುಗಿತು. ಅವನು ನನ್ನನ್ನು ಗುರುತಿಸಿದ. ''ನೀನಾ ?'' ಎಂದು ಪಿಸುಗುಟ್ಟಿದ.

''ನಾನು ಪ್ರಶ್ನೆಗಳ ಸುರಿಮಳೆ ಸುರಿಸಿದೆ. ಜನ ಈ ದುರ್ಭರ ಸಮಯದಲ್ಲಿ ತಮ್ಮ ಕೇರಿಗಳಲ್ಲೇ ಇರಲು ಬಯಸುವಾಗ ಇವನೇಕೆ ಈ ಮುಸಲ್ಮಾನರ ಮೊಹಲ್ಲಕ್ಕೆ ಬಂದ ? ಅವನನ್ನು ಇರಿದವರು ಯಾರು ? ಎಷ್ಟು ಹೊತ್ತಿನಿಂದ ಅವನು ಇಲ್ಲಿ ಬಿದ್ದುಕೊಂಡಿದ್ದಾನೆ ? ಆದರೆ ಅವನು ಹೇಳಿದ್ದಿಷ್ಟೆ. 'ನನ್ನ ಕತೆ ಮುಗೀತು. ಎಲ್ಲ ದೈವ ಸಂಕಲ್ಪ'.

''ದೈವ ಸಂಕಲ್ಪ ಏನೋ ನನಗೆ ಗೊತ್ತಿಲ್ಲ. ಆದರೆ ನನ್ನ ಸಂಕಲ್ಪ ಏನು ಎಂಬುದು ನನಗೆ ಗೊತ್ತು. ನಾನೊಬ್ಬ ಮುಸ್ಲಿಂ. ಇದು ಮುಸ್ಲಿಂ ಮೊಹಲ್ಲ, ನಾನೊಬ್ಬ ಮುಸ್ಲಿಂ. ಇಲ್ಲಿ ನಿಂತು ನಾನು ಬಲ್ಲ ಹಿಂದೂ ಒಬ್ಬ ಮುಸ್ಲಿಂ ಆಗಿರಬಹುದಾದ ಕೊಲೆಪಾತಕಿಯಿಂದ, ಇರಿತಕ್ಕೊಳಗಾಗಿ ರಕ್ತದ ಮಡುವಿನಲ್ಲಿ ಒದ್ದಾಡುತ್ತ ಬಿದ್ದಿರುವುದನ್ನು ಕಂಡು ನಾನು ಸಹಿಸಲಾರೆ. ಸೆಹಾಯಿ ಸಾಯುತ್ತಿರುವುದನ್ನು ನೋಡುತ್ತಿರುವ ನಾನು ಒಬ್ಬ ಮುಸ್ಲಿಂ, ಅವನ ಕೊಲೆಗಾರನ ಹಾಗೆ. ಒಂದು ವೇಳೆ ಈಗ ಪೊಲೀಸರು ಬಂದರೆ ನನ್ನ ಮೇಲೆ ಕೊಲೆ ಆರೋಪ ಹೊರಿಸದಿದ್ದರೂ ತನಿಖೆಗಾಗಿ ಕರೆದೊಯ್ಯುತ್ತಾರೆ ಎಂಬ ವಿಚಾರ ಮನಸ್ಸಿನಲ್ಲಿ ಮೂಡಿತು. ನಾನು ಅವನನ್ನು ಆಸ್ಪತ್ರೆಗೆ ತೆಗೆದುಕೊಂಡು ಹೋದರೆ ? ಮುಸ್ಲಿಮರ ವಿರುದ್ಧ ಸೇಡು ತೀರಿಸಿಕೊಳ್ಳುವ ದೃಷ್ಟಿಯಿಂದ ಅವನು ನನ್ನನ್ನು ಕೊಲೆಗಾರ ಎಂದು ಹೆಸರಿಸಿದರೆ ? ಅವನು ಕೊನೆ ಉಸಿರೆಳೆಯುತ್ತಿದ್ದ. ಓಡಿ ಹೋಗಿ ನನ್ನನ್ನು ನಾನು ಕಾಪಾಡಿಕೊಳ್ಳಬೇಕೆಂಬ ಅದಮ್ಯ ತುಡಿತ ನನ್ನಲ್ಲಿ ಉದ್ಭವಿಸಿತು. ಆದರೆ ಅವನು ನನ್ನ ಹೆಸರನ್ನೂ ಕರೆದ; ಇಲ್ಲವಾಗಿದ್ದರೆ ನಾನು ಓಡಿ ಹೋಗುತ್ತಿದ್ದೆನೋ ಏನೋ. ಅತಿಮಾನುಷ ಪ್ರಯತ್ನವೋ ಎಂಬಂತೆ, ಅವನು ತನ್ನ ಅಂಗಿ ಗುಂಡಿ ಕಳಚಿದ. ಅಂಗಿಯ ಒಳಗೆ ಸರಿದ ಕೈಯನ್ನು ಹೊರಗೆಳೆಯುವ ಶಕ್ತಿ ಇರಲಿಲ್ಲ. ಆಮೇಲೆ ಅವನು ಅತ್ಯಂತ ಕ್ಷೀಣ ದನಿಯಲ್ಲಿ ಹೇಳಿದ. ''ಅಲ್ಲಿ ಒಂದು ಪ್ಯಾಕೆಟ್ ಇದೆ. ಅದರಲ್ಲಿ ಸುಲ್ತಾನಾಳ ಆಭರಣಗಳಿವೆ. ಹಾಗೆಯೇ ಸಾವಿರದ ಇನ್ನೂರು ರೂಪಾಯಿ ಇದೆ. ನಮ್ಮ ಒಬ್ಬ ಸ್ನೇಹಿತ ಅದನ್ನು ಇಷ್ಟರವರೆಗೆ ಭದ್ರವಾಗಿಟ್ಟುಕೊಂಡಿದ್ದ. ಇವತ್ತು ನಾನು ಅವನಿಂದ ಅದನ್ನೆಲ್ಲ ಪಡೆದು ಅವಳಿಗೆ ಮರಳಿ ಒಪ್ಪಿಸಲಿಕ್ಕೆ ಹೊರಟಿದ್ದೆ. ನಿನಗೆ ಗೊತ್ತಲ್ಲ ಇದು ಎಂಥ ಕೆಟ್ಟಕಾಲ ಅಂತ.... ಅವಳ ಚಿನ್ನ ಹಾಗೂ ಹಣವನ್ನು ಅವಳಿಗೆ ಒಪ್ಪಿಸೋಣ ಅಂತ ಮಾಡಿದ್ದೆ... ದಯವಿಟ್ಟು ಅದನ್ನು ಅವಳಿಗೆ ಕೊಡ್ತೀಯಾ ?... ಕೂಡಲೆ ಒಂದು ಸುರಕ್ಷಿತ ಜಾಗ ಸೇರಿಕೊಳ್ಳಬೇಕೆಂದು ಅವಳಿಗೆ ಹೇಳು.... ಆದರೆ.... ದಯವಿಟ್ಟು... ಮೊದಲು ನಿನ್ನ ಜಾಗ್ರತೆ ನೀನು ನೋಡಿಕೋ''.

ಮುಮ್ತಾಜ್ ಮೌನವಹಿಸಿದ. ಅವನ ದನಿ ಜೆ.ಜೆ. ಆಸ್ಪತ್ರೆ ಎದುರುಗಡೆಯ ಫುಟ್‌ಪಾತಿನ ಮೇಲೆ ಸಾಯುತ್ತಿರುವ ಸೆಹಾಯಿಯ ದನಿ ಜೊತೆ ಬೆರೆತಿದೆ. ಎರಡು ದನಿಗಳು ಒಂದಾಗಿ ದೂರದಲ್ಲಿ ನೀಲ ಸಾಗರ ಹಾಗೂ ಗಗನ ಸಂಧಿಸುವ ದಿಗಂತದಂಚಿನತ್ತ ಸಂಚರಿಸಬೇಕೆಂಬ ವಿಚಿತ್ರ ಭಾವನೆ ಮೂಡಿತು. ಮುಮ್ತಾಜ್ ಹೇಳಿದ : ''ನಾನು ಹಣ ಹಾಗೂ ಆಭರಣವನ್ನ ಅವಳಿಗೆ ಕೊಟ್ಟೆ. ಅವಳು ಅಳೋದಕ್ಕೆ ಶುರು ಮಾಡಿದಳು.'' ಗ್ಯಾಂಗ್ ಪ್ಲ್ಯಾಂಕ್‌ನಿಂದ ನಾವು ಕೆಳಗಿಳಿದೆವು. ಮುಮ್ತಾಜ್ ಕೈ ಬೀಸಿ ವಿದಾಯ ಹೇಳುತ್ತಿದ್ದ.

''ಅವನು ಸೆಹಾಯಿಗೆ ಕೈಬೀಸಿ ವಿದಾಯ ಹೇಳುತ್ತಿದ್ದಾನೆ ಎಂದು ನಿನಗೆ ಅನ್ನಿಸುವುದಿಲ್ಲವೆ ?'' ನಾನು ಹೀಗೆ ಜುಗಲ್‌ನನ್ನು ಪ್ರಶ್ನಿಸಿದೆ. ಅವನೆಂದ ''ನಾನೇ ಸೆಹಾಯಿ ಆಗಿದ್ದಿದ್ದರೆ !''

ಅನುವಾದ : **ಡಾ|| ಮಹಾಬಲೇಶ್ವರ ರಾವ್**  
ಡಾ|| ಟಿ.ಎಂ.ಎ.ಪೈ ಕಾಲೇಜ್ ಆಫ್ ಎಜುಕೇಷನ್  
ಉಡುಪಿ - ೫೭೬೧೦೨.

ಬರಗೂರು ರಾಮಚಂದ್ರಪ್ಪ

# ಸ್ವತಂತ್ರ ಭಾರತ ಮತ್ತು ಭೂಮಿಶಕ್ತಿ

ಬ್ರಿಟಿಷ್ ವಸಾಹತುಶಾಹಿಯಿಂದ ಬಿಡುಗಡೆಗೊಳ್ಳಲು ನಮ್ಮ ದೇಶವು ನಡೆಸಿದ ಹೋರಾಟಕ್ಕೆ ದೊಡ್ಡ ಪರಂಪರೆಯಿದೆ. ಈ ಪರಂಪರೆಯ ಒಳಗೆ ಕವಲುದಾರಿಗಳೂ ಇವೆ. ಒಂದೇ ಗುರಿಯತ್ತ ಸಾಗಿದ ಕವಲುದಾರಿಗಳು ಈ ಭೂಮಿಯ ಬಹುಮುಖತೆಯನ್ನೂ ವ್ಯಕ್ತಿ ನಾಯಕತ್ವ ಮತ್ತು ಸಾಮುದಾಯಿಕ ತಂಡಗಳ ವಿಶಿಷ್ಟ ಬುದ್ಧಿಭಾವಗಳನ್ನೂ ಏಕಕಾಲಕ್ಕೆ ಪ್ರಕಟಿಸುತ್ತವೆ. ಭೂಮಿಯ ಮೇಲೆ ಒಂದೇ ರೀತಿಯ ಜೀವಿಗಳಿಲ್ಲ; ಒಂದೇ ರೀತಿಯ ವೃಕ್ಷಗಳಿಲ್ಲ. ಒಂದೇ ವಿಸ್ತಾರದ ನದಿಗಳಿಲ್ಲ. ಒಂದೇ ಎತ್ತರದ ಬೆಟ್ಟಗುಡ್ಡಗಳಿಲ್ಲ. ದೊಡ್ಡ ನದಿಗಳ ನೆನಪಲ್ಲಿ ನಡಗುವ ಹಳ್ಳ-ಕೊಳ್ಳಗಳಿವೆ. ಪರ್ವತಗಳ ಎದುರು ಬೆದರುವ ಬೆಟ್ಟಗುಡ್ಡಗಳಿವೆ. ಶ್ರೀಗಂಧದ ಸಂಭ್ರಮದಲ್ಲಿ ಸಂಕಟ ಪಡುವ ಜಾಲಿ ಮರಗಳಿವೆ. ಅಂತೆಯೇ 'ಕಾಲುಹಾದಿ'ಗಳನ್ನು ಅಣಕಿಸುವ 'ರಾಜಬೀದಿ'ಗಳೂ 'ರಾಜಬೀದಿ'ಗಳನ್ನು ಧಿಕ್ಕರಿಸುವ 'ಕಾಲುಹಾದಿ'ಗಳೂ ಇವೆ. ತುಂಬಿದ ಸಮುದ್ರಗಳ ಅಬ್ಬರದ ಅಲೆಯಲ್ಲಿ ಅಳುವಂತಾಗಿರುವ ಬಿರುಕು ಬಿಟ್ಟ ಕೆರೆಗಳೂ ಇವೆ. ಸಮುದ್ರದಲ್ಲಿರುವ ಜೀವರಾಶಿಯಲ್ಲಿ ತಿಮಿಂಗಿಲಗಳೂ ಮೀನುಗಳೂ ಒಟ್ಟಿಗೇ ಇರುವ ವೈರುಧ್ಯವೇ ಒಂದು ರೂಪಕವಾದರೆ, ಕೆರೆಯಲ್ಲಿರುವ ಕಪ್ಪೆ, ಮೀನು, ಏಡಿಗಳ ಆತಂಕರಹಿತ ಆತ್ಮೀಯತೆ ಮತ್ತೊಂದು ರೂಪಕವಾಗುತ್ತದೆ. ಇದೆಲ್ಲ ಭೂಮಿಯ ಪ್ರಾಕೃತಿಕ ಪರಂಪರೆ. ಇಂತಹ ಪ್ರಾಕೃತಿಕ ಪರಂಪರೆಯ ಭಾಗವಾಗಿ ಬದುಕುವ ಮನುಷ್ಯಕುಲದ ಮೈ ಮತ್ತು ಮನಸ್ಸುಗಳು ಬಹುಮುಖೀ ರೂಪಗಳನ್ನು ಪಡೆಯುವುದು ಸಹಜವಾದ ಪ್ರಕ್ರಿಯೆ. ಆದ್ದರಿಂದಲೇ ಈ ದೇಶದಲ್ಲಿ (ಅಥವಾ ವಿಶ್ವದಲ್ಲಿ) ವಿಭಿನ್ನ ಬದುಕುಗಳೂ, ವಿಭಿನ್ನ ಚಿಂತನೆಗಳೂ, ಬಹು ಸಂಸ್ಕೃತಿಗಳೂ ಒಟ್ಟಿಗೆ ಜೀವಂತವಾಗಿವೆ. ಸಂಘರ್ಷ ಮತ್ತು ಸಾಮರಸ್ಯಗಳ ಸೂಕ್ಷ್ಮ ಸೇತುಬಂಧಕ್ಕಾಗಿ ತುಡಿಯುತ್ತ, ತೂಗುಯ್ಯಾಲೆಯಾಡುತ್ತ, ಮುಖಾಮುಖಿಯಾಗುತ್ತಲೇ ಅನುಸಂಧಾನವನ್ನು ನಡೆಸುತ್ತ, ಸ್ವತಂತ್ರ ಅಸ್ತಿತ್ವವನ್ನು ಸ್ಥಾಪಿಸುತ್ತ ಬಂದಿವೆ.

ಹೀಗೆ ಸ್ವತಂತ್ರ ಅಸ್ತಿತ್ವದ ಸ್ಥಾಪನೆಗಾಗಿ ವ್ಯಕ್ತಿಯ ಒಳಗೆ ಸಂಘರ್ಷದ ಒಳತೋಟಿ ಹುಟ್ಟತೊಡಗಿದರೆ, ದೇಶದ ಸ್ವತಂತ್ರ ಅಸ್ತಿತ್ವಕ್ಕಾಗಿ ಆಳುವ ಮತ್ತು ಆಳಿಸಿಕೊಳ್ಳುತ್ತಿರುವ ಶಕ್ತಿಗಳ ನಡುವೆ ಸಂಘರ್ಷ ಏರ್ಪಡುತ್ತದೆ. ಆಳುವವರಿಗೆ ರಾಜಶಕ್ತಿಯ ಸ್ವರೂಪ, ಆಳಿಸಿಕೊಳ್ಳುವವರಿಗೆ ಜನಶಕ್ತಿಯ ಸ್ವರೂಪ. ಅವರದು ಅಧಿಕಾರ ; ಇವರದು ಹಕ್ಕು. ಆಳುವ ಆಕ್ರಮಣಶೀಲತೆಯನ್ನು ಅರಗಿಸಿಕೊಳ್ಳುತ್ತ ಎದುರಾಗುವ ಶಕ್ತಿಯೇ ಹಕ್ಕು. ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ – ಯಾವುದೇ ರೂಪದ ಆಕ್ರಮಣಶೀಲತೆಗಾದರೂ ಸರಿ ಆಯಾ ನೆಲೆಯಲ್ಲಿ ಎದುರಾಗುತ್ತಲೇ ಸ್ವತಂತ್ರ ಆಕಾರಕ್ಕಾಗಿ ಹವಣಿಸುವ ಹಕ್ಕು ಏಕಕಾಲಕ್ಕೆ ಸಾಮಾಜಿಕವೂ ರಾಜಕೀಯವೂ ಸಾಂಸ್ಕೃತಿಕವೂ ಆರ್ಥಿಕವೂ ಆಗಲು ಸಾಧ್ಯ. ಹಾಗೆ ನೋಡಿದರೆ ಈ ಗುಣಲಕ್ಷಣವು ನಮ್ಮ ಭೂಮಿಸತ್ವದಲ್ಲಿಯೇ ಇದೆ. ಒಂದೊಂದೂ ಪ್ರತ್ಯೇಕ ಅಸ್ತಿತ್ವವನ್ನು ಪಡೆದಿದ್ದರೂ ಒಂದರೊಳಗೊಂದಾಗಿ ಆಕಾರ ಪಡೆಯುವ ಪ್ರಕ್ರಿಯೆಯು ಭೂಮಿಶಕ್ತಿಯ ಫಲವೇ ಆಗಿದೆ. ಆಕಾಶದ ಕಡೆಯಿಂದ ಬರುವ ಮಳೆ ಭೂಮಿಸ್ಪರ್ಶ ಮಾಡಿ ಆನಂತರ ಪಡೆಯುವ ರೂಪ ವೈವಿಧ್ಯತೆಯನ್ನು ಇಲ್ಲಿ ಗಮನಿಸಬೇಕು. ಮಳೆಯು ನದಿ, ಕೆರೆ, ಹಳ್ಳ-ಕೊಳ್ಳಗಳ ರೂಪವನ್ನು ಪಡೆಯುತ್ತದೆ. ಭೂಮಿಯ ಬೆಳೆಗೆ ಪೂರಕವಾಗುತ್ತದೆ, ಪ್ರವಾಹವಾಗಿ ಮಾರಕವಾಗುತ್ತದೆ. ಬಿಸಿಲು, ಬಿರುಕುಗಳನ್ನು ಬಲಗೊಳಿಸುತ್ತಿರುವಂತೆಯೇ ಮಳೆ ಬಂದು ಅವುಗಳನ್ನು ಮುಚ್ಚುತ್ತದೆ. ಭೂಮಿ ಇದೆಲ್ಲವನ್ನೂ ಒಳಗೊಳ್ಳುತ್ತಲೇ ಒಟ್ಟು ಬದುಕಿನ ಸಾರ್ಥಕರೂಪಕವಾಗುತ್ತದೆ. ಸ್ವಾರ್ಥದ ಸಣ್ಣತನಗಳನ್ನೂ ಸಾರ್ಥಕತೆಯ ದೊಡ್ಡ ಆಶಯಗಳನ್ನೂ ಒಟ್ಟಿಗೇ ಧ್ವನಿಸುತ್ತದೆ. ಈ ಅಂತರ್‌ಸಂಬಂಧದ ಮತ್ತು ಅಂತರ್‌ಕ್ರಿಯಾಶೀಲತೆಯ ಗುಣವು ನಮ್ಮ ಬುದ್ಧಿಭಾವಗಳ ಭಾಗವಾಗಿ ಬೆಳೆಯುತ್ತಿದೆ. ಹೀಗಾಗಿ ಸ್ವಾತಂತ್ರ್ಯ ಹೋರಾಟವು ವಿವಿಧ ನೆಲೆಗಳ ಅಂತರ್ ಮತ್ತು ಸಂಬಂಧಗಳನ್ನು ಪ್ರಕಟಿಸುವ ಪ್ರತೀಕವಾದದ್ದು ಭೂಸಹಜ ಕ್ರಿಯೆಯಾಗಿದೆ. ಅಂದರೆ ನಾನಿಲ್ಲಿ ಭೂಬದುಕಿನ ಸಹಜ ವೈವಿಧ್ಯತೆಗೂ ನಮ್ಮ ಸಾಮಾಜಿಕ-ರಾಜಕೀಯ ಕ್ರಿಯಾಶೀಲತೆಯ ಆಕಾರಗಳಿಗೂ ಇರುವ ಅಂತರ್‌ಸಂಬಂಧವನ್ನು ಪ್ರಸ್ತಾಪಿಸುತ್ತಿದ್ದೇನೆ. ''ಭರತಭೂಮಿ''ಯ ಸಂಸ್ಕೃತಿಯ ಬಗ್ಗೆ ಏಕಚಕ್ರಾಧಿಪತಿಗಳಂತೆ ಮಾತನಾಡುವವರು ಈ ವೈವಿಧ್ಯವನ್ನು ಗಮನಿಸಬೇಕು ; ಭೂಮಿಸತ್ವದ ಬಹುಸಂಸ್ಕೃತಿ ಧಾರೆಗಳನ್ನು ಗೌರವಿಸುವುದು 'ಭರತಭೂಮಿ'ಯ ಸ್ವಾಭಾವಿಕ ಸಭ್ಯತೆಯೆಂಬ ಅಂಶವನ್ನು ಅಂತರ್ಗತಮಾಡಿಕೊಳ್ಳಬೇಕು. ಸ್ವತಂತ್ರ ಭಾರತದಲ್ಲಿ ಇದು ಮುಖ್ಯ ಮನೋಧರ್ಮವಾಗಿ ಬೆಳೆಯಬೇಕು.

ಈಗ ಬ್ರಿಟಿಷ್ ವಸಾಹತುಶಾಹಿಯ ವಿರುದ್ಧ ನಡೆದ ವೈವಿಧ್ಯಮಯ ಹೋರಾಟಗಳನ್ನೇ ನೋಡೋಣ. ನಮ್ಮ

ಸ್ವಾತಂತ್ರ್ಯ ಹೋರಾಟಗಳಲ್ಲಿ ಪ್ರಧಾನವಾಗಿ ಮೂರು ಧಾರೆಗಳೂ ಅನೇಕ ಕಿರು ಧಾರೆಗಳೂ ಕಾಣಿಸುತ್ತವೆ. ಯಾವುದನ್ನು ಕಿರುಧಾರೆಗಳೆನ್ನುತ್ತೇವೊ ಅವು ತನ್ನ ಬದ್ಧತೆ ಮತ್ತು ಪ್ರಭಾವಗಳಲ್ಲಿ ಹಿರಿದಾಗಿಯೇ ಇವೆ. ಉದಾಹರಣೆಗೆ ಬುಡಕಟ್ಟು ಜನಾಂಗಗಳು ತಮ್ಮ ಅಸ್ತಿತ್ವಕ್ಕಾಗಿ ಬ್ರಿಟಿಷರ ವಿರುದ್ಧ ಬಂಡೆದ್ದ ಪ್ರಕರಣಗಳನ್ನು ಇಲ್ಲಿ ನೆನೆಯಬಹುದು. ಹಲಗಲಿ ಬೇಡರ ಬಂಡಾಯವನ್ನು ಉದಾಹರಿಸಬಹುದು. ಇವುಗಳು 'ಸ್ವಾತಂತ್ರ್ಯ ಹೋರಾಟ'ವೆಂದು ಪ್ರಚುರ ಪಡೆದ ಮುಖ್ಯಧಾರೆಗಳಲ್ಲಿ ಗುರುತಿಸಿಕೊಳ್ಳದೆ ಸ್ಥಳೀಯ ಹಾಗೂ ಸಾಂಸ್ಕೃತಿಕ ಪ್ರೇರಣೆಗಳಲ್ಲಿ ಸ್ಫೋಟಗೊಂಡ ಮಹತ್ವದ ಹೋರಾಟಗಳು. ಆದರೆ ಸ್ಥೂಲವಾಗಿ ರಾಷ್ಟ್ರೀಯ ವ್ಯಾಪ್ತಿಯನ್ನು ಪಡೆದ ಮೂರು ಧಾರೆಗಳನ್ನು ನಾವು ಗುರುತಿಸಬಹುದಾಗಿದೆ. ಅವು ಹೀಗಿವೆ : ಒಂದು – ಗಾಂಧೀಜಿಯವರಿಂದ ಪ್ರೇರಿತವಾದ ರಾಷ್ಟ್ರೀಯ ಚಳವಳಿ. ಎರಡು – ಡಾ|| ಅಂಬೇಡ್ಕರ್ ನೇತೃತ್ವದ ಸಾಮಾಜಿಕ ಆಂದೋಲನ. ಮೂರು – ಸಮತಾವಾದಿಗಳ ಆರ್ಥಿಕ ಪ್ರಧಾನ ಹೋರಾಟ. ಗಾಂಧಿಜಿ ಯವರು ಮುಖ್ಯವಾಗಿ ಬ್ರಿಟಿಷ್ ವಸಾಹತುಶಾಹಿಯ ರಾಜಕೀಯ ಸರ್ವಾಧಿಕಾರದ ವಿರುದ್ಧ ಹೋರಾಟ ಕಟ್ಟಿದರು. ಅಸ್ಪೃಶ್ಯತೆಯಂತಹ ಸಾಮಾಜಿಕ ವಿಷಮತೆಯ ವಿಷಯಗಳ ವಿರುದ್ಧವಾಗಿ ಅವರಿಗಿದ್ದ ಕಾಳಜಿ ಅತ್ಯಂತ ಪ್ರಾಮಾಣಿಕವಾದದ್ದಾದರೂ, ಅದು ಅವರ ಹೋರಾಟದ ಪ್ರಮುಖ ವಿಷಯವಾಗಿರಲಿಲ್ಲ. ಡಾ|| ಅಂಬೇಡ್ಕರ್ ಅವರು ಪ್ರಧಾನವಾಗಿ ಈ ದೇಶದ ಸಾಮಾಜಿಕ ಸರ್ವಾಧಿಕಾರದ ವಿರುದ್ಧ ಆಂದೋಲನಗಳನ್ನು ರೂಪಿಸಿದರು. ಅವರಿಗೆ ಈ ಭೂಭಾಗಕ್ಕೆ ಕಳಂಕ ತಂದ ವರ್ಣಾಶ್ರಮ ಪದ್ಧತಿಯ ವಿರುದ್ಧದ ಹೋರಾಟ ಮುಖ್ಯವಾದಂತೆಯೇ ಭೂ ರಾಷ್ಟ್ರೀಕರಣದಂತಹ ಆರ್ಥಿಕ ವಿಚಾರಗಳನ್ನು ಅವರು ಪ್ರತಿಪಾದಿಸಿದ್ದು ಅತ್ಯಂತ ಗಮನೀಯವಾದುದು. ಸಮತಾವಾದಿಗಳು ಪ್ರಧಾನವಾಗಿ ಆರ್ಥಿಕ ಹೋರಾಟಗಳನ್ನು ರೂಪಿಸಿದರು. ಸ್ವಾತಂತ್ರ್ಯವೆಂಬುದು ಬ್ರಿಟಿಷ್ ವಸಾಹತುಶಾಹಿ ಮತ್ತು ಈ ದೇಶದ ಭೂ ಒಡೆಯರು ಮತ್ತು ಬಂಡವಾಳಶಾಹಿಗಳಿಂದ ಪಡೆಯುವ ವಿಮೋಚನೆಯಾಗಬೇಕು ಎಂಬುದು ಇವರ ಪ್ರತಿಪಾದನೆ. ಹಾಗೆ ನೋಡಿದರೆ ಗಾಂಧೀಜಿಯವರು ನಡೆಸಿದ ರಾಜಕೀಯ ಸರ್ವಾಧಿಕಾರದ ವಿರುದ್ಧ ನಡೆಸಿದ ಹೋರಾಟ, ಡಾ|| ಅಂಬೇಡ್ಕರ್ ಅವರು ನಡೆಸಿದ ಸಾಮಾಜಿಕ ಸರ್ವಾಧಿಕಾರದ ವಿರುದ್ಧದ ಆಂದೋಲನ, ಸಮತಾವಾದಿಗಳು ನಡೆಸಿದ ಆರ್ಥಿಕ ಸರ್ವಾಧಿಕಾರದ ವಿರುದ್ಧದ ಚಳವಳಿ – ಇವೆಲ್ಲವೂ ಒಟ್ಟು ಸ್ವಾತಂತ್ರ್ಯ ಹೋರಾಟಗಳೇ ಆಗಿವೆ. ಇವುಗಳ ಒಟ್ಟು ಆಶಯದ ಅನುಷ್ಠಾನದಲ್ಲೇ ನಿಜವಾದ ಸ್ವತಂತ್ರ ಭಾರತವನ್ನು ಕಾಣಲು ಮತ್ತು ಕಟ್ಟಲು ಸಾಧ್ಯ.

ನನ್ನ ದೃಷ್ಟಿಯಲ್ಲಿ 'ಬೆವರು' ಎನ್ನುವ ಪರಿಕಲ್ಪನೆಯು ಜೀವಶಕ್ತಿಯ ಶ್ರಮ ಪ್ರಕ್ರಿಯೆಯನ್ನು ಪ್ರತ್ಯೇಕಿಸುತ್ತದೆ. ಭೂಮಿ ಮೇಲಿನ ಬದುಕಿಗೆ ನಿರ್ದಿಷ್ಟ ವಿನ್ಯಾಸ ಒದಗಿಸಿದ ಬೆವರಿನ ಜನರ ಆಶಯಗಳನ್ನು ಈ 'ಬೆವರು' ಪ್ರತಿನಿಧಿಸುತ್ತದೆ. ವಿಪರ್ಯಾಸವೆಂದರೆ ಭೂಮಿಯನ್ನು ಹದಗೊಳಿಸಿದ್ದು ಮತ್ತು ಭೂಮಿ ಮೇಲಿನ ಬದುಕಿಗೆ ಕಾಲಕಾಲಕ್ಕೆ ಆಕಾರ ನೀಡಿದ್ದು ಬೆವರಾದರೂ ಆಳಿದ್ದು ಮಾತ್ರ ಬೆವರಲ್ಲ, ಬುದ್ಧಿ ಮತ್ತು ಬಲ.

ಹಾಗೆ ನೋಡಿದರೆ 'ರಾಷ್ಟ್ರೀಯ ಚಳವಳಿ'ಯೆಂದು ಕರೆಯುತ್ತಿರುವ ಬ್ರಿಟಿಷ್ ವಿರೋಧಿ ಹೋರಾಟವು ಒಂದೇ ಮಾದರಿಯದಾಗಿರಲಿಲ್ಲ. ಬಾಲಗಂಗಾಧರ ತಿಲಕ್ ಅವರು ಗಣೇಶೋತ್ಸವಗಳ ಬಳಕೆ ಮಾಡುತ್ತ ರಾಷ್ಟ್ರೀಯತೆಯ ಭಾವನೆಯನ್ನು ಕೆರಳಿಸಿದರು. ಅಂದರೆ ಇವರು ರಾಷ್ಟ್ರೀಯತೆಗೆ ಧಾರ್ಮಿಕ ಸ್ವರೂಪ ನೀಡಿದರು. ಸುಭಾಷ್‌ಚಂದ್ರ ಬೋಸ್ ಅವರು ರಾಷ್ಟ್ರೀಯತೆಗೆ 'ಸೈನಿಕ ಸ್ವರೂಪ' ನೀಡಿದರು. ಗಾಂಧೀಜಿಯವರಿಗೆ ಸೈನಿಕ ಸ್ವರೂಪದ ರಾಷ್ಟ್ರೀಯತೆ ಸಂಪೂರ್ಣ ಅಪಥ್ಯವಾಗಿತ್ತು. ಮತ್ತೊಂದು ವಿಶೇಷವೆಂದರೆ – ಸ್ವತಃ ತುಂಬಾ ಧಾರ್ಮಿಕರಾಗಿದ್ದ ಗಾಂಧೀಜಿಯವರು ಧರ್ಮದ ಸಂಕೇತಗಳನ್ನು ರಾಷ್ಟ್ರೀಯತೆಯ ಹೋರಾಟಕ್ಕೆ ಬಳಸಿಕೊಳ್ಳಲಿಲ್ಲ. ಅವರು ರಾಷ್ಟ್ರೀಯ ಹೋರಾಟಕ್ಕೆ ಬಳಸಿದ ಸಂಕೇತಗಳೆಂದರೆ – ಉಪ್ಪು, ಚರಕ ಮತ್ತು ಖಾದಿಯಂತಹ ಜನಸಾಮಾನ್ಯರ ವಸ್ತು ವಿಶೇಷಗಳು. ಈ ವಸ್ತು ವಿಶೇಷಗಳಿಗೆ ಜಾತಿಯ ಸೋಂಕಿಲ್ಲ; ಧರ್ಮದ ಸ್ಪರ್ಶವಿಲ್ಲ. ಇವುಗಳು ಜಾತ್ಯತೀತ ಸಂಕೇತಗಳಾಗಿದ್ದುದೇ ಒಂದು ವಿಶೇಷ. ಜೊತೆಗೆ ಇವು ಬಡವರ ಬದುಕಿನ ಸಂಕೇತಗಳೂ ಹೌದು. ಹೀಗಾಗಿ ಜನಸಾಮಾನ್ಯರಿಗೂ ರಾಷ್ಟ್ರೀಯ ಹೋರಾಟಕ್ಕೂ ಸಂಬಂಧ ಗಾಢವಾಯಿತು. ಗಾಂಧಿಜಿ ಯವರ ಈ ಸಂಕೇತಗಳು ಆಕಸ್ಮಿಕವಲ್ಲ ಎಂಬುದಕ್ಕೆ ಅವರು ಬೆಳಗಾವಿ ಕಾಂಗ್ರೆಸ್ ಅಧಿವೇಶನದಲ್ಲಿ ಪ್ರಸ್ತಾಪಿಸಿದ ಒಂದು ಮುಖ್ಯ ವಿಷಯವನ್ನು ಉದಾಹರಿಸಬಹುದು. ಅವರು ಕಾಂಗ್ರೆಸ್ ಸಂಘಟನೆಯು ಹಿಂದುಳಿದ ವರ್ಗ ಮತ್ತು ದಲಿತರನ್ನು ಒಳಗೊಳ್ಳಬೇಕಾದ ಅಗತ್ಯವನ್ನು ಪ್ರತಿಪಾದಿಸಿದರು. ಈ ಭಾಷಣವಲ್ಲದೆ, ಒಟ್ಟಾರೆ ಗಾಂಧೀಜಿಯವರು ಗ್ರಾಮೀಣ ಗುಡಿಕೈಗಾರಿಕೆಗಳ ಬಗ್ಗೆ ತೋರಿದ ಕಾಳಜಿಯನ್ನೂ ಇಲ್ಲಿ ನೆನೆಯಬಹುದು. ಗುಡಿಕೈಗಾರಿಕೆಗಳ ಕಸುಬುದಾರರೆ ಹಿಂದುಳಿದವರು, ದಲಿತರು, ಒಟ್ಟಾರೆ ಬಡವರು ಎಂಬುದನ್ನಿಲ್ಲಿ ಗಮನಿಸಬೇಕು. ಹೀಗಾಗಿ ಗಾಂಧೀಜಿಯವರ ರಾಷ್ಟ್ರೀಯತೆಗೆ ವ್ಯಾಪಕತೆ ಮತ್ತು ವಾಸ್ತವಿಕತೆ ಲಭ್ಯವಾಯಿತು. ಇದರರ್ಥ ಉಳಿದವರ ಹೋರಾಟ ನಿರರ್ಥಕ ಎಂದೇನೂ ಅಲ್ಲ. ಆದರೆ ರಾಷ್ಟ್ರೀಯ ಚಳವಳಿಯ ಮಾದರಿಗಳಲ್ಲಿ ಬಹುಸಂಖ್ಯಾತ ಜನ ಸಮುದಾಯವು ಗಾಂಧೀಜಿ ಮಾದರಿಯಿಂದ ಪ್ರಭಾವಿತವಾಗಿದ್ದಂತೂ ನಿಜ. ಅಂತೆಯೇ ಡಾ|| ಅಂಬೇಡ್ಕರ್ ಅವರ ಆಂದೋಲನದ ಮಾದರಿಯು ಸ್ಥಳೀಯ ಸಾಮಾಜಿಕ ಅಸಮಾನತೆಯ ಸಂದರ್ಭದಲ್ಲಿ ಬಹುಮುಖ್ಯವಾದುದು; ಇಂದಿಗೂ ಪ್ರಸ್ತುತವಾದುದು. ಸಮತಾವಾದಿಗಳ ಆರ್ಥಿಕಪ್ರಧಾನ ಆಂದೋಲನವೂ ಅಷ್ಟೆ. ಅಂದು ಮಹತ್ವದ ಆಯಾಮವನ್ನು ಪಡೆದಿತ್ತು. ಇಂದು ಮತ್ತಷ್ಟು ವಿಸ್ತೃತವಾಗಿ ಪ್ರಸ್ತುತ ನೆಲೆಯನ್ನು ಉಳಿಸಿಕೊಂಡಿದೆ. ಗಾಂಧೀಜಿ, ಅಂಬೇಡ್ಕರ್ ಮತ್ತು ಸಮತಾವಾದಿಗಳ ಚಿಂತನೆಗಳು ಒಂದೇ ರೀತಿಯಲ್ಲಿಲ್ಲದಿದ್ದರೂ ಇಂದಿಗೂ ಯಾಕೆ ಈ ಮೂರು ಮಾದರಿಗಳು ಸ್ವತಂತ್ರ ಭಾರತದಲ್ಲಿ ಇನ್ನೂ ಜೀವಂತವಾಗಿದ್ದು ಕಾಡಿಸುತ್ತಿವೆ ಮತ್ತು ಪ್ರಸ್ತುತತೆಯನ್ನು ಪ್ರತಿಪಾದಿಸುತ್ತಿವೆ ಎಂಬ ಸಂಗತಿ ಕುತೂಹಲಕರವಾಗಿದೆ ಮತ್ತು ಅಭ್ಯಾಸಯೋಗ್ಯವಾಗಿದೆ. ನಿಜ, ಈ ಮೂರು ಮಾದರಿಗಳ ನಡುವೆ ಕೆಲವು ಭಿನ್ನಾಭಿಪ್ರಾಯಗಳಿವೆ. ಇವುಗಳಿಗೆ ಪರಸ್ಪರ ಮುಖಾಮುಖಿಯ ಪರಂಪರೆಯೂ ಇದೆ. ಒಂದನ್ನೊಂದು ವಿರೋಧಿಸುವ ವೈಪರೀತ್ಯಗಳೂ ನಡೆದಿವೆ. ಆದರೆ ಮೂರು ಮಾದರಿಗಳೂ ನಮ್ಮ ನಡುವೆ ಗಾಢವಾಗಿ ಚರ್ಚಿತವಾಗುತ್ತಿವೆ. ಸಮಚಿತ್ತದ ಚರ್ಚೆಗಳಲ್ಲಿ ಪರಸ್ಪರ ಅನುಸಂಧಾನಕ್ಕಾಗಿ ಕಾತರಿಸುತ್ತಿವೆ. ಯಾಕೆ ?

ಈ ಮೂರು ಮಾದರಿಗಳ ಚಿಂತನೆ ಮತ್ತು ಹೋರಾಟಗಳ ಆದ್ಯತೆಗಳಲ್ಲಿ ಅಂತರವಿದ್ದರೂ ಆಶಯಗಳ ನಡುವೆ ಅಗಾಧ ಅಂತರವಿಲ್ಲ. ಒಂದೊಂದು ಮಾದರಿಗೆ ಒಂದೊಂದು ಆದ್ಯತೆಯಿದ್ದು, ಈ ಆದ್ಯತೆಗಳು ಅವರವರ ಚಿಂತನಾಧಾರೆಗಳನ್ನು ರೂಪಿಸುವಲ್ಲಿ, ನಿಯಂತ್ರಿಸುವಲ್ಲಿ ಮಹತ್ವದ ಪಾತ್ರ ವಹಿಸಿದವು. ಒಂದು ಮಾದರಿಗೆ ಬ್ರಿಟಿಷ್ ವಸಾಹತುಶಾಹಿ ವಿರೋಧದ ಆದ್ಯತೆಯಲ್ಲಿ ರಾಷ್ಟ್ರೀಯತೆಯ ಶೋಧ ಮುಖ್ಯವಾಯಿತು. ಇನ್ನೊಂದು ಮಾದರಿಗೆ ಅಸ್ಪೃಶ್ಯತೆಯ ವಿರುದ್ಧದ ಹೋರಾಟದಲ್ಲಿ ಸಮಾನತೆಯ ಶೋಧ ಪ್ರಮುಖವಾಯಿತು. ಮತ್ತೊಂದು ಮಾದರಿಗೆ ಬ್ರಿಟಿಷರಷ್ಟೇ ಭೂ ಒಡೆಯರು ಮತ್ತು ಬಂಡವಾಳಶಾಹಿಗಳ ವಿರೋಧ ಮುಖ್ಯವೆನ್ನಿಸಿತು. ಇದೆಲ್ಲ ಸ್ವಾತಂತ್ರ್ಯಪೂರ್ವ ಭಾರತದ ಚಿಂತನಾಚಿತ್ರ. ಈಗ ಸ್ವತಂತ್ರ ಭಾರತದಲ್ಲಿ ಈ ಮೂರು ಮಾದರಿಗಳಿಗೂ ಮಹತ್ವ ಇರುವುದರ ಮೂಲ ಯಾವುದೆಂದರೆ – ಸಮಾಜ ಬದಲಾವಣೆಗೆ ಒತ್ತಾಸೆಯಾದ ಶೋಷಿತರ ಪರವಾದ ಒಲವು; ಬಡವರ ಪರವಾದ ತಾತ್ವಿಕ ನಿಲುವು. ಬೆವರು ಮೂಲ ಸಂಸ್ಕೃತಿಯ ಬೇರುಗಳಿಂದಲೇ ಈ ಮೂರು ಚಿಂತನಾ ಮಾದರಿಗಳು ಬೆಳೆದು ಬಂದಿರುವುದು ಇಂದಿನ ಅನುಸಂಧಾನ ಸನ್ನಿವೇಶಕ್ಕೆ ಪ್ರಮುಖ ಕಾರಣ.

ಬೆವರು ಮೂಲ ಸಂಸ್ಕೃತಿಯ ಮಾತನ್ನು ವಿಸ್ತರಿಸುವ ಅಗತ್ಯವಿದೆ. ನಮ್ಮ ಸಮಾಜ ಮತ್ತು ಸಂಸ್ಕೃತಿಯನ್ನು ರೂಪಿಸಿದ ಪ್ರಮುಖ ಶಕ್ತಿಯೆಂದರೆ 'ಬೆವರು'. ಭೂಮಿಯನ್ನು ಮನುಷ್ಯ ಬದುಕಿಗೆ ಪೂರಕವಾಗುವಂತೆ ಒಗ್ಗಿಸಿದ್ದು ಇದೇ ಬೆವರು. ಬೆಟ್ಟಗುಡ್ಡಗಳನ್ನು ಒಗ್ಗಿಸಿಕೊಂಡದ್ದು; ಕೆರೆಗಳನ್ನು ಕಟ್ಟಿದ್ದು; ನದಿ ನೀರಿಗೆ ಸೂಕ್ತ ಹಾದಿಗಳನ್ನು ಹುಡುಕಿದ್ದು; ಗುಹೆಗಳಿಂದ ಗುಡಿಸಲು ಮತ್ತು ಮಣ್ಣಿನ ಮನೆಗಳಿಗೆ ಸ್ಥಳಾಂತರಿಸಿದ್ದು, ನೆಲವನ್ನು ಹದಗೊಳಿಸಿ ಹೊಲವನ್ನಾಗಿ ರೂಪಾಂತರಿಸಿದ್ದು; ಹೀಗೆ ಅಸಂಖ್ಯಾತ ಕ್ರಿಯೆಗಳ ಮೂಲಕ ಮನುಷ್ಯ ಬದುಕಿನ ವಿನ್ಯಾಸಗಳನ್ನು ರೂಪಿಸಿ 'ಸಂಸ್ಕೃತಿ'ಯ ಸ್ವರೂಪವನ್ನು ನೀಡಿದ್ದು 'ಬೆವರು'. ನನ್ನ ದೃಷ್ಟಿಯಲ್ಲಿ 'ಬೆವರು' ಎನ್ನುವ ಪರಿಕಲ್ಪನೆಯು ಜೀವಶಕ್ತಿಯ ಶ್ರಮ ಪ್ರಕ್ರಿಯೆಯನ್ನು ಪ್ರತ್ಯೇಕಿಸುತ್ತದೆ. ಭೂಮಿ ಮೇಲಿನ ಬದುಕಿಗೆ ನಿರ್ದಿಷ್ಟ ವಿನ್ಯಾಸ ಒದಗಿಸಿದ ಬೆವರಿನ ಜನರ ಆಶಯಗಳನ್ನು ಈ 'ಬೆವರು' ಪ್ರತಿನಿಧಿಸುತ್ತದೆ. ವಿಪರ್ಯಾಸವೆಂದರೆ ಭೂಮಿಯನ್ನು ಹದಗೊಳಿಸಿದ್ದು ಮತ್ತು ಭೂಮಿ ಮೇಲಿನ ಬದುಕಿಗೆ ಕಾಲಕಾಲಕ್ಕೆ ಆಕಾರ ನೀಡಿದ್ದು ಬೆವರಾದರೂ ಆಳಿದ್ದು ಮಾತ್ರ ಬೆವರಲ್ಲ, ಬುದ್ಧಿ ಮತ್ತು ಬಲ. – ಈ ಎರಡು ಶಕ್ತಿ ನೆಲೆಗಳು ಆಳುವ ಶಕ್ತಿ ಪಡೆದವು;

ಬೆವರನ್ನು ಅಧೀನವಾಗಿಸಿಕೊಂಡವು. ಸ್ವಾತಂತ್ರ್ಯಪೂರ್ವ ಭಾರತದ ಇತಿಹಾಸವನ್ನೇ ಗಮನಿಸಿ. ಭೂಮಿ ಬದುಕನ್ನು ಕಟ್ಟಿದ ಬೆವರಿನ ಜನ ಅಧೀನರಾಗಿ ಆಳಿಸಿಕೊಳ್ಳತೊಡಗಿದರು. ಇವರನ್ನು ಬುದ್ಧಿಯ ಜನ (ಪುರೋಹಿತಶಾಹಿ) ಮತ್ತು ಬಲದ ಜನ (ರಾಜಶಾಹಿ) ಆಳತೊಡಗಿದರು. ಕೋಟೆ-ಕೊತ್ತಲಗಳನ್ನು ಕಟ್ಟಿದ ಬೆವರಿನ ಜನ ಕೋಟೆ ಬಾಗಿಲಿನಾಚೆ ನಡುಬಗ್ಗಿಸಿ ನಿಲ್ಲುವಂತಾಯಿತು. ಗುಡಿಗೋಪುರಗಳನ್ನು ಕಟ್ಟಿದ ಇದೇ ಬೆವರಿನ ಜನರಿಗೆ ದೇವಾಲಯ ಪ್ರವೇಶವನ್ನು ನಿರಾಕರಿಸಲಾಯಿತು. ವೃತ್ತಿಗಳ ವಿಷಯಕ್ಕೆ ಬಂದರೂ ಅಷ್ಟೆ. ಜೀವನ ನಿರ್ವಹಣೆಗೆ ಅತ್ಯಗತ್ಯವಾದ ಸಾಮಗ್ರಿಗಳನ್ನು ನಿರ್ಮಿಸುವ ಬೆವರಿನ ಜನರ ವೃತ್ತಿಗಳಿಗೆ ಸಾಮಾಜಿಕ ಘನತೆ ಇರಲಿಲ್ಲ. ಈಗಲೂ ಇಲ್ಲ. ಅದೇ ಬುದ್ಧಿ-ಬಲಗಳ ಜನರ ಸಾಂಪ್ರದಾಯಿಕ ವೃತ್ತಿಗಳಿಗೆ ಘನತೆಯಿದೆ. ಕಲೆಗಳ ವಿಷಯದಲ್ಲೂ ಅಷ್ಟೆ. ಬೆವರಿನ ಜನರ ಕಲೆಗಳು ಜನಪದ ಕಲೆಗಳೆಂದು ವರ್ಗೀಕೃತವಾಗಿ ಸಂಭಾವನೆ ಮತ್ತು ಮನ್ನಣೆಗಳು ಹಿಡಿದು ಅನೇಕ ನೆಲೆಗಳಲ್ಲಿ ನಿರ್ಲಕ್ಷಿತ ವಲಯಕ್ಕೆ ಸೇರಿವೆ. ಇನ್ನೊಂದು ಕಡೆ ಬುದ್ಧಿ-ಬಲಗಳ ಕಲಾಪ್ರಕಾರಗಳು ಸಂಭಾವನೆ, ಮನ್ನಣೆಗಳಲ್ಲಿ ಮೇಲುಗೈ ಪಡೆದಿವೆ. ಮುಖವೀಣೆ ಮತ್ತು ವೀಣೆಗಳ ಅಂತರ, ಜನಪದ ಸಂಗೀತ ಮತ್ತು ಶಾಸ್ತ್ರೀಯ ಸಂಗೀತಗಳ ನಡುವಿನ ಅಂತರ – ಇಷ್ಟನ್ನು ಸಾಂಕೇತಿಕವಾಗಿ ಗಮನಿಸಬಹುದು. ಇಲ್ಲಿ ನಾನು ಪ್ರತಿಪಾದಿಸುತ್ತಿರುವುದು ಇಷ್ಟು: ನಮ್ಮ ಸಮಾಜ ಮತ್ತು ಸಂಸ್ಕೃತಿಯಲ್ಲಿ ಮುಖ್ಯವಾಗಿ ಮೂರು ಘಟಕಗಳಿವೆ : ಅವುಗಳೆಂದರೆ ಬೆವರು, ಬುದ್ಧಿ ಮತ್ತು ಬಲ. ಈ ಮೂರು ಘಟಕಗಳಲ್ಲಿ ಬುದ್ಧಿಯೆಂಬುದು ಅಕ್ಷರಜ್ಞಾನಕ್ಕೆ ಸಮಾನಾಂತರವಾಗಿ, ತನ್ನದೇ ಆದ ಅನುಭವಗಳಿಂದ ಪಡೆದ ವಿವೇಕದಿಂದ ಗಳಿಸಿದ ಬುದ್ಧಿಯನ್ನು ಬಳಸಿ ಸಂಸ್ಕೃತಿಯನ್ನು ಕಟ್ಟಿದ ಬೆವರಿನ ಜನರನ್ನು ಅಕ್ಷರಜ್ಞಾನದ ಬುದ್ಧಿಯು ನಿರ್ಲಕ್ಷಿಸುತ್ತ ಬಂದಿತು. ಅಕ್ಷರಜ್ಞಾನ ಮೂಲದ ಬುದ್ಧಿಯ ಬೆಂಬಲ ಪಡೆದ ಅಧಿಕಾರ ಕೇಂದ್ರದ 'ಬಲ'ವೂ ಬೆವರನ್ನು ನಿರ್ಲಕ್ಷಿಸಿತು; ಅಧೀನವಾಗಿಸಿಕೊಂಡಿತು.

'ಬುದ್ಧಿ' ಮತ್ತು 'ಬಲ'ಗಳು ಭೂಮಿಗಿಂತ ಹೆಚ್ಚಾಗಿ ಆಕಾಶ ಸಂಬಂಧಿಗಳು. ಆಕಾಶದೆಡೆಗೆ ತೋರಿಸಿ ವಿಧಿವಿಲಾಸದ ನೆರವಿನಿಂದ ಭೂಸಂಬಂಧಿಯಾದ ಬೆವರನ್ನು ನಿಯಂತ್ರಿಸುವುದು ಬುದ್ಧಿ ಮತ್ತು ಬಲಗಳಿಗೆ ಸುಲಭವಾಯಿತು. 'ಆಕಾಶ'ದ ಶಕ್ತಿಯನ್ನು ಒಪ್ಪಿದ ಮತ್ತು ಭೂಮಿಯ ಬದುಕನ್ನು ಅಪ್ಪಿದ ಬೆವರಿನ ಜನರು ತಮ್ಮ ದುಡಿಮೆಗೆ ತಕ್ಕ ಪ್ರತಿಫಲವಿಲ್ಲದೆ, ಸಮಾನತೆಯ ಸುಖವಿಲ್ಲದೆ ಅನಾಥಪ್ರಜ್ಞೆಯ ಕೂಸುಗಳಾದರು. ಬುದ್ಧಿ-ಬಲಗಳು ತೋರಿಸಿದ ಆಕಾಶಪ್ರಜ್ಞೆಯು ಬೆವರಿನ ಅನಾಥ ಪ್ರಜ್ಞೆಗೆ ಪರಿಹಾರವಾಗಲಿಲ್ಲ. ಪರಿಹಾರವಿರುವುದು – ಭೂಮಿಪ್ರಜ್ಞೆಯಿಂದ ಪ್ರೇರಿತವಾದ ಭೂಮಿತತ್ವದಲ್ಲಿ. ಹಾಗಾದರೆ ಭೂಮಿತತ್ವದ ಸಾರ ಯಾವುದು ?

ಈ ಭೂಮಿ ಭೂ ಒಡೆಯರ ಆಡುಂಬೊಲವಾಗಬಾರದು; ಬಂಡವಾಳಶಾಹಿಗಳ ಬೆನ್ನೆಲುಬಾಗ ಬಾರದು. ಯಾರು ಈ ಭೂಮಿಯನ್ನು ಬದುಕಿಗೆ ಹದಗೊಳಿಸಿದರೋ ಆಕಾರ ಗಳನ್ನು ಕೊಟ್ಟರೋ ಅಂತಹ ಬೆವರಿನ ಜನರ ಅಂತಃಶಕ್ತಿಯಾಗಬೇಕು; ಅಂತಃಕರಣವಾಗಬೇಕು.

ಈಗಾಗಲೇ ಪ್ರತಿಪಾದಿಸಿರುವಂತೆ, ಬೆವರು – ಮನುಷ್ಯ ಸಮಾಜದ ಮೂಲ. ಕತ್ತಲಿಂದ ಬೆಳಕಿಗೆ, ಬೆಳಕಿನಿಂದ ಕತ್ತಲಿಗೆ ಸೇತುವೆ ಕಟ್ಟುತ್ತ ಬಂದ 'ಬೆವರು' ನಮ್ಮ ನಡುವಿನ ಒಂದು ಚಾರಿತ್ರಿಕ ಪ್ರಕ್ರಿಯೆ. ಹಗಲಿರುಳೆನ್ನದೆ ನಿರಂತರ ಕ್ರಿಯಾಶೀಲತೆಯಲ್ಲಿ ಮಗ್ನವಾದ ಈ ಬೆವರು, ಬೆಟ್ಟಗುಡ್ಡಗಳಲ್ಲಿ ಬದುಕನ್ನು ಹುಡುಕಿದೆ. ನದಿಗಳನ್ನು ನೆಲಮುಖಿಯಾಗಿಸಿದೆ. ಹಸಿರು ಬೆಳೆಸುವ ಉಸಿರಾಗಿದೆ. ಮಳೆ-ಬೆಳೆಗಳ ಸಂಬಂಧವನ್ನು ಬೆಸೆದಿದೆ. ನೆಲ-ಮುಗಿಲುಗಳ ನಡುವೆ ಉರಿಯ ಉಯ್ಯಾಲೆಯಾಗಿದೆ. ಒಟ್ಟಾರೆ ಇದೊಂದು ಮನುಷ್ಯ ಚರಿತ್ರೆ. ಎಂದೂ ಬತ್ತದ ಅಕ್ಷಯಪಾತ್ರೆ. ಬೆವರೇ ಭೂಮಿಯಾಗಿ, ಭೂಮಿಯೇ ಬೆವರಾಗಿ, ಆಕಾರ-ನಿರಾಕಾರಗಳ ನಡುವಿನ ಜೀವ ಬೆಳಕು. ಇದು ನನ್ನ ಕಲ್ಪನೆಯ ಭೂಮಿತತ್ವ. ಈ ತತ್ವವೇ ನಮ್ಮ ಸ್ವಾತಂತ್ರ್ಯ ಹೋರಾಟದ ಮೂರು ಚಿಂತನಾ ಮಾದರಿಗಳ (ಗಾಂಧೀವಾದ, ಅಂಬೇಡ್ಕರ್‌ವಾದ, ಸಮತಾವಾದ) ನಡುವಿನ ಅನುಸಂಧಾನಕ್ಕೆ ಒತ್ತಾಸೆಯನ್ನು ಒದಗಿಸಿದೆ. ಈಗ ಪ್ರಚಲಿತವಿರುವ ವಿವಿಧ ಪ್ರಗತಿಪರ ವಾದಗಳು ಸಮಾನ ಆಶಯದ ಕೇಂದ್ರವನ್ನು ಗುರುತಿಸಿಕೊಳ್ಳುತ್ತ 'ಭೂಮಿತತ್ವ'ವಾಗಿ ಹೊರಹೊಮ್ಮಬೇಕಾಗಿದೆ. ಭೂಮಿತತ್ವದ ಮೂಲ ಆಶಯಗಳು ಎಲ್ಲ ಪ್ರಗತಿಪರ ವಾದಗಳಲ್ಲೂ ಇವೆ. ಆದರೆ ಆದ್ಯತೆ ಮತ್ತು ಪ್ರತಿಪಾದನೆಯ ವಿಧಾನ ಮತ್ತು ಮಾರ್ಗಗಳಲ್ಲಿ ಅಲ್ಪಸ್ವಲ್ಪ ಅಂತರಗಳಿವೆ. ಈ ಅಂತರಗಳು ದಾಟಲಾಗದ ದ್ವೀಪಗಳಾಗುವುದು ಸದ್ಯದ ಸನ್ನಿವೇಶದಲ್ಲಿ ಆರೋಗ್ಯಕರವಾದುದಲ್ಲ. ಇದರರ್ಥ ತಂತಮ್ಮ ವಾದಗಳನ್ನು ಸಂಪೂರ್ಣ ತ್ಯಜಿಸಬೇಕೆಂದಲ್ಲ. ಈಗ ಭೂಮಿಕೇಂದ್ರಿತ ಸ್ನೇಹಸಂವಾದವನ್ನು ಸಾಧ್ಯವಾಗಿಸಬೇಕಾಗಿದೆ. ಇಲ್ಲದಿದ್ದರೆ ನಮ್ಮ ಭೂಮಿಯ ಬೆವರನ್ನು ಬಹುರಾಷ್ಟ್ರೀಯ ಕಂಪನಿಗಳು ತಮ್ಮ ಪೇಟೆಂಟ್ ಪಟ್ಟಿಗೆ ಸೇರಿಸಿಕೊಳ್ಳುತ್ತವೆ.

ಬ್ರಿಟಿಷ್ ವಸಾಹತುಶಾಹಿಯು ತನ್ನ ಬುದ್ಧಿ ಮತ್ತು ಬಲಗಳಿಂದಲೇ ಬೆವರನ್ನು ದೂರ ಮಾಡಿತು. ಅದಕ್ಕೂ ಮುಂಚೆ ನಮ್ಮ ವ್ಯವಸ್ಥೆಯೇ ಬೆವರನ್ನು ಮೆಟ್ಟನಿಂತ ಬುದ್ಧಿ-ಬಲಗಳನ್ನು ಆರಾಧಿಸುತ್ತ ಬಂದಿತ್ತು. ಈಗ ಜಾಗತೀಕರಣ, ಆರ್ಥಿಕ ಉದಾರೀಕರಣಗಳ ದಾಳಿಯಲ್ಲಿ ಭೂಮಿಯ ಬೆವರು ಬತ್ತಿಹೋಗುತ್ತಿದೆ. ಬೆವರು ಮೂಲ ಸಂಸ್ಕೃತಿಯು ಆತಂಕಕ್ಕೆ ಸಿಕ್ಕಿದೆ. ಭೂ ಸಂಪತ್ತು ಮತ್ತು ಸಂಪನ್ಮೂಲಗಳನ್ನು ಆಧರಿಸಿದ ಆರ್ಥಿಕ ನೀತಿಯನ್ನು ರೂಪಿಸಿ ಬೆವರಿನ ಜನರ ಬದುಕಿಗೆ ಬೆಳಕು ತರುವ ಬದಲು, ಅಮೆರಿಕ ಮೂಲದ ಆರ್ಥಿಕ ನೀತಿ ಆಕಾಶದಲ್ಲಿ ಹಾರುತ್ತ ಬಂದು ಸ್ವತಂತ್ರ ಭಾರತದ ಭೂಮಿಯಲ್ಲಿ ಬಾಂಬುಗಳನ್ನು ನೆಡುತ್ತಿದೆ. ಅವು ಭೂಕಂಪನದ ಬೀಜಗಳಾಗುತ್ತಿವೆ.

ಈ ಭೂಮಿ ಭೂ ಒಡೆಯರ ಆಡುಂಬೊಲವಾಗಬಾರದು; ಬಂಡವಾಳಶಾಹಿಗಳ ಬೆನ್ನೆಲುಬಾಗಬಾರದು. ಯಾರು ಈ ಭೂಮಿಯನ್ನು ಬದುಕಿಗೆ ಹದಗೊಳಿಸಿದರೋ ಆಕಾರಗಳನ್ನು ಕೊಟ್ಟರೋ ಅಂತಹ ಬೆವರಿನ ಜನರ ಅಂತಃಶಕ್ತಿಯಾಗಬೇಕು; ಅಂತಃಕರಣವಾಗಬೇಕು. ಬೆವರಿನ ಕ್ರಿಯಾ ಪರಂಪರೆಯಿಂದಲೇ ಭೂಮಿಯ ಜೊತೆಗಿನ ಸಂಬಂಧ ಗಾಢವಾಗಿ ಬೆಳೆಯುತ್ತ ಬಂದಿದೆ. ಆದರೆ ಭೂಮಿ ಮತ್ತು ಬೆವರುಗಳನ್ನು ಬೇರ್ಪಡಿಸಿ ಬೇಳೆ ಬೇಯಿಸಿಕೊಳ್ಳುತ್ತ ಬಂದ ಬುದ್ಧಿ-ಬಲಗಳು, ಈಗ ಮತ್ತೊಮ್ಮೆ ಜಾಗತೀಕರಣದ ನೆಪದಲ್ಲಿ ಜಾಗೃತವಾಗಿವೆ. ಎಲ್ಲ ಸಂಪನ್ಮೂಲಗಳನ್ನು ತಮ್ಮಲ್ಲಿ ಕ್ರೋಢೀಕರಿಸಿಕೊಳ್ಳುತ್ತ ಆರ್ಥಿಕ ಸುಧಾರಣೆಯ ಸೋಗು ಹಾಕುತ್ತಿವೆ. ಆದ್ದರಿಂದ ಬೆವರು ಮೂಲ ಸಂಸ್ಕೃತಿಯ ಭೂಮಿತತ್ವಕ್ಕೆ ನಾವೀಗ ಬದ್ಧವಾಗಬೇಕಾಗಿದೆ. ಈ ಭೂಮಿ ನಿಷ್ಕ್ರಿಯವಲ್ಲ. ನಡೆದಾಡುವ ನೆಲ ಮಾತ್ರವಲ್ಲ. ಇದು ಸಾಮಾಜಿಕವೂ ಹೌದು, ಆರ್ಥಿಕವೂ ಹೌದು; ಆದ್ದರಿಂದ ರಾಜಕೀಯ ಶಕ್ತಿಯೂ ಹೌದು. ಸ್ವತಂತ್ರ ಭಾರತದ ಬಿಕ್ಕಟ್ಟಿನ ಈ ಸಂದರ್ಭದಲ್ಲಿ ಭೂಮಿಶಕ್ತಿಯು ಒಂದು ರೂಪಕ ತತ್ವವಾಗಲಿ.

ಬರಗೂರು ರಾಮಚಂದ್ರಪ್ಪ
''ಸಂವೇದನೆ'', ೨೭೫, ೧೧ನೇ 'ಬಿ' ಕ್ರಾಸ್, ೧೪ನೇ ಮುಖ್ಯರಸ್ತೆ
ಜೆ. ಪಿ. ನಗರ ೨ನೇ ಹಂತ, ಬೆಂಗಳೂರು-೫೬೦ ೦೭೮




ಮೈಸೂರಿನ ಜೆ. ಎಸ್. ಎಸ್. ಮಹಿಳಾ ಕಾಲೇಜಿನಲ್ಲಿ ಜರುಗಿದ ನವಕರ್ನಾಟಕ ಪುಸ್ತಕ ಪ್ರದರ್ಶನವನ್ನು ನಿವೃತ್ತ ಪ್ರಾಧ್ಯಾಪಕರಾದ ಪ್ರೊ॥ ಶ್ರೀನಿವಾಸ ಉದ್ಘಾಟಿಸಿದರು.

# ಗಾಂಧೀವಾದದಲ್ಲಿ ಅಹಿಂಸೆಯ ಕಲ್ಪನೆ

ಕೆ.ಎಸ್. ಪಾರ್ಥಸಾರಥಿ

**ಭಾ**ಷಾಶಾಸ್ತ್ರದಲ್ಲಿ 'ಅಹಿಂಸೆ' ಎಂಬುದು 'ಹಿಂಸೆ'ಯ ನಿಷೇಧಾತ್ಮಕ ಪದವಾಗಿ ಕಂಡರೂ, ಅದು ಗಾಂಧೀಜಿಯವರಿಗೆ ಸಕಾರಾತ್ಮಕ ಸಶಕ್ತವಾದ ಸತ್ಯಾಗ್ರಹ ಚಳುವಳಿಯ ಬಹುಮುಖ್ಯ ಅಸ್ತ್ರ ಎನಿಸಿತ್ತು. ಹಿಂಸೆ ಕೇವಲ ಶಾರೀರಿಕ ಹಿಂಸೆಗೆ ಮಾತ್ರ ಸೀಮಿತವಾದುದು ಎಂದೇನಲ್ಲ. ಎಲ್ಲ ಬಗೆಯ ಶೋಷಣೆಯೂ ಹಿಂಸೆಯೇ. ಕಾಯಾ, ವಾಚಾ, ಮನಸಾ ತ್ರಿಕರಣ ಶುದ್ಧವಾದ 'ಅಹಿಂಸೆ' ತರ್ಕಕ್ಕೆ ನಿಲುಕದ, ನಂಬುಗೆಯ ವಿಷಯ. ಸುಮಾರು ೧೯೩೪ರವರೆಗೆ ಕಾಂಗ್ರೆಸ್ ಪಕ್ಷಕ್ಕೆ ಅದು ಉಪಯುಕ್ತ ಕಾರ್ಯನೀತಿಯಾಗಿದ್ದಿತಾದರೂ, ಗಾಂಧೀಜಿಯವರಿಗೆ ಅದು ಧಾರ್ಮಿಕ ನಿಷ್ಠೆಯಾಗಿತ್ತು. ಇನ್ನು ಅದು ಕಾರ್ಯಸಾಧ್ಯವಾದ ನೀತಿಯಲ್ಲವೆನಿಸಿ ಆ ಪಕ್ಷವು ಆ ನೀತಿಯನ್ನು ಕೈಬಿಟ್ಟಾಗ, ಗಾಂಧೀಜಿಯವರೂ ಆ ಪಕ್ಷದೊಂದಿಗಿನ ತಮ್ಮ ಸಂಬಂಧವನ್ನು ಔಪಚಾರಿಕವಾಗಿ ಕಡಿದುಕೊಂಡರೇ ವಿನಃ ತಮ್ಮ ಅಹಿಂಸಾನಿಷ್ಠೆಯನ್ನು ಮಾತ್ರ ಬಿಟ್ಟುಕೊಡಲಿಲ್ಲ.

ಒಟ್ಟಾರೆಯಾಗಿ ನೋಡಿದಾಗ 'ಸತ್ಯ, ಅಹಿಂಸೆ ಮತ್ತು ತ್ಯಾಗ' ಎಂಬ ಮೌಲ್ಯಗಳು ಅವರ ಆದರ್ಶಗಳಲ್ಲಿ ಅಡಕವಾಗಿವೆ ಎಂದು ಗ್ರಹಿಸಬಹುದಾಗಿದೆ. ಸತ್ಯಾಗ್ರಹ ಅವರ ಕಾರ್ಯನೀತಿ. ಈ ಮೌಲ್ಯಗಳನ್ನು ತನ್ನ ಜೀವನದಲ್ಲಿ, ತನ್ನ ಮಟ್ಟಿಗಾದರೂ ಆದಷ್ಟು ಸಾಧಿಸಿಕೊಳ್ಳುವುದು ಅವರ ಧ್ಯೇಯ. ಅವರಿಗೆ ಸ್ವಾತಂತ್ರ್ಯ ಹೋರಾಟವೂ ಈ ತತ್ವ ಪ್ರತಿಪಾದನೆಗೆ ಒಂದು ನಿಮಿತ್ತ ಮಾತ್ರವಾಗಿತ್ತು. ಆದಷ್ಟು ಮಟ್ಟಿಗೆ ಎನ್ನುವುದಕ್ಕೆ ಕಾರಣ, ಇವು ಯಾವುವೂ ಸಂಪೂರ್ಣವೆನ್ನುವಷ್ಟು ಆಗಲಾರವು. ಅವರ ಪರಿಕಲ್ಪನೆಯಲ್ಲಿ ಸತ್ಯವೇ ದೇವರು; ದೇವರಿಗೆ ಮಾತ್ರ ಸತ್ಯದ ಪರಿಪೂರ್ಣತೆ ಸಾಧ್ಯ, ವ್ಯಕ್ತಿ ಒಬ್ಬ ನಿರಂತರ ಯಾತ್ರಿ, ಅವನ ಬದುಕು ಈ ಮೌಲ್ಯಗಳನ್ನು ತಡಕಾಡುತ್ತಾ ಸಾಗುವ ಒಂದು ಯಾತ್ರೆ.

ಮಾನವ ಸ್ವಭಾವದಲ್ಲಿ ಗುಣ-ದೋಷ ಎರಡೂ ಇರುತ್ತವೆ ಎಂಬುದು ಸಾಮಾನ್ಯ ತಿಳಿವಳಿಕೆ. ಆದರೆ ದೋಷಗಳನ್ನು ಪರಿಹರಿಸಿಕೊಳ್ಳಲು ಹೆಣಗಾಡುವ ಸ್ವಭಾವದಿಂದಲೇ ಮನುಷ್ಯ ತಾನು ಪ್ರಾಣಿ ಮಾತ್ರ ಎಂದೆನಿಸಿಕೊಳ್ಳದೆ, ಅದಕ್ಕಿಂತ ಉತ್ತಮನೆನಿಸಿಕೊಳ್ಳುವುದು, ಎನ್ನುತ್ತಾರೆ ಗಾಂಧೀಜಿ. ತಾಮಸ ತುಂಬಿದ ಮೂಕ ಪ್ರಾಣಿಯೊಡನೆಯೂ ಸಕಲ ಜೀವಿಗಳೊಡನೆಯೂ ಚರಾಚರಗಳೊಡನೆಯೂ ಮನುಷ್ಯ ತನ್ನನ್ನು ತಾನು ಸಮೀಕರಿಸಿಕೊಳ್ಳುವ ಸಾಧನೆಯೇ ಸತ್ಯಾನ್ವೇಷಣೆ ಎನ್ನುವ ಗಾಂಧೀಜಿಯವರ ಧೋರಣೆಯಲ್ಲಿ, ಕೇವಲ ತಾರ್ಕಿಕ ಬುದ್ಧಿಗೆ ಅಸಾಂಗತ್ಯಗಳ, ವಿರೋಧಾಭಾಸಗಳ ಗೊಂದಲವೇ ಎದ್ದು ಕಾಣುವ ಸಾಧ್ಯತೆ ಇದೆ. ಆದರೆ ಗಾಂಧೀಜಿ ನಿರ್ಭಿಡೆಯಿಂದ ಹೇಳುತ್ತಾರೆ: ಪ್ರಾಣಿಯಲ್ಲಿರುವ ಜೀವವೂ ತನ್ನೊಳಗಿರುವುದೂ ಒಂದೇ, ಅವು ಬೇರೆ ಬೇರೆ ವಿಕಾಸದ ಹಂತದಲ್ಲಿವೆಯಷ್ಟೆ ಎಂದು. ಆಧ್ಯಾತ್ಮಿಕ ಸಾಧಕರು, ಮತಧರ್ಮ ಪ್ರಚಾರಕರು, ಹೇಳುವುದಕ್ಕಿಂತ ಇವರು ಹೇಳುವುದರಲ್ಲಿ ಹೊಸದೇನಿದೆ? ಎಂದರೆ, ಹೊಸತೇ ಏಕೆ ಆಗಿರಬೇಕು? ಸ್ವಾರಸ್ಯವೆಂದರೆ, ಬಹುಕಾಲದಿಂದಲೂ ಮಾನವ ಇವುಗಳನ್ನು ಸಾಧಿಸಲು ಪರದಾಡುತ್ತಲೇ ಇದ್ದಾನೆ. ಇಂದಿನ ಪ್ರಯತ್ನಗಳು ಹೊಸದು, ಮೌಲ್ಯಗಳು ಸ್ಥಿರವಾದುವು, ಸಾರ್ವಕಾಲಿಕ, ಕ್ರಿಯಾಶೀಲ ಎನ್ನುತ್ತಾರೆ ಗಾಂಧೀಜಿ. ಸರ್ವಜೀವಿಗಳೊಡನೆಯೂ ಸಮಾನರೆ ಎಂದು ಸಮೀಕರಿಸಿಕೊಂಡ ಮೇಲೆ, ಜೀವ ಜೀವಿಗಳ ನಡುವೆ ಹಿಂಸೆ, ದಬ್ಬಾಳಿಕೆಗಳು ಅರ್ಥಹೀನ. ಅವುಗಳಿಗೆ ಅವಕಾಶವೂ ಕೂಡದು, ಅವರ ನಡುವಿನ ಎಲ್ಲಾ ವಹಿವಾಟನ್ನೂ ಅಹಿಂಸೆಯ ಮೂಲಕ ಮಾಧ್ಯಮಿಸಬೇಕು. ಇದಕ್ಕೆ ತ್ಯಾಗಬುದ್ಧಿ ಅತ್ಯಗತ್ಯವಾಗುತ್ತದೆ.

ವ್ಯಕ್ತಿಗೆ ಆದರ್ಶವಾಗಬಲ್ಲದ್ದು ಇಡೀ ರಾಷ್ಟ್ರಕ್ಕೆ, ಎಲ್ಲಾ ಕ್ರಿಯೆಗಳಿಗೆ, ರಾಜಕೀಯಕ್ಕೆ ಹಾಗೂ ಸ್ವಾತಂತ್ರ್ಯ ಹೋರಾಟಕ್ಕೆ ವಿಹಿತವಾಗಬಲ್ಲುದೆ? ಗಾಂಧೀಜಿ ನಿಶ್ಶಂಕೆಯಿಂದ ಅದು ಸಾಧ್ಯವಿದೆ ಎನ್ನುತ್ತಾರೆ. ೧೯೩೪ರಲ್ಲಿ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಅಹಿಂಸೆಯನ್ನು ರಾಜಕೀಯ ನೀತಿಯಾಗಿ ಕೈಬಿಟ್ಟಾಗ ಅವರು ಕೊಟ್ಟ ಕಾರಣ, ತಾವು ನಿರ್ವಹಿಸಬೇಕಾದ ಜನ ಸಮುದಾಯದೊಳಗಿನ ವ್ಯಕ್ತಿಗಳ, ವ್ಯಕ್ತಿತ್ವದೊಳಗಿನ ಕುಂದು-ಕೊರತೆಗಳನ್ನು ಗಮನಿಸಿದಾಗ, ಗಾಂಧೀಜಿಯವರ ಅಹಿಂಸಾಮಾರ್ಗ ಕಾರ್ಯಸಾಧ್ಯ ನೀತಿಯಾಗಲಾರದು ಎಂದು. ಅಷ್ಟೇ ಅಲ್ಲದೆ ಒಂದು ರಾಜಕೀಯ ಶಕ್ತಿಯಾಗಿ, ರಾಷ್ಟ್ರೀಯ ಹೋರಾಟದ ಹೊಣೆ ಹೊತ್ತವರಾಗಿ ಪಕ್ಷ ಅವರ ನಿರ್ದೇಶನ, ಉಪದೇಶ ಪಡೆಯುತ್ತಲೇ ವೈಯಕ್ತಿಕ ಧ್ಯೇಯಾಧಾರಿತ ಮಾರ್ಗವನ್ನು ಮುಂದುವರಿಸಲು ಗಾಂಧೀಜಿ ಸ್ವತಂತ್ರರೆಂದೂ ತೀರ್ಮಾನಿಸಿದರು. ಗಾಂಧಿಜಿಯವರಿಗೆ ಇದು ಒಪ್ಪಿಗೆಯಾಯ್ತು. ಅಲ್ಲಿಂದ ಮುಂದ ಅವರು ಸ್ವಾತಂತ್ರ್ಯ ಹೋರಾಟದ ಏಕೈಕ ನಾಯಕರಾಗಿರದೆ, ಒಬ್ಬ ಪ್ರವಾದಿಯಂತೆ, ಮನುಕುಲದ ಪರವಾಗಿ ಮಾತನಾಡುವವರಂತೆ ಬೆಳೆಯುತ್ತಾ ಹೋಗುತ್ತಾರೆ. ಅಲ್ಲಿಯವರೆಗಿನ ಮತ್ತು ತದನಂತರವೂ ಗಾಂಧೀಜಿ ನಮ್ಮ ಸ್ವಾತಂತ್ರ್ಯ ಹೋರಾಟ ಸಂಪೂರ್ಣ ಅಹಿಂಸಾಮಾರ್ಗದ್ದಲ್ಲವೆಂದೂ, ಅದರ ಅಹಿಂಸೆ ಅದು ಬಳಸಿಕೊಂಡ ತಂತ್ರದ, ನೀತಿಯದಾಗಿತ್ತೆಂದೂ ಸ್ಪಷ್ಟಪಡಿಸಿದ್ದಾರೆ. ಆ ಚಳುವಳಿಗಳ ವೈಫಲ್ಯಗಳಿಗೂ ಇದೇ ಕಾರಣವೆನ್ನುತ್ತಾರೆ. ೧೯೨೬ರಷ್ಟು ಹಿಂದೆಯೇ ಅವರ ಅಹಿಂಸಾ ಸಿದ್ಧಾಂತವು ಕುಟಿಲ ರಣನೀತಿಯೆಂದು ಕೆಲವರು ಆಪಾದಿಸಿದ್ದರು. ಕೆಲವರು ಅದನ್ನು ಸ್ವಾಗತಿಸಿದ್ದರು. ಹೋರಾಟದ ಅಂತಿಮಘಟ್ಟ ಹಿಂಸೆಯ ರೂಪ ಪಡೆದುಕೊಳ್ಳುತ್ತದೆ ಎಂಬುದು ಅವರ ಅಭಿಪ್ರಾಯವಾಗಿತ್ತು. ಹಾಗೆ ನೋಡಿದರೆ ೧೯೪೨ರ 'ಭಾರತ ಬಿಟ್ಟು ತೊಲಗಿ' ಎಂಬ ಘೋಷಣೆ ಕೊಟ್ಟನಂತರ ಚಳುವಳಿಯ ನಾಯಕರೆಲ್ಲಾ ಜೈಲಿನಲ್ಲಿದ್ದರು. ಆ ಸಂದರ್ಭದಲ್ಲಿ ಜನತೆಯೇ ಹೋರಾಟಗಳನ್ನು ರೂಪಿಸಿಕೊಂಡಾಗ ವ್ಯಾಪಕಗೊಂಡು ಹಿಂಸೆ ಅಂತಿಮಘಟ್ಟಕ್ಕೆ ತಲುಪಿತು. ಅದಕ್ಕೆ ಗಾಂಧೀಜಿಯವರಾಗಲೀ ಇತರ ನಾಯಕರಾಗಲೀ ಹೊಣೆಯಲ್ಲ. ಆದರೆ ರಾಷ್ಟ್ರದ ಇಡೀ ಜನತೆಯನ್ನು ಅಹಿಂಸೆಯ ಸರದಾರರನ್ನಾಗಿಸುವ ಗಾಂಧೀಜಿಯವರ ಪ್ರಯೋಗ ಕುಸಿದುಬಿದ್ದಿದ್ದು ಕಟುಸತ್ಯ. ಅಹಿಂಸಾಮಾರ್ಗದ ಈ ವೈಫಲ್ಯ ಸಂತೋಷಪಡುವಂಥದ್ದೇನಲ್ಲ.



ಸಮಾಜದ ಬಿಕ್ಕಟ್ಟುಗಳನ್ನು ಸಮರ್ಥವಾಗಿ ಎದುರಿಸಲು ಹಿಂಸಾಮಾರ್ಗದಿಂದ ಸಾಧ್ಯವಿಲ್ಲವೆಂಬುದು ಪದೇ ಪದೇ ಸಾಬೀತಾಗಿದೆ. ಆದರೆ ಈ ಮಾರ್ಗದ ಸಾಫಲ್ಯತೆಯು ಸಾಧ್ಯವಾಗಲು ವಿಶ್ವವ್ಯಾಪಿಯಾಗಿ ಅದನ್ನು ವಿವಿಧ ಹಂತಗಳಲ್ಲಿ ಅನುಸರಿಸುವುದು ಅಗತ್ಯವಾಗುತ್ತದೆ, ಎಂದು ಗಾಂಧೀಜಿ ನಂಬಿದ್ದರು. ಅವರ ಮಟ್ಟಿಗೆ ಅಹಿಂಸಾಮಾರ್ಗ ಕಾರ್ಯಸಾಧ್ಯವಾದ ಒಂದು ನೀತಿ, ಏಕೈಕ ಮಾರ್ಗ;ಮಾನವನು ಆ ಮಾರ್ಗದ ಅನುಸರಣೆಗೆ, ಅದರ ಸವಾಲುಗಳಿಗೆ ಸಿದ್ಧವಾಗಿಲ್ಲದಿರುವುದರಲ್ಲಿ ಅದರ ವೈಫಲ್ಯತೆಯನ್ನು ಗುರುತಿಸಬಹುದಷ್ಟೆ. ಜನರು ವೈಯಕ್ತಿಕವಾಗಿ ಅಹಿಂಸಾಮಾರ್ಗವನ್ನು ರೂಢಿಸಿಕೊಂಡು, ಅನುಸಂಧಾನ ಮಾಡಿಕೊಂಡು, ಪ್ರಯೋಗಶೀಲರಾಗುತ್ತಾ ಹೋಗುವುದು ಮಾನವ ಸಮಾಜವನ್ನು ಹೆಚ್ಚಿನ ಸಾಧನೆಗಳಿಗೆ ಸಿದ್ಧಗೊಳಿಸುವ ಒಂದು ಮಾರ್ಗ. ಅಂದರೆ ಸದ್ಯದ ಪರಿಸ್ಥಿತಿಯಲ್ಲಿ ಅವರಲ್ಲಿ ಅಹಿಂಸಾಮಾರ್ಗವು ವೈಯಕ್ತಿಕ ನೆಲೆಯಲ್ಲಿ ಕಾರ್ಯಸಾಧ್ಯವಾದ ಆದರ್ಶವೆನಿಸಿಬಿಡುತ್ತದೆ. ಗಾಂಧೀಜಿಯವರ ಕೊಡುಗೆ ಇದಿಷ್ಟೇ ಆದರೂ ಮಾನವನ ಇತಿಹಾಸಕ್ಕೆ ದಿಕ್ಕು ತೋರಿಸಿದವರ ಅಗ್ರಪಂಕ್ತಿಗೆ ಅವರು ಸೇರಿಬಿಡುತ್ತಾರೆ. ಬಹುಶಃ ಅದೇ ಅವರ ಪ್ರಾಮುಖ್ಯತೆ ಮತ್ತು ಪ್ರಸ್ತುತತೆ ಎನ್ನಬಹುದು.

ಇಲ್ಲಿಯವರೆಗೂ ಸಂಭವಿಸಿರುವುದು ಕೇವಲ ಹಿಂಸೆ-ಪ್ರತಿಹಿಂಸೆಗಳ ನಡುವಿನ ಹಣಾಹಣೆ ಅಷ್ಟೆ. ಈ ಹಣಾಹಣಿಯ ಆಶಯವೂ ಅಂತಿಮವಾಗಿ ಅಹಿಂಸಾತ್ಮಕ ಸ್ಥಿತಿಯನ್ನು ತಲಪುವುದೇ. ವಾಸ್ತವದಲ್ಲಿ ಇಲ್ಲಿಯವರೆಗೂ ಜರುಗಿರುವ ಯುದ್ಧಗಳಿಂದ ಸಾರ್ವಕಾಲಿಕ, ಶಾಶ್ವತ ಶಾಂತಿ ಸ್ಥಾಪಿತವಾಗಿಲ್ಲ. ಹಿಂಸೆ-ಅಹಿಂಸೆಗಳ ನಡುವಿನ

ಸಾಮೂಹಿಕ ಹೋರಾಟಗಳು ಕೆಲವೇ ಬಾರಿ ಜರುಗಿದ್ದು, ಅವುಗಳ ಅತ್ಯುತ್ತಮ ಸಂದರ್ಭವನ್ನು ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಕಾಣಬಹುದು. ಆದರೆ ವೈಯಕ್ತಿಕ ಮಟ್ಟದಲ್ಲಿ ಇದರ ಪ್ರಯೋಗ ಸಾಕಷ್ಟು ನಡೆದಿದ್ದು, ಅಹಿಂಸಾಮಾರ್ಗ ಸಾಧ್ಯವಾದಲ್ಲಿ ಅದು ಸ್ವಾಗತಾರ್ಹ, ಸ್ವೀಕಾರಾರ್ಹ ಎಂದು ಸಿದ್ಧವಾಗಿದೆ.

ಗಾಂಧೀಜಿಯವರ ಆದರ್ಶಗಳ ಆಕರ ಪೌರ್ವಾತ್ಯವೋ, ಪಾಶ್ಚಿಮಾತ್ಯವೋ ಎಂಬ ಚರ್ಚೆ ಅವರ ವಿಶ್ವಮಾನವ ಕಲ್ಪನೆಯಲ್ಲಿ ಅಸಂಬದ್ಧವೆನಿಸುತ್ತದೆ. ಅದು, ಪಶ್ಚಿಮದ ಚಿಂತಕರು, ಮುಖ್ಯವಾಗಿ ಟಾಲ್‌ಸ್ಟಾಯ್, ಥೋರೋ, ಸ್ವಲ್ಪಮಟ್ಟಿಗೆ ರಸ್ಕಿನ್ ಮುಂತಾದವರು ಪ್ರತಿನಿಧಿಸುವ, ನಿಷ್ಕ್ರಿಯ ಪ್ರತಿರೋಧವಲ್ಲ, ಗಾಂಧೀಜಿಯವರು ತಮ್ಮ ಅಭಿಪ್ರಾಯವನ್ನು ಅಂಥ ವಿಚಾರಧಾರೆಯು ಸಂಪೂರ್ಣವಾಗಿ ಪ್ರತಿನಿಧಿಸುವುದಿಲ್ಲವೆಂದು ಹೇಳುತ್ತಲೇ ಅನೇಕರಿಂದ ಸಲಹೆಗಳನ್ನು ಸ್ವೀಕರಿಸಿ ಅಂತಿಮವಾಗಿ, 'ಸತ್ಯಾಗ್ರಹ'ವೇ ಸೂಕ್ತವಾದ ಪದ ಎಂಬ ತೀರ್ಮಾನಕ್ಕೆ ಬರುತ್ತಾರೆ. ಸತ್ಯದ ಪರವಾಗಿ ಆಗ್ರಹಿಸುವುದು ಎಂದಾಗ, ಅದು ಒಂದು ನೈತಿಕ ಒತ್ತಾಯವೇ ವಿನಃ ಅಲ್ಲಿ ಕೋಪ-ತಾಪಗಳಿಗೆ, ಹಿಂಸೆಗೆ ಸ್ಥಳವಿಲ್ಲ. ಯಾವುದಕ್ಕೆ ಅಸ್ತಿತ್ವವಿದೆಯೋ ಅದು ಸತ್ಯ, ಅದನ್ನು ರಕ್ಷಿಸಿಕೊಳ್ಳುವುದು ಅಗತ್ಯ. ಅದಕ್ಕಾಗಿ ಆಗ್ರಹಿಸುವುದೆಂದರೆ ಅದನ್ನು ವ್ಯಕ್ತಿಯೇ ನಿಷ್ಠೆಯಿಂದ ಆಚರಿಸುವ ಜೀವನ ಶೈಲಿ. ಯಾವುದೇ ಪ್ರತಿರೋಧಕ್ಕೂ ಮಣಿಯದೆ ಎದುರಿಸುವುದು, ಪ್ರತಿರೋಧದೊಡನೆಯೇ ಅಹಿಂಸೆಯ ಮಾರ್ಗದಲ್ಲಿ ವಿಪಕ್ಷದ ಪರಿವರ್ತನೆಗಾಗಿ ಶ್ರಮಿಸುವುದು ಎಂದು ಆಗುತ್ತದೆ. ಪಾಶ್ಚಿಮಾತ್ಯ ಕಲ್ಪನೆಯಲ್ಲಿ ಸಮರ್ಥರ, ಬಲಶಾಲಿಗಳ, ಹಿಂಸೆಯ ವಿರುದ್ಧ ನಿಕೃಷ್ಟರು, ಬಲಹೀನರು, ಅನುಸರಿಸಬಹುದಾದ ಮಾರ್ಗ ನಿಷ್ಕ್ರಿಯ ಪ್ರತಿರೋಧ. ಗಾಂಧೀಜಿಯವರು ಸತ್ಯಕಾಮಿಯ ನಿರ್ಬಲತೆಯನ್ನು ಒಪ್ಪುವುದೇ ಇಲ್ಲ. ಇವರ ಪ್ರತಿಭಟನೆ ಸಕ್ರಿಯವಾದುದು, ಸತ್ಯಕ್ಕೇ ಅಂತಿಮ ಜಯವೆಂದು ಹಾಗೂ ಎಷ್ಟೋ ಬಾರಿ ತರ್ಕಕ್ಕೆ ಒಗ್ಗದ, ಮತಧಾರ್ಮಿಕತೆಯ ನಂಬಿಕೆಯ ಮಾದರಿಯದು. ಇಲ್ಲಿ ನಿಷ್ಕ್ರಿಯತೆ, ದುರ್ಬಲತೆ ಮುಂತಾದ ಆರೋಪಗಳನ್ನು ನೀಗಿಕೊಳ್ಳಲು ಅವರು ಭಾರತೀಯ ಆಕರಗಳಿಗೆ ಮೊರೆ ಹೋಗುತ್ತಾರೆ.

ಗಾಂಧಿ ಚಿಂತನೆ ಬೆಳೆದಂತೆಲ್ಲಾ ಭಾರತೀಯ ಆಕರಗಳಲ್ಲಿ ಇರುವ ಎಲ್ಲಾ ಮೂಲಗಳನ್ನು ಅದು ಶೋಧಿಸುತ್ತಾ ಬೆಳೆಯಿತಾದರೂ ಅವರು ಮುಖ್ಯವಾಗಿ, ತಮ್ಮ ಸಮರ್ಥನೆಗೆ ಬಳಸಿಕೊಂಡಿದ್ದು ಭಗವದ್ಗೀತೆಯನ್ನು, ಶ್ರೀಮದ್ರಾಮಾಯಣವನ್ನು. ಅದರ ಜೊತೆಗೆ ಈಶಾವಾಸ್ಯೋಪನಿಷತ್ತು ಮತ್ತು ಸಂತ ನರಸಿ ಭಗತ್‌ರ 'ವೈಷ್ಣವ ಜನತೋ' ಎಂಬ ಗೀತೆ. ಜೊತೆಗೆ ಪ್ರಾಸಂಗಿಕವಾಗಿ ಕೆಲವೊಮ್ಮೆ ಪ್ರಹ್ಲಾದ, ಹರಿಶ್ಚಂದ್ರರ ಕಥೆಗಳನ್ನೂ ಬಳಸಿಕೊಂಡಿದ್ದಾರೆ.

ಭಗವದ್ಗೀತೆಯಲ್ಲಿ ಒಂದೆಡೆ ಪ್ರಾಣಿಗಳ ನಾನಾ ಭಾವಗಳನ್ನು ಪಟ್ಟಿಮಾಡಲಾಗಿದೆ ಹೀಗೆ: ಬುದ್ಧಿ, ಜ್ಞಾನ, ಅಸಂಮೋಹ, ಕ್ಷಮೆ, ಸತ್ಯ, ಬಾಹ್ಯೇಂದ್ರಿಯ ನಿಗ್ರಹ, ಅಂತರಿಂದ್ರಿಯ ನಿಗ್ರಹ, ಸುಖ, ದುಃಖ, ಉತ್ಪತ್ತಿ, ವಿನಾಶ, ಭಯ, ಅಭಯ, ಅಹಿಂಸೆ, ಅಯಶಸ್ಸು. ಮತ್ತೊಂದೆಡೆ ದೈವೀಸಂಪತ್ತುಗಳ ಪಟ್ಟಿಯಲ್ಲಿ ನಿರ್ಭಯತೆ, ಸತ್ತ್ವಸಂಶುದ್ಧಿ, ಜ್ಞಾನಯೋಗ, ವ್ಯವಸ್ಥಿತಿ, ದಾನ, ಯಜ್ಞ, ವೇದಾಧ್ಯಯನ, ತಪಸ್ಸು, ಸರಳತೆ, ಆಕ್ರೋಶ, ತ್ಯಾಗ, ಶಾಂತಿ, ಚಾಡಿ ಹೇಳದಿರುವುದು, ಭೂತದಯೆ, ಇಂದ್ರಿಯನಿಗ್ರಹ, ಮೃದುಸ್ವಭಾವ, ನಾಚಿಕೆ-ಚಪಲವಿಲ್ಲದೆ ಇರುವುದು, ತೇಜಸ್ಸು, ಧೈರ್ಯ, ಶೌಚ, ದ್ರೋಹ ಮಾಡದಿರುವುದು, ಅಭಿಮಾನವಿಲ್ಲದೆ ಇರುವುದು ಮುಂತಾದವುಗಳೊಡನೆ ಅಹಿಂಸೆಯನ್ನೂ ಸೇರಿಸಲಾಗಿದೆ. ಈ ಸ್ವೀಕಾರಾರ್ಹ ಸದ್ಗುಣ ಲಕ್ಷಣಗಳ ಪರಸ್ಪರ ಪ್ರಕ್ರಿಯೆಯಲ್ಲಿ ಅಹಿಂಸೆಯ ಪಾತ್ರ ಸ್ಪಷ್ಟ. ಇವೆಲ್ಲಾ ವ್ಯಕ್ತಿವಿಕಾಸವನ್ನು ಸಾಧಿಸಬಯಸುವವರಿಗೆ ಮಾರ್ಗದರ್ಶಕವಾಗಿ ಬಳಸಲಾಗಿದ್ದು, ಗಾಂಧೀಜಿಯವರಿಗೆ ಅವು ಪ್ರಿಯವಾಗುವುದು ಸಹಜವೇ.

ರಾಮಾಯಣ ಕಥಾ ಪ್ರಾರಂಭದಲ್ಲಿಯೇ ವಾಲ್ಮೀಕಿ ಮುನಿ ನಮ್ಮ ಮುಂದೆ ಇಡುವ ಪರಿಪೂರ್ಣ ಮಾನವ ಮತ್ತು ಪರಿಪೂರ್ಣ ರಾಜ್ಯದ ಲಕ್ಷಣಗಳು ಹೀಗಿವೆ: ಒಬ್ಬನೇ ವ್ಯಕ್ತಿಯಲ್ಲಿ ಈ ಎಲ್ಲ ಗುಣಗಳು – ಗುಣವಂತ, ವೀರ, ಧರ್ಮಜ್ಞ, ಕೃತಜ್ಞ, ಸತ್ಯವಾದಿ, ದೃಢಸಂಕಲ್ಪದವನು, ಸದಾಚಾರ ನಿಷ್ಠೆ, ಸಕಲ ಪ್ರಾಣಿಗಳ ಹಿತವನ್ನು ಬಯಸುವವ, ವಿದ್ವಾಂಸ, ಕಾರ್ಯದಕ್ಷ, ನೋಡುವವರಿಗೆ ಆನಂದ ನೀಡುವವನು, ಧೈರ್ಯಶಾಲಿ, ಕೋಪವನ್ನು ಜಯಿಸಿರುವವನು, ಕಾಂತಿಯುಕ್ತ, ಅಸೂಯೆಯಿಲ್ಲದವ, ಯುದ್ಧದಲ್ಲಿ ಸಾಟಿಯಿಲ್ಲದವ ಮುಂತಾದವು. ಎಲ್ಲವೂ ಒಬ್ಬನಲ್ಲಿ ಕೇಂದ್ರೀಕೃತವಾಗಿರಲು ಸಾಧ್ಯವೇ ? ಅಂಥ ಮಾನವನೊಬ್ಬ ಇರುವುದು ಸಾಧ್ಯವೆ ಎಂದರೆ, ಹೌದು ಅಂತಹ ಅಪೂರ್ವ ವ್ಯಕ್ತಿ ಶ್ರೀರಾಮ ಎಂದು ಹೇಳುತ್ತಾನೆ ನಾರದ. ಅದು ಹೇಗೆ ಎಂಬುದಕ್ಕೆ ವಿವರಣೆಯಾಗಿ ಅವನ ಜೀವನಚರಿತ್ರೆಯ ಕಥನವಿದೆ. ತನ್ನ ಎಲ್ಲಾ ಹೋರಾಟದ ಅಂತ್ಯದಲ್ಲಿ ಅವನು ಸ್ಥಾಪಿಸಿದ ರಾಮರಾಜ್ಯದ ಲಕ್ಷಣಗಳು ಈ ಆದರ್ಶಗಳ ಸಾಧನೆಯಂತೆ ಕಾಣಿಸಿಕೊಳ್ಳುತ್ತವೆ. ವಾಲ್ಮೀಕಿಯ ರಾಮರಾಜ್ಯದಲ್ಲಿ ಧನಧಾನ್ಯ ಸಮೃದ್ಧಿಯಿದೆ, ಪ್ರಜೆಗಳು ಹರ್ಷಚಿತ್ತರು, ಅಲ್ಪ ಲಾಭದಲ್ಲೆ ಸಂತುಷ್ಟರು, ದಾರಿದ್ರ್ಯವಿಲ್ಲದ ಪುಷ್ಟರು, ಧರ್ಮನಿರತರು, ಮಾನಸಿಕ ಹಾಗೂ ದೈಹಿಕ ರೋಗರುಜಿನ ಗಳಿಲ್ಲದವರು. ಸುಭಿಕ್ಷವಿದೆ ಎಂದಾಗ ಭಿಕ್ಷುಕರಿದ್ದಾರೆಂಬ ವ್ಯಾಖ್ಯಾನ ಆ ಕಥೆಯ ಹಂದರದಲ್ಲಿ ಕುಹಕವಾಗುತ್ತದೆ. ಸಾಕಷ್ಟು ದವಸಧಾನ್ಯ ತುಂಬಿದ ದಾನ ತ್ಯಾಗಶೀಲ ಸಮಾಜದಲ್ಲಿ, ಸ್ವಭಾವದಿಂದಲೇ ಸಾಧಾರಣರಿಗೂ ಬದುಕುವ ಅವಕಾಶವಿದೆ ಎಂದೇ ಸ್ವೀಕರಿಸಬೇಕಾಗುತ್ತದೆ. ಹಿರಿಯರಿಗೆ ಮುಂಚೆ ಕಿರಿಯರು ಸಾಯುವುದಿಲ್ಲ, ಸ್ತ್ರೀಯರು ಪತಿವ್ರತೆಯರು, ಪುರುಷರೂ ಏಕಪತ್ನೀವ್ರತಸ್ಥರು, ಸ್ತ್ರೀಯರು ಅಕಾಲದಲ್ಲಿ ವಿಧವೆಯರಾಗುವುದಿಲ್ಲ, ಬಿರುಗಾಳಿಯ, ಜ್ವರ ರೋಗಾಣುಗಳ ಭಯವಿಲ್ಲ, ಯಾವ ಪ್ರಜೆಯೂ ಹಸಿವಿನಿಂದ ಬಳಲುವ ಸಂದರ್ಭವಿಲ್ಲ, ಕಳ್ಳಕಾಕರ ಭಯವಿಲ್ಲ, ಧನಧಾನ್ಯಸಮೃದ್ಧಿ ಗ್ರಾಮ-ಪಟ್ಟಣಗಳಲ್ಲೆಲ್ಲಾ ತುಂಬಿದೆ. ಹಿಂದೆಂದೋ ತ್ರೇತಾಯುಗದಲ್ಲಿತ್ತೆಂದು ಹೇಳುವಂತೆ ಇಂದೂ ಸಕಲರೂ ಆನಂದದಿಂದ ತುಂಬಿದ್ದಾರೆ. ಈ ಆದರ್ಶ ರಚನೆಯಲ್ಲಿ ಎಲ್ಲಿಯೂ ನೇರವಾಗಿ ಅಹಿಂಸೆಯನ್ನು ಒಂದು ಸ್ವಾಯತ್ತ, ನಿರಂಕುಶ ಮೌಲ್ಯವಾಗಿ ಹೇಳಿಲ್ಲ. ಹೆಸರಿಸಿರುವ ಮೌಲ್ಯಗಳ ವಿಶ್ಲೇಷಣೆಯಲ್ಲಿ ಅದರ ಪಾತ್ರವೂ ಹಣಕಿ ಹಾಕಿರಬಹುದಷ್ಟೆ. ಭಗವದ್ಗೀತೆಯಲ್ಲಿ ಮಾನವನು ಅತಿಮಾನವನಾಗುವ ಸಾಧನೆಯ ಮಾರ್ಗವಾಗಿ ಈ ಮೌಲ್ಯಗಳು ಪ್ರಕಟವಾದರೆ ರಾಮಾಯಣದಲ್ಲಿ ರಾಮನನ್ನು ವಿಶಿಷ್ಟ ಮಾನವನನ್ನಾಗಿ ಪ್ರಕಟಿಸುವುದೇ ಉದ್ದೇಶವೆನಿಸುತ್ತದೆ. ಗಾಂಧೀಜಿಯವರು ರಾಮಾಯಣದ ಸಂದರ್ಭಗಳನ್ನು ಮೌಲ್ಯ ಸಾಧನೆಯ ಪ್ರಯೋಗ ಮಾರ್ಗವಾಗಿ ಸ್ವೀಕರಿಸುತ್ತಾರೆ. ಇನ್ನು ಈಶಾವಾಸ್ಯೋಪನಿಷತ್ತಿನ 'ಕಂಡವರದ್ದನ್ನು ಬಯಸಬೇಡ' ಎಂಬ ವಾಕ್ಯವೂ, ಸಕಲ ಪ್ರಾಣಿಗಳೊಡನೆ ತನ್ನನ್ನು ತಾನು ಸಮೀಕರಿಸಿಕೊಳ್ಳುವ ವಚನವೂ ಗಾಂಧೀಜಿ ಅವರಿಗೆ ಅಗತ್ಯವಾಗುತ್ತದೆ. 'ವೈಷ್ಣವೋ ಜನತೋ' ಹೊಗಳುವ ವೈಷ್ಣವನ ಲಕ್ಷಣಗಳು, ದೇಶೀಭಾಷೆಯಲ್ಲಿ ಇದು ಈ ಎಲ್ಲ ಪುರಾಣ ಶಾಸ್ತ್ರಗ್ರಂಥಗಳ ಮೌಲ್ಯಗಳನ್ನು ಸರಳವಾಗಿ ಸಂಗ್ರಹಿಸುವ ಒಂದು ಪ್ರಯತ್ನವಷ್ಟೆ. ಭಾರತೀಯ ಆಕರವಾಗಿ ಬೌದ್ಧಧರ್ಮವನ್ನು ಅವರು ಹಿಂದೂಧರ್ಮದ ನೆಲೆಯಲ್ಲಿ ಸ್ವೀಕರಿಸಿಬಿಡುತ್ತಾರೆ. ಇದರ ಮತ್ತು ಇತರ ಆಕರಗಳ ಧೋರಣೆಗಳ ಸಮಂಜಸತೆ ಈ ಲೇಖನದ ಚರ್ಚಾವಿಷಯವಲ್ಲ.

ಇದೇ ಆಕರಗಳನ್ನು ಗಮನಿಸಿ ಹೇಳುವುದಾದರೆ ಅಹಿಂಸೆಯು ಸತ್ಯಕ್ಕೆ ಒಂದು ಸಾಧನೆಯ ಮಾರ್ಗ, ವ್ಯಕ್ತಿಯ ನೆಲೆಯಲ್ಲಿ ಪ್ರಯೋಗವಾಗುವಂಥದು. ಎಲ್ಲ ವ್ಯಕ್ತಿಗಳು ಈ ಸಾಧನೆಯನ್ನು ಮುಗಿಸಿದಂದು ಅಂಥವರನ್ನೊಳಗೊಂಡ ಸಮಾಜದಲ್ಲಿ ಅಹಿಂಸೆ ನಿತ್ಯ ಜೀವನದ ವಾಸ್ತವವಾಗಿರುತ್ತದೆ. ಇಂಥ ಸಾಧಕ ಒಬ್ಬನೇ ಇದ್ದರೂ ಅದರ ಪರಿಣಾಮ ಸಾಮಾಜಿಕವಾಗಿ ಬಹಳ ವ್ಯಾಪಕವಾದದ್ದೂ, ಪರಿಣಾಮಕಾರಿಯೂ ಆಗಿರುತ್ತದೆ. ಅಂಥ ವ್ಯಕ್ತಿಯು ಒಡ್ಡುವ ಸವಾಲುಗಳನ್ನು ಎಂದಿನಂತೆಯೇ ಹಿಂಸೆಯಿಂದ ಹತ್ತಿಕ್ಕಲಾಗುವುದಿಲ್ಲ. ಹಿಂಸ್ರಕ ಶಕ್ತಿಯನ್ನೇ ಆಧರಿಸಿದ ಪ್ರಭುತ್ವ ವ್ಯವಸ್ಥೆಯಲ್ಲೂ ಇಂಥ ಪ್ರವೃತ್ತಿಗಳಿಗೆ ಮನ್ನಣೆ ನೀಡುವುದೇ ಅಲ್ಲದೆ, ಪ್ರಭುತ್ವದ ಮುಖ್ಯ ಉದ್ದೇಶವಾದ ಶಾಂತಿ ಸ್ಥಾಪನೆಯ ಪ್ರಕ್ರಿಯೆಯಲ್ಲಿ ಅವರನ್ನು ಬಳಸಿಕೊಳ್ಳುವುದು ಅಗತ್ಯ, ಅನೇಕ ವೇಳೆ ಅನಿವಾರ್ಯವೂ ಕೂಡ. ಹಿಂಸೆಯ ಪ್ರಯೋಗವನ್ನು ಅಂತಿಮ ಅಸ್ತ್ರವಾಗಿ ಬಳಸಬೇಕೆನ್ನುವ ಎಲ್ಲ ನಾಗರಿಕ ಸಮಾಜಗಳಲ್ಲೂ ಹಲವು ರೀತಿಯ ಅಹಿಂಸೆ ಬಗೆಗಿನ ಚಿಂತನೆಯನ್ನು ಉದ್ದೀಪನಗೊಳಿಸುವ ಅಗತ್ಯವಿದೆ. ಸುಳ್ಳು ಹೇಳುವವರಾರೂ ಅದೇ ಸರಿಯೆಂದು ಸಮರ್ಥಿಸಿಕೊಳ್ಳದೆ, ತಮ್ಮ ಸಮರ್ಥನೆಗೆ ತಾವು ಸತ್ಯವನ್ನೇ ಹೇಳುತ್ತಿದ್ದೇವೆ ಎಂದು ವಂಚನೆಗಾಗಿ ಹೇಳುತ್ತಾರೆ. ಆಗ ಅವರು ಸತ್ಯವೇ ಸರಿಯೆಂದು ಅರಿವಿಲ್ಲದೆಯೇ ಅನಿವಾರ್ಯವಾಗಿ ಎತ್ತಿಹಿಡಿಯುತ್ತಾರೆ. ಹಾಗೆಯೇ ಹಿಂಸೆ ಮಾಡುವವರು ಬಹುವಾಗಿ ತಾವು ಅಸಹಾಯಕರು, ಸಂದರ್ಭದಲ್ಲಿ ಅನಿವಾರ್ಯವಾಗಿ ಬಳಸುತ್ತಿದ್ದೇವೆ ವಿನಃ ಅದು ಸರಿಯಲ್ಲ ಎಂದಾಗ, ಅವರೂ ಅಹಿಂಸೆಯ ಅಗತ್ಯವನ್ನು ಎತ್ತಿಹಿಡಿಯುತ್ತಾರೆ. ಹೀಗಾಗಿ ಅಹಿಂಸಾಮಾರ್ಗದಲ್ಲಿ ಮಾತ್ರ, ಸತ್ಯದ ನೆಲೆಯಲ್ಲಿ ಮಾತ್ರ, ಶಾಶ್ವತ ಲಕ್ಷಣದ ಬದಲಾವಣೆಯು ಸಾಧ್ಯವೆಂಬ ಸತ್ಯಾಗ್ರಹದ ಕರೆ ಎಲ್ಲಾ ಕಾಲದಲ್ಲೂ ಪ್ರಸ್ತುತವಾಗುತ್ತದೆ.

**ಕೆ.ಎಸ್. ಪಾರ್ಥಸಾರಥಿ**
ನಂ. ಸಿ-೦೦೧, 'ನಾಗಾರ್ಜುನ ಎನ್‌ಕ್ಲೇವ್', ೭೬/ಎ, ೧೪ನೇ ಕ್ರಾಸ್, ೧ನೇ ಹಂತ
ಜೆ. ಪಿ. ನಗರ, ಬೆಂಗಳೂರು - ೫೬೦ ೦೭೮

''ಸೋಜಿಗವೆಂದರೆ, ಅಜೇಯವೆನಿಸುವಷ್ಟು ಮಾರಕಾಸ್ತ್ರಗಳನ್ನು ಅಲ್ಲದೆ ಅದಕ್ಕೆ ಸಾಟಿ ಎನಿಸುವ ರಕ್ಷಣಾ ವ್ಯವಸ್ಥೆಯನ್ನೂ ಹೊಂದಿದ್ದರೂ ಮಾನವ ಸಮುದಾಯವು ಸದಾಕಾಲ ಶಾಂತಿಗಾಗಿ ಹಂಬಲಿಸುತ್ತಲೇ ಇರುತ್ತದೆ.''

-ಮಹಾತ್ಮ ಗಾಂಧಿ

‘ಒಂದು, ಎರಡು.... ಮೂರು....’ ಛೆ, ಲೆಕ್ಕ ತಪ್ಪಿತು. ಕೈಯಲ್ಲಿದ್ದ ಅಕ್ಕಿ ನುಚ್ಚುಗಳನ್ನು ಮತ್ತೆ ಚೆಲ್ಲಿ ಪುನಃ ಎಣಿಕೆ ಪ್ರಾರಂಭ. ‘ಒಂದು... ಎರಡು... ಮೂರು... ನಾಲ್ಕು...’ ತವರಿನಲ್ಲಿ ಅಮ್ಮ ಹಾಡುತ್ತಿದ್ದ ಜೋಗುಳದ ಹಾಡು ‘ಗುಬ್ಬಿ ಗುಬ್ಬಿ ಚೆಂದಾ ಗುಬ್ಬಿಯ ಮರಿ ಚೆಂದಾ...’ ಕಿವಿಯಲ್ಲಿ ಧ್ವನಿಸಿದಂತೆ ಕೇಳಿ ತಲೆ ಎತ್ತುವಷ್ಟರಲ್ಲಿ... ಮತ್ತೆ ಎಣಿಕೆ ತಪ್ಪಿತು. ಇಲ್ಲಿದ್ದ ಗುಬ್ಬಿ ಗುಬ್ಬಿ ಅಲ್ಲಿ ಹೋಗಿ... ಅಲ್ಲಿದ್ದ ಗುಬ್ಬಿ ಮತ್ತೆಲ್ಲೋ ಹಾರಿ ಹೋಗಿ... ಹೇಗೆ ಎಣಿಸುವುದು... ಇಷ್ಟೊಂದು ಗುಬ್ಬಿಗಳನ್ನು... ಹಾಂ. ಇದೇ ಗುಬ್ಬಿಗಳ ಕಥೆಯನ್ನೇ... ನಾನೀಗ ಹೇಳಹೊರಟಿರುವುದು....



ನಾವು ವರ್ಗವಾಗಿ ಬಂದು ಹೊಸ ಊರಲ್ಲಿ ನೆಲೆಸಲು ಬಾಡಿಗೆ ಮನೆಗೆ ಬಂದಾಗ ತಂತಿಬೇಲಿಯ ಅಂಚಿನಲ್ಲಿ ಪುಟ್ಟ ರೆಂಬೆಯಾಗಿ ಅರ್ಧ ಒಣಗಿ ನಿಂತ ಜಾಜಿಯ ಗಿಡ ಮೊದಲು ನನ್ನ ಗಮನ ಸೆಳೆದಿತ್ತು. ಜಾಜಿ ಹಣಬಿನ ಮಳ್ಳಿಯಾದ ನನಗೆ ನಿಧಿ ಸಿಕ್ಕಂತಾಗಿತ್ತು. ನಂತರದ ದಿನಗಳಲ್ಲಿ ನಮ್ಮ ಆರೈಕೆಯಲ್ಲಿ ಸುತ್ತಾ ಟೊಂಗೆ ಟೊಂಗೆ ಚಿಗುರಿಸಿ ದೊಡ್ಡ ಹಂದರವೇ ಆಗಿ ಬೆಳೆದು ನಿಂತಿತ್ತು. ನಕ್ಷತ್ರ ಚೆಲ್ಲಿಟ್ಟಂತೆ ಘಮ್ ಎಂದು ಪರಿಮಳ ಬೀರುವ ಬಿಳಿ ಬಿಳಿ ಪುಟ್ಟಪುಟ್ಟ ಹೂಗಳು ಹಸಿರು ಹಾಸಿನ ಮೇಲೆ ಅರಳಿ ನಗುತ್ತಿದ್ದವು. ಜಾಜಿಗಿಡದ ಹಂದರದ ಕೊರಳೊಳಗಿಂದ ಗುಬ್ಬಿಗಳ ಚಿಲಿಪಿಲಿ ಗಾನ ಕೇಳುತ್ತಿರುತಿತ್ತು. ಮುಂಜಾವಿನಲ್ಲಿ ಅವುಗಳಿಗೆ ಅಕ್ಕಿನುಚ್ಚು ಚೆಲ್ಲುವುದೇ ಖುಷಿಯಾಗಿತ್ತು ಅಂದು ನಮಗೆ. ಪುಟು ಪುಟು ಎಂದು ನುಚ್ಚು ತಿನ್ನುತ್ತಾ... ಜೊತೆಗೆ ಅಂದೇ ಗೂಡಿನಿಂದ ಸಂಭ್ರಮದೊಂದಿಗೆ ಕರೆತಂದ ರೆಕ್ಕೆ ಬಲಿಯಾದ ಪುಟ್ಟ ಮರಿಗಳ ಬಾಯಿಗೆ ತುತ್ತ ನೀಡುವ ದೃಶ್ಯವೂ ಅಷ್ಟೇ ಚೈತನ್ಯದಾಯಕವಾಗಿತ್ತು. ಆ ದಿನಗಳಲ್ಲಿ ಎಂತಹ ಸೊಬಗಿನ... ಮನಮುದಗೊಳಿಸುವ ನೋಟವದು...!

ಜಾಜಿಗಿಡದ ಕುರಿತು ನಮಗಿಲ್ಲದ ಆತಂಕ ನಮ್ಮ ಮನೆಗೆ ಬರುವ ಅತಿಥಿಗಳಿಗೆ... ರಸ್ತೆಯ ಮೇಲೆ ಹೋಗುವ ಜನರಿಗೇ ಇತ್ತು. ‘ಜಾಜಿಹಣಬಿನ ಪರಿಮಳಕ್ಕೆ ಹಾವುಗಳು ಬಾರದೇ ಇರದು’ ಎಂದು ಕೆಲವರು ಹೆದರಿಸಿದರೆ, ಇನ್ನೂ ಕೆಲವರು ‘ಕಾಡಿನ ವೀರಪ್ಪನ್ ಕೆಲವು ದಿನಗಳ ಮಟ್ಟಿಗಾದರೂ ನಿಮ್ಮ ಹಿತ್ತಲಿಗೆ ಬಂದು

# ಮತ್ತೆ ಬಂದೀತೆ... ಆ ದಿನಗಳು ?

ಆಶ್ರಯ ಪಡೆದರೆ ಆಶ್ಚರ್ಯವಿಲ್ಲ’ವೆಂದು ವ್ಯಂಗ್ಯವಾಣಿ ನುಡಿಯುತ್ತಿದ್ದರು. ಆದರೆ ಜನರ ಈ ಎಲ್ಲ ಮಾತುಗಳನ್ನು ಕಿವಿಗೆ ಹಾಕಿಕೊಳ್ಳದ ನಮ್ಮ ಜಾಜಿ ಗಿಡ ತನ್ನ ಬಾಹುಗಳನ್ನು ದಶದಿಕ್ಕುಗಳಿಗೂ ಚಾಚಿ ತನ್ನಲ್ಲಿ ಆಶ್ರಯಿಸಿದ ಗುಬ್ಬಿಗಳಿಗೆ ಆಶ್ರಯ ನೀಡುತ್ತ ಹಾಯಾಗಿತ್ತು. ನಾವು ಗೇಟು ತೆರೆದು ಒಳಬರುವಾಗ ಹೊರ ಹೋಗುವಾಗ ಮುತ್ತನ್ನಿಡಲು ಬಂದಂತೆ ಟೊಂಗೆಗಳು ಮುಖಕ್ಕೆ ಎದುರು ಬಂದರೂ ಪರಿಸರ, ಪ್ರಕೃತಿ ಪ್ರಿಯರಾದ ನಮ್ಮ ಒಬ್ಬರ ಕೈಯೂ ಅಪ್ಪಿತಪ್ಪಿ ಸಹ ಟೊಂಗೆ ಮುರಿಯಲು ಹೋಗುತ್ತಿರಲಿಲ್ಲ.

ಆದರೆ ಒಂದು ದಿನ ಹಾವು ಕಂಡ ಮನುಷ್ಯ ನಮ್ಮ ಜಾಜಿಗಿಡಕ್ಕೆ ಗತಿ ಕಾಣಿಸಲು, ಕತ್ತಿ ಹಿಡಿದೇ ಬಂದಿದ್ದ. “ನಿಮ್ಮ ಜಾಜಿಗಿಡದ ಹೂವಿನ ಪರಿಮಳಕ್ಕೆ ಹಾವು ಬಂದಿದ್ದು” ಎಂದು ಎಗರಾಡಿ... ನಮ್ಮ ಅಪ್ಪಣೆ ಇಲ್ಲದೇ ಗಿಡ ಕಡಿಯಲು ಮುಂದಾದ. ಪರವೂರು... ಅಪರಿಚಿತ ಜನ... ಆತನ ರೋಷ ನೋಡಿ... ಮೌನ ವಾಣಿ ನಾವು ಒಳ ಬಂದು ಬಾಗಿಲು ಹಾಕಿಕೊಂಡೆವು. ಎರಡು ಮೂರು ಟೊಂಗೆ ಕಡಿದಿರಬಹುದು... ಕ್ಷಣದಲ್ಲಿಯೇ ಹೌಹಾರಿದ ಆತ “ನಿಮಗೆ ಜಾಜಿಗಿಡ ಬೇಕಿದ್ದರೆ ಬೇಕನ್ನಿ... ಅದಬಿಟ್ಟು ಇಲ್ಲಿ ಜೇನುಗೂಡು ಕಟ್ಟಿದ ವಿಷಯ ಹೇಳದೇ ಇರುವುದಾ...?” ಎನ್ನುತ್ತಾ ಗುಂಯ್ ಗುಡುತ್ತ ಹಾರಾಡುತ್ತಿದ್ದ ಜೇನುಹುಳುವಿನಿಂದ ತಪ್ಪಿಸಿಕೊಂಡು ಹೋಗಿಬಿಟ್ಟ. ನಮಗೆ ಆಶ್ಚರ್ಯ! ಅಲ್ಲಿ ಜೇನುಗೂಡು ಕಟ್ಟಿದ್ದು ಯಾವಾಗ....? ತಮ್ಮ ನೆಲೆಯನ್ನು ಉಳಿಸಿಕೊಳ್ಳಲೋಸುಗ ಗುಬ್ಬಿಗಳೇ ಜೇನುಹುಳಗಳನ್ನು ಕರೆತಂದವೇ... ಇದು ನಮ್ಮ ಕಿರಿಯ ಮಗನ ತರ್ಕ. ನಮಗೂ ಹೌದೆನಿಸಿತು. ಒಟ್ಟಾರೆ ನಮ್ಮ ಜಾಜಿಗಿಡಕ್ಕೆ ಬಂದ ಕಂಟಕ ಅಂದಿಗೆ ದೂರವಾಯಿತು. ಆದರೆ ಈ ಹರ್ಷ ಬಹಳ ದಿನ ಉಳಿಯಲಿಲ್ಲ. ಹತ್ತಾರು ಟೊಂಗೆ ಟೊಂಗೆಗೆ ಟಿಸಿಲೊಡೆದು ಚಿಗುರಿ ದೊಡ್ಡ ಹಂದರವೇ ಆದ... ಆತ್ಮೀಯತೆಯಿಂದ ನಮ್ಮೊಡನೆ ಮೌನ ಸಂಭಾಷಣೆ ನಡೆಸಿ ನಮ್ಮ ಜೊತೆಗಿದ್ದ ಜಾಜಿಗಿಡ ಕೊನೆಗೂ ತನ್ನೆಲ್ಲ ಬಾಹುಗಳನ್ನು ಮಾನವನಿಗೆ ಬಲಿಕೊಟ್ಟು ಕೇವಲ ಆರೇಳು ಇಂಚು ಉದ್ದದ ತನ್ನ ಬುಡವನ್ನಷ್ಟೇ ಉಳಿಸಿಕೊಳ್ಳುವಂತಾಯಿತು. ಅಷ್ಟನ್ನು ಉಳಿಸಿಕೊಳ್ಳಲೂ ಸಹ ನಾವು ಹೋರಾಡಬೇಕಾಯಿತು. ಮನೆಗೆ ಕಂಪೌಂಡ್ ಹಾಕಿಸುವ ಅವಾಂತರದಲ್ಲಿ... ಜಾಜಿಗಿಡದ ನಳನಳಿಸುವ ಹಸಿರು.... ಪರಿಮಳ ಸೂಸುವ ಹೂವುಗಳನ್ನೂ ಮರೆಯಬೇಕಾಯಿತು. ಪಾಪ, ಅಲ್ಲಿತನಕ

**ಜಯಾ ಯಾಜಿ**

ಜಾಜಿಗಿಡದ ಹಂದರದಲ್ಲಿ ಹಾಯಾಗಿ ವಾಸವಾಗಿದ್ದು, ನಮಗೆಲ್ಲ ಬೆಳಗಿನ ಸುಪ್ರಭಾತ ಕೋರಿ, ಆ ಮೂಲಕ ತನ್ನ ವಾಸಕ್ಕೆ ‘ಬಾಡಿಗೆ’ ನೀಡುತ್ತಿದ್ದ, ತನ್ನ ಪರಿವಾರವನ್ನು ಬೆಳೆಸಿಕೊಳ್ಳುತ್ತ ಇದ್ದ ಗುಬ್ಬಿಗಳು, ಇದ್ದಕ್ಕಿದ್ದಂತೆ ತಮ್ಮ ನೆಲೆ ನಾಶಮಾಡಿದ ಬಗ್ಗೆ ಅದೆಷ್ಟು ಶಾಪ ಹಾಕಿದವೋ....

ಒಂದೆರಡು ದಿನ ಹಗಲೆಲ್ಲ ಅವುಗಳದೇ ಚೀರಾಟ!! ಗಲಾಟೆಯೋ ಗಲಾಟೆ!! ಅವುಗಳಂತೆ ಬಾಡಿಗೆಗೆ ಇದ್ದ ನಾವು ಮೂಕ ಪ್ರೇಕ್ಷಕರಾಗಿದ್ದೆವು. ಆಶ್ರಯ ತಪ್ಪಿದ ಗುಬ್ಬಿಗಳೆಲ್ಲ ಎಲ್ಲೆಲ್ಲೋ ಚದುರಿ ತಮ್ಮ ಹೊಸ ನೆಲೆಯನ್ನು ಹುಡುಕಲು ಹೊರಟವೇನೋ... ನಾವು ಮಾತ್ರ ಗುಬ್ಬಿಗಳ ಸುಪ್ರಭಾತವಿಲ್ಲದ ಬೆಳಗನ್ನು ಕಾಣಬೇಕಾಯಿತು.

ಕಂಪೌಂಡ್ ಕಟ್ಟಿ ಮುಗಿದ ನಂತರ ನನಗೆ ಮತ್ತೆ ಗುಬ್ಬಿಗಳ ಸಹವಾಸ ಬೇಕೆನ್ನಿಸಿತು.... ಅಕ್ಕಿಯ ನುಚ್ಚಿನೊಂದಿಗೆ ಹೊರಬಂದು ಕಂಪೌಂಡ ಗೋಡೆಯ ಮೇಲೆ ನುಚ್ಚು ಚೆಲ್ಲಿ ಮೊದಲಿನಂತೆ ‘ಚಿವ್ ಚಿವ್’ ಎಂದು ಧ್ವನಿ ಹೊರಡಿಸಿ ಗುಬ್ಬಿಯ ಕರೆದೆ. ಮೊದಲೆಲ್ಲ ಈ ಧ್ವನಿಗೆ ಎಲ್ಲೆಲ್ಲಿಂದಲೋ ಬುರ್ರನೇ ಹಾರಿ ಬರುವ ಮುದ್ದು ಗುಬ್ಬಚ್ಚಿಗಳ ಒಂದರ ಸುಳಿವೂ ಈಗ ಇರಲಿಲ್ಲ.... ಎಲ್ಲಿ ಹೋದವು ಎಲ್ಲ...?

ನಾಲ್ಕಾರು ದಿನ ಹೀಗೇ ಅಕ್ಕಿನುಚ್ಚು ಹಾಕುವುದು... ಮತ್ತೂ ಆಸೆಯ ಕಂಗಳಲ್ಲಿ ಸುತ್ತ ನೋಡುವುದು... ನಡೆದಿತ್ತು ನನ್ನ ಕೆಲಸ. ಹಸಿರಿಲ್ಲದ ಬೋಳು ಬೋಳು ಹಿತ್ತಲಿಗೆ ಯಾಕಂತ ಬಂದಾವು ಆ ಗುಬ್ಬಿಗಳು....? ಹಾಕಿದ ನುಚ್ಚುಗಳನ್ನು ಕಾಗೆಗಳು ತಿಂದು ಹೋಗುತ್ತಿದ್ದವು.

ನಾಲ್ಕೆಂಟು ದಿನದ ನಂತರ ಒಂದಿನ ಏನಾಶ್ಚರ್ಯ!! ಅಕ್ಕಿನುಚ್ಚು ಚೆಲ್ಲಿ ಚಿವ್‌ಚಿವ್ ಎನ್ನುವಷ್ಟರಲ್ಲಿ ಎರಡೇ ಎರಡು ಗುಬ್ಬಿಗಳು - ಒಂದು ಹೆಣ್ಣು, ಇನ್ನೊಂದು ಗಂಡು, ನಮ್ಮ ಹೊಸ ಕಂಪೌಂಡಿನ ಮೇಲೆ ಕುಳಿತು ‘ಚಿಂವ್ ಚಿಂವ್’ ಎಂದವು. ತಮ್ಮ ನೆಲೆಯನ್ನೂ ನೆಲಸಮ ಮಾಡಿದ ಬಗ್ಗೆ ಬಯ್ಯುತ್ತಿರಬಹುದೆ... ಅನಿಸಿತು. ಅಥವಾ ಕ್ಷೇಮ ಸಮಾಚಾರ... ತಾವು ಈಗಿರುವ ನೆಲೆಯ ಕುರಿತೋ ಅಥವಾ ಈ ಭೂಮಿಯಲ್ಲಿ ನಿಮ್ಮದೇ ಪಾರಪತ್ಯವಾಯಿತು... ಎನ್ನುತ್ತಲೋ ಹೇಳುತ್ತಿರಬಹುದು ಅನ್ನಿಸಿತು.

ನನಗೋ ಅವುಗಳ ಸ್ನೇಹ ಬಿಡಲಾಗದು. ಗುಬ್ಬಿಗಳು ಹೇಳಿದೆಲ್ಲವನ್ನೂ ಅನ್ನಿಸಿಕೊಂಡು ಮನದಲ್ಲಿಯೇ “ಅಸಹಾಯಕಳಾದ ನನ್ನನ್ನು ಕ್ಷಮಿಸಿ...

ನಾವೂ ನಿಮ್ಮಂತೆ ಇಂದು ಇಲ್ಲಿ... ನಾಳೆ ಎಲ್ಲೋ ಮತ್ತೆ ನಾವು ಸ್ನೇಹಿತರಾಗೋಣ'' ಎಂದು ಹೇಳಿದೆ. ಮೊದಲಿನಿಂದಲೂ ನನ್ನ ಅನುಭವವೆಂದರೆ - ಅಕ್ಕಪಕ್ಕದ ಜನರಲ್ಲಿ ಸಂಭಾಷಿಸುವುದಕ್ಕಿಂತ ಇಂತಹ ಪಶು-ಪಕ್ಷಿಗಳ ಹತ್ತಿರವೇ ಸುಲಭದಲ್ಲಿ ಮಾತನಾಡಬಹುದು ಎನ್ನುವುದು.

ನನ್ನ ಮನದ ಕೋರಿಕೆ ಅರ್ಥವಾದ ಗುಬ್ಬಿಗಳೆರಡೂ ನಿಧಾನವಾಗೆ ಬಳಿ ಬಂದು ಅಕ್ಕಿ ನುಚ್ಚುಗಳನ್ನು ತಿನ್ನಲಾರಂಭಿಸಿದವು! ಅಬ್ಬ!! ಗೆದ್ದೆ ನಾನು.... ಈ ದೃಶ್ಯವನ್ನು ಮನೆ ಜನರಿಗೆಲ್ಲ ಕರೆದು ತೋರಿಸಿದೆ. ಮರುದಿನ... ಆ ಮರುದಿನ... ನಿತ್ಯವೂ ಸರಿಯಾದ ವೇಳೆಗೆ ಆ ಗುಬ್ಬಿಗಳೆರಡೂ ಬಂದು ನನ್ನ ಆತಿಥ್ಯವನ್ನು ಸ್ವೀಕರಿಸಿ ಸುಪ್ರಭಾತ ಕೋರಿ ಹೋಗುತ್ತಿದ್ದವು. ಹಿಂದಿನ ದಿನಗಳಂತೆ... ಇಪ್ಪತ್ತು ಮೂವತ್ತು ಗುಬ್ಬಿಗಳ ಕಿಚಿಕಿಚಿಯ ಸಂಭ್ರಮವಿಲ್ಲ... ಪುಟ್ಟ ಮರಿಗಳಿಗೆ ತುತ್ತು ನೀಡುವ ಮಧುರ ದೃಶ್ಯವೂ ಇಲ್ಲ... ಆದರೂ, ಏನೂ ಇಲ್ಲದಿದ್ದಾಗ... ಈ ಎರಡು ಗುಬ್ಬಿಗಳಾದರೂ ಬಂದವಲ್ಲಾ... ಅದೇ ಸಮಾಧಾನವಾಗೆ ತೃಪ್ತಿಪಟ್ಟುಕೊಂಡೆ.

ಹಾಕಿದ ಅಕ್ಕಿಕಾಳನ್ನು ತಿಂದು ಅವೆರಡೂ ಗುಬ್ಬಿಗಳು ಹಾರಿ ಹೋಗುತ್ತಿದ್ದವು. ಪ್ರಾಯಶಃ ಈ ಎರಡು ಗುಬ್ಬಿ ಜೋಡಿಗಳು ನಾವಿಲ್ಲಿ ಬಂದಾಗ.... ಪ್ರಾರಂಭದಲ್ಲಿ ಇದ್ದ ಜೋಡಿಗಳೇ ಇರಬಹುದು ಅನಿಸಿತು. ಹೊಸ ಗುಬ್ಬಿಗಳು ನಮ್ಮನ್ನು ಮರೆತರೂ ಈ ಹಳೆಯ ಜೋಡಿ ನಮ್ಮ ಮರೆತಿರಲಿಲ್ಲ.

ಒಂದೆರಡು ಮಳೆ ಬಿದ್ದೊಡನೆ ಆರಿಂಚು ಉದ್ದದ ಜಾಜಿಗಿಡದ ಕಾಂಡ ಪುಟ್ಟ ಪುಟ್ಟ ಹಸಿರಿನ ಚಿಗುರು ಬಿಟ್ಟಾಗ ನನಗಾದ ಆನಂದ, ಆಶ್ಚರ್ಯ ಅಷ್ಟಿಷ್ಟಲ್ಲ! ಪ್ರಕೃತಿಯಿಂದ ಎಂತಹ ಪವಾಡ! ಎನಿಸಿತು. ಜಾಜಿ ಗಿಡದ ಆಸೆಯನ್ನು ಪೂರ್ತಿಬಿಟ್ಟ ನಾವು ಇದೀಗ ಪುನಃ ಗಿಡ ಚಿಗಿತು ಹಂದರವಾಗುತ್ತಿರುವುದನ್ನು ಕಾಣುತ್ತಿದ್ದೆವು. ...ಇನ್ನು ಗುಬ್ಬಿಗಳೂ ಬಂದು ಇಲ್ಲಿ ವಾಸವಾಗಬಹುದು.... ಹಸಿರು ಹಾಸಿನ ಮೇಲೆ ಹೂಗಳ ನಕ್ಷತ್ರ ಮಿನುಗಬಹುದು ...ಅದರ ಪರಿಮಳ ಸುತ್ತಲೂ ಪಸರಿಸಬಹುದು ಮತ್ತು ಬೆಳ್ಳಂಬೆಳಗೆ ಗುಬ್ಬಿಗಳ ಚಿಲಿಪಿಲಿ ನಾದವನ್ನು ಕೇಳಬಹುದು ಎಂದು ನನ್ನ ಮನ ಕಲ್ಪಿಸತೊಡಗಿತು.

ತಿಂಗಳುಗಳು ಉರುಳಿ ಜಾಜಿಗಿಡದ ಹಸಿರು ಪುಟ್ಟ ಹಂದರವಾದರೂ ಇತರ ಗುಬ್ಬಿಗಳ ಸುಳಿವಿಲ್ಲ. ನಿತ್ಯ ಬೆಳಿಗ್ಗೆ ತಪ್ಪದೆ ಬಂದು ಅಕ್ಕಿಕಾಳನ್ನು ತಿಂದು ಹೋಗುತ್ತಿದ್ದ ಆ ಎರಡು ಗುಬ್ಬಿಗಳ ಬಿಟ್ಟು ಬೇರೆಯದು ಬರಲೇ ಇಲ್ಲ.

ಹೀಗಿರುವಾಗ ಒಂದು ದಿನ ನಾನು ಊರಿಗೆ ಹೋಗಬೇಕಾಗಿ ಬಂತು. ಹದಿನೈದು ದಿನಗಳನ್ನು ಊರಲ್ಲೇ ಕಳೆಯಬೇಕಾಯಿತು. ಮರಳಿ ಬಂದಾಗ ಗೇಟು ದಾಟುವಾಗಲೆ ಪುಟ್ಟ ಪೊದೆಯಾಗಿ ಬೆಳೆದು ನಿಂತ ಜಾಜಿಗಿಡವ ಕಂಡು ಹಿಂದಿನ ವೈಭವದ ದಿನಗಳು ಮರುಕಳಿಸುವ ದಿನ ದೂರವಿಲ್ಲವೆಂದುಕೊಂಡೆ. ಮರು ದಿನ ಬೆಳಿಗ್ಗೆ ಅಕ್ಕಿನುಚ್ಚಿನೊಂದಿಗೆ ಹೊರಬಂದು 'ಚಿಂವ್ ಚಿಂವ್' ಎಂದು ಕಂಪೌಂಡಿನ ಮೇಲೆ ಅಕ್ಕಿ ಚೆಲ್ಲಿಟ್ಟರೆ... ನನ್ನ ಆ ಪುಟ್ಟಗುಬ್ಬಿಗಳೆರಡೂ ಬರಲೇ ಇಲ್ಲ. ಹದಿನೈದು ದಿನ ಊರಲ್ಲಿಲ್ಲದ್ದರಿಂದ ಅಕ್ಕಿ ಹಾಕದಿರುವುದರಿಂದ ಗುಬ್ಬಿಗಳು ಬರುವುದನ್ನೇ ನಿಲ್ಲಿಸಿದವೇನೋ ಎಂದು ಕೊಂಡರೂ... ಎರಡು ದಿನಕ್ಕೇ ಅವು ಮತ್ತೆ ಬರುತ್ತವೆ ಎಂದುಕೊಂಡರೂ... ಎರಡು ದಿನಕ್ಕೇ ಅವು ಮತ್ತೆ ಬರುತ್ತವೆ ಎಂದೇ ನನ್ನ ಮನಸ್ಸು ನುಡಿಯಿತು.

ಆದರೆ ನನ್ನ ಅನಿಸಿಕೆ ತಪ್ಪಾಯಿತು. ಹತ್ತು ಹನ್ನೆರಡು ದಿನ ಕಳೆದರೂ ನನ್ನ ಆ ಮುದ್ದು ಗುಬ್ಬಿಗಳ ಸುಳಿವೇ ಇಲ್ಲ. ಈ ನಡುವೆ ನಮ್ಮ ಪುಟ್ಟ ಹಿತ್ತಲಿನಲ್ಲಿ ಎಂದಿನಿಂದಲೂ ವಾಸವಾಗಿದ್ದ ಕಿರುಹಕ್ಕಿ, ದರ್ಜಿಹಕ್ಕಿ, ಪಿಳ್ಳಾರಿ ಪಕ್ಷಿಗಳೂ ಒಂದೂ ಕಾಣಿಸದಿರುವುದು ಗಮನಕ್ಕೆ ಬಂತು. ಮನೆಯ ಹಿಂದುಗಡೆ ಹಿತ್ತಲಿನಲ್ಲಿದ್ದ ದಾಳಿಂಬೆ ಗಿಡಕ್ಕೆ, ದಾಸವಾಳದ ಗಿಡಕ್ಕೆ, ಬಾಳೆಗಿಡದ ಒಣ ಎಲೆಯ ಸಂದಿಯಲ್ಲಿ... ಗೊಂಡೆಗೊರಟೆ ಗಿಡದ ನಡುವಲ್ಲಿ ಪುಟ್ಟ ಪುಟ್ಟ ಗೂಡುಕಟ್ಟಿ ತಮ್ಮ ಸಂತಾನಭಿವೃದ್ಧಿ ಮಾಡಿಕೊಳ್ಳುತ್ತಿದ್ದ ಹಿತ್ತಲ ಹಣಬಿನ ಮಕರಂದ ಹೀರುತ್ತ... ಹಣ್ಣಾಗಿ ಬಿರಿದ ದಾಳಿಂಬೆ ಹಣ್ಣಿನ ಬೀಜದ ರಸ ಕುಡಿಯುತ್ತ ಹಾಯಾಗಿ ಹಾಡುತ್ತ ಹಾರುತ್ತಿದ್ದ ಆ ಹಕ್ಕಿಗಳೂ ಈಗ ಮಂತ್ರ ಮಾಡಿದಂತೆ ಮಾಯವಾದದ್ದು ಹೇಗೆ..?

ಅಂದು ಚಿಂತಿಸುತ್ತ ಹಿತ್ತಲಿನಲ್ಲಿ ಓಡಾಡಿಕೊಂಡಾಗ.... ಮನೆಯ ಹಿಂದಿನ ಕಿಡರೆ ಸಜ್ಜಿಯ ಮೇಲೆ ಮಲಗಿದ್ದ ದಪ್ಪ ಕಪ್ಪು ಬೆಕ್ಕೊಂದು ದಢ್ ಎಂದು ಜಿಗಿದು ಓಡಿತು. ಅರೇ! ಇದೆಲ್ಲಿಯ ಬೆಕ್ಕು? ಯಾವತ್ತೂ ಕಂಡಿರಲಿಲ್ಲ.... ಎಲ್ಲಿಂದ ಬಂತು... ಯಾರೋ ಇಲ್ಲಿ ತಂದು ಬಿಟ್ಟಿರಬಹುದಾ... ಅಥವಾ ಅಲೆಮಾರಿಯಾಗಿ ಅಲೆಯುತ್ತ ಬಂದ ಕಳ್ಳ ಬೆಕ್ಕಾಗಿರಬಹುದಾ... ಎಂದು. ಅತ್ತ ಬಗ್ಗಿ ನೋಡಿದೆ. ಅಲ್ಲಿ ಕಂಡಿದ್ದೇನು....! ಹಕ್ಕಿಯ ನಾಲ್ಕಾರು ಪುಕ್ಕಗಳು... ಗುಬ್ಬಿಯ ಗರಿಗಳು... ಎಲ್ಲ ಅರ್ಥವಾಯ್ತು! ನಮ್ಮ ಗುಬ್ಬಿಗಳೂ, ಪಿಳ್ಳಾರಿ ಹಕ್ಕಿಗಳೂ ಎಲ್ಲಿ ಹೋದವೆಂದು... ಹೊರ ಬಾಗಿಲಿಗೆ ಬಂದು ನಿಂತೆ. ಜಾಜಿಗಿಡ ಪೊದೆಯಾಗಿ ಬೆಳೆದು ತನ್ನಲ್ಲಿ ಆಶ್ರಯಿಸಲು ಬರುವ ಗುಬ್ಬಿಗಳಿಗಾಗಿ ಕಾಯುತ್ತಿರುವಂತೆ ಕಂಡಿತು. ಮತ್ತೆ ಬಂದೀತೆ... ಆ ದಿನಗಳು.

ಜಾಜಿಗಿಡದ ನಡುವಿನಿಂದ ಚಿಲಿಪಿಲಿಗುಡುವ ಗುಬ್ಬಿಗಳು, ಮತ್ತೆ ಎಂದಾದರೂ ಎಲ್ಲಿಂದಾದರೂ ವಲಸೆ ಬಂದಾವೇನೋ ತಿಳಿಯದು. ಆದರೆ, ನಾನಂತೂ ನನ್ನ ಪಾಲಿನ ಆ ಕೊನೆಯ ಎರಡು ಗುಬ್ಬಿಗಳನ್ನು ಕಳಕೊಂಡುಬಿಟ್ಟೆ ಅನಿಸುತ್ತದೆ.

**ಜಯಾ ಯಾಜಿ**
೧೨೦. ಎಂ.ಐ.ಜಿ -೧, ಕೆ.ಎಚ್.ಬಿ.ಕಾಲನಿ, ಜ್ಯೋತಿನಗರ ಅಂಚೆ, ಚಿಕ್ಕಮಗಳೂರು - ೫೭೭೧೦೨

## ಸಾದರ ಸ್ವೀಕಾರ

**ಸಿಂಚನ** (ಕವನ ಸಂಕಲನ) *ಪ್ರೊ|| ಹೇಮಂತ ಕೆ.*
**ಪುಟ : ೭೮** **ಬೆಲೆ : ರೂ. ೬೦**

**ಅನಾಮಿಕನ ಅನಾವರಣ** (ಲೇಖನಗಳ ಸಂಗ್ರಹ)
*ಶ್ರೀನಿವಾಸ ಸಿರನೂರುಕರ್*
**ಪುಟ : ೧೧೪** **ಬೆಲೆ : ರೂ. ೮೦**

**ಬಾನಂಗಳದಿಂದ** (ಚಿಂತನೆಗಳ ಸಂಗ್ರಹ)
*ಡಾ|| ಸ್ವಾಮಿರಾವ್ ಕುಲಕರ್ಣಿ*
**ಪುಟ : ೮೮** **ಬೆಲೆ : ರೂ. ೭೦**

ಮೇಲಿನ ಪುಸ್ತಕಗಳ ಪ್ರಕಾಶಕರು
**ಶಿರಪುರ ಪ್ರಕಾಶನ,** ೧೦-೯೩೪/೪೨, ಮಹಾಲಕ್ಷ್ಮಿನಗರ, ಬ್ರಹ್ಮಪುರ, ಗುಲಬರ್ಗಾ-೫೮೫ ೧೦೩

**ಸಲಸಲದ ಪಾಡು** (ಕವನ ಸಂಕಲನ)
*ವಿಜಯಕಾಂತ ಪಾಟೀಲ*
**ಪುಟ : ೬೪** **ಬೆಲೆ : ರೂ. ೨೨**
**ಸುಮುಖ ಪ್ರಕಾಶನ,** ನಂ. ೩, ಹೋಟೆಲ್ ಶಾಲಿನಿ ಹಿಂಭಾಗ, ಕಾಮಾಕ್ಷಿಪಾಳ್ಯ, ಬೆಂಗಳೂರು - ೭೯

**ಹೊನ್ನೂರು ಜಾಜಿ** (ಅಭಿನಂದನ ಗ್ರಂಥ)
*ಸಂ. ಅರವಿಂದ ಕರ್ಕಿಕೋಡಿ*
**ಪುಟ : ೧೬೮** **ಬೆಲೆ : ರೂ. ೭೫**
**ಹಣತೆ,** ಸಾಹಿತ್ಯಿಕ ಸಾಂಸ್ಕೃತಿಕ ಜಗಲಿ, ಹೊನ್ನಾವರ, ಉತ್ತರ ಕನ್ನಡ

**ಹೆಣ್ಣು ಹೆಣ್ಣನ್ನು ಅರಿಯುವ ಬಗೆ** (ಅಂಕಣ ಬರಹ)
*ಡಾ|| ನಾ. ಮೊಗಸಾಲೆ*
**ಪುಟ : ೧೪೪** **ಬೆಲೆ : ರೂ. ೪೫**
**ಪುಸ್ತಕ ನಿಧಿ,** ಗಾವಳಿ ಶಾಲೆ ಹತ್ತಿರ, ಅಂಚೆ ಹಳ್ಳಾಡಿ-ಹರ್ಕಾಡಿ, ಕುಂದಾಪುರ ತಾಲ್ಲೂಕು - ೫೭೬ ೨೧೦

**ಬೆಟ್ಟದ ಗಂಗೆ** (ಕವನ ಸಂಕಲನ) ಉ. ಶಾ. ಬಸವಣ್ಣಪ್ಪ
**ಪುಟ : ೬೪** **ಬೆಲೆ : ರೂ. ೩೦**
**ಅಭಿವ್ಯಕ್ತಿ ಪ್ರಕಾಶನ,** ಹಗರಿಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ

**ಅಭಿವ್ಯಕ್ತಿ** (ಹನಿಗವನಗಳ ಸಂಗ್ರಹ)
*ಸಂ : ಶಿವಕುಮಾರ್ ಕೆ. ಕಿನ್ನಿ*
**ಪುಟ : ೧೦೦** **ಬೆಲೆ : ರೂ. ೪೦**
**ಆಜಾದ್ ಯುವ ವಿಚಾರ ವೇದಿಕೆ,** ಪತ್ರಮಿತ್ರ ಪ್ರಕಾಶನ ಗುಲ್ಬರ್ಗಾ

**ಸೂರ್ಯ ಮತ್ತು ನಾನು** (ಕವನ ಸಂಕಲನ)
*ಈ. ಚಂದ್ರ ತಾಳಿಕಟ್ಟೆ*
**ಪುಟ : ೭೨** **ಬೆಲೆ : ರೂ. ೫೦**
**ಕಾಂತಿಶ್ರೀ ಪ್ರಕಾಶನ,** ನಂ. ೫೬, 'ನೆಲೆ' ೨ನೇ ಮುಖ್ಯರಸ್ತೆ, ವಿನಾಯಕ ಲೇಔಟ್ ವಿಜಯನಗರ, ಬೆಂಗಳೂರು - ೪೦

**ಪ್ರಕ್ಷುಬ್ಧ ಅಲೆಗಳು** (ಕಥಾ ಸಂಕಲನ)
*ಡಾ|| ಪ್ರಹ್ಲಾದ ಅಗಸನಕಟ್ಟೆ*
**ಪುಟ : ೧೩೬** **ಬೆಲೆ : ರೂ. ೬೦**

**ಚಾಕ್ರಿ ನಿಂಬಜ್ಜ** (ಕಥಾ ಸಂಕಲನ) ಬ್ರಹ್ಮದೇವ್ ಹದಳಗಿ
**ಪುಟ : ೬೪** **ಬೆಲೆ : ರೂ. ೩೦**

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ ಗಾಂಧಿ ನಗರ, ಬಳ್ಳಾರಿ - ೫೮೩ ೧೦೩

**ಅನಾತ್ಮ** (ಕವನ ಸಂಕಲನ) ಕೆ. ಬಿ. ಸಿದ್ದಯ್ಯ
**ಪುಟ : ೫೬** **ಬೆಲೆ : ರೂ. ೭೦**
**ನೆಲಸಿರಿ ಪ್ರಕಾಶನ,** ಬಸವಸದನ, ಸೆಂಟ್ ಮೇರಿಸ್ ಶಾಲೆ ಮುಂಭಾಗ, ಗಾಂಧಿನಗರ, ತುಮಕೂರು-೫೭೨ ೧೦೧

**ವಿಜ್ಞಾನ ಬರಹಗಳು** ಶಿವಕುಮಾರ್ ಕೆ. ಕಿನ್ನಿ
**ಪುಟ : ೬೦** **ಬೆಲೆ : ರೂ. ೩೦**
**ಅಂಬಿಕಾ ಪ್ರಕಾಶನ,** ೧೧-೧೦೪/೧೩೬, ಡಿ. ಜಿಲಾನಾಬಾದ್, ಎಂ.ಎಸ್.ಕೆ. ಮಿಲ್ ರಸ್ತೆ , ಕಲಬುರ್ಗಿ- ೩

**ಸುಖದುಃಖ** (ಸೂಕ್ತಿಗಳು) ಸಂ. ಟಿ.ವಿ. ವೆಂಕಟರಮಣಯ್ಯ
**ಪುಟ : ೮೮** **ಬೆಲೆ : ರೂ. ೩೦**
**ಟಿ. ವಿ. ವೆಂಕಟರಮಣಯ್ಯ,** ಇಡಬ್ಲ್ಯುಎಸ್-೨೧೮ ಕೆ.ಎಚ್.ಬಿ. ಕಾಲೋನಿ, ೫ನೇ ಕ್ರಾಸ್ ಬಸವೇಶ್ವರನಗರ, ಬೆಂಗಳೂರು - ೭೯

*‘ಚಾಸೋ’ ಎಂಬ ಹೆಸರಿನಿಂದ ಪ್ರಸಿದ್ಧರಾದವರು ಚಾಗಂಟಿ ಸೋಮಯಾಜುಲು (೧೯೧೫-೧೯೯೪). ‘ಅರಸಂ’ (ಅಭ್ಯುದಯ ರಚಯಿತುಲ ಸಂಘಂ) ಅನ್ನು ಮುನ್ನಡೆಸಿದವರಲ್ಲಿ ಒಬ್ಬರಾದ ಚಾಸೋ ರಚಿಸಿದ ಕಥೆಗಳು ಅರವತ್ತು. ಇವು ‘ಚಾಸೋ ಕಥಲು’ ಎಂಬ ಹೆಸರಿನಲ್ಲಿ ಸಂಕಲನಗೊಂಡಿವೆ.*

*‘ಯಾಕಪ್ಪ ...’ ಚಾಸೋ ಅವರ ‘ಎಂದುಕು ಪಾರೇಸ್ತಾನು ನಾನಾ ?’ (೧೯೪೫) ಎಂಬ ಕಥೆಯ ಅನುವಾದ. ಇದರ ವಸ್ತು ದೊಡ್ಡದಲ್ಲ, ಆದರೆ ಗಹನವಾದುದು. ಎಳೆವಯಸ್ಸಿನ ಬಾಲಕನ ವಿದ್ಯಾಕಾಂಕ್ಷೆಯೆ ಕಥಾವಸ್ತು. ಹೆಸರು ಕೃಷ್ಣ ಇವನೇ ನಾಯಕ. ಶಾಲೆಗೆ ಹೋಗಲು ಇವನು ಮಾಡುವ ಹಟ-ಹೋರಾಟ ದೊಡ್ಡದು.*

---

ತಂಗಿಯನ್ನು ತೊಡೆಯ ಮೇಲೆ ಕೂರಿಸಿಕೊಂಡು ಮಾತನಾಡುತ್ತ ಅಡುಗೆ ಮನೆಯಲ್ಲಿ ಕೂತಿದ್ದ ಕೃಷ್ಣ. ಅವನ ತಂದೆ ಕರೆದು ಚುಟ್ಟ ತಾರೆಂದು ದುಡ್ಡು ಕೊಟ್ಟ.

ಕೃಷ್ಣ ಬೀದಿಗೆ ಮುಖ ಹಾಕದೆ ಗಂಡ ಸತ್ತ ವಿಧವೆಯಂತೆ ಮನೆಯಲ್ಲೆ ಕುಳಿತಿರುತ್ತಿದ್ದ. ತಂದೆ ಚುಟ್ಟ ತರುವಂತೆ ಪುಸಲಾಯಿಸಿದ. ಹೈಸ್ಕೂಲು ದಾಟಿ ಚುಟ್ಟದ ಅಂಗಡಿಗೆ ಹೋಗಬೇಕಿತ್ತು. ಅಲ್ಲಿ ಮೇಷ್ಟ್ರು, ಸಹಪಾಠಿಗಳು ಇರುತ್ತಾರೆ. ಕೃಷ್ಣನಿಗೆ ರೋಡಿಗೆ ಕಾಲಿಡಲೇ ಅವಮಾನ. ಸ್ಕೂಲಿನ ಮುಂದಿನಿಂದ ಹೋಗುವುದು ಹೇಗೆಂದು ಅಳುಕುತ್ತಲೆ ಹೊರಟ.

ಬೆಳಗಿನ ಎಂಟು ಗಂಟೆ ಆಗುತ್ತಿತ್ತು, ಶಾಲೆ ಇಡುವ ಹೊತ್ತು, ಬೀದಿಯ ಕೊನೆಗೆ ಶಾಲೆಯ ಗದ್ದಲ ಸಮುದ್ರದ ಮೊರೆತದಂತೆ ಕೇಳಿಸುತ್ತಿತ್ತು. ಶಾಲೆಯ ಮುಂದಿನಿಂದಲೆ ಹೋಗಿ ಬರದೆ ಇರಲಾಗದು.

ಶಾಲೆ ಕಾಣುತ್ತಲೆ ಕೃಷ್ಣನಲ್ಲಿ ಚಿಂತೆಯುಂಟಾಯಿತು. ಹೈಸ್ಕೂಲು ಮಕ್ಕಳ ಗದ್ದಲದಲ್ಲಿ ಕಲರವಿಸುತ್ತಿತ್ತು. ಪಡಸಾಲೆ, ಕೋಣೆಗಳು, ಅಜೂಬಾಜಿನ ರಸ್ತೆಗಳು ವಿದ್ಯಾರ್ಥಿ, ವಿದ್ಯಾರ್ಥಿನಿಯರಿಂದ ತುಂಬಿ ನೋಡಲು ಮುದ ತರುತ್ತಿತ್ತು. ಕೃಷ್ಣನು ರಸ್ತೆಯಂಚಿನಲ್ಲಿ ತಲೆ ತಗ್ಗಿಸಿಕೊಂಡು ಓಡತೊಡಗಿದ.

‘ಕೃಷ್ಣಾ’ ಎಂಬ ಕೂಗು ಪಡಸಾಲೆಯಿಂದ ಕೇಳಿಬಂದಿತು. ಕೃಷ್ಣಾ ಹಿಂತಿರುಗಿ ನೋಡದೆ ತಪ್ಪಿಸಿಕೊಂಡ. ನರಸಿಂಹಂ ಓಡಿ ಬಂದು ಹೆಗಲಿನ ಮೇಲೆ ಕೈ ಹಾಕಿ ‘ಏನೋ, ನೀನು ಸ್ಕೂಲಿಗೆ ಬರುತ್ತಿಲ್ಲ?’ ಕೇಳಿದ.

‘ಸೋಮವಾರ ಸೇರ್‍ತೀನಿ’ ಎಂದು ಕೃಷ್ಣ ಹೇಳಿದ.

‘ಪುಸ್ತಕಗಳನ್ನು ತಕ್ಕೊಂಡೆಯಾ ?’

‘ಇನ್ನೂ ಇಲ್ಲ’

‘ಬೇಗ ಕೊಂಡ್ಕೊ. ಮುಗಿದು ಹೋಗುತ್ತೆ. ನೋಟು ಪುಸ್ತಕಗಳನ್ನು ಅಂಗಡೀಲಿ ತಕ್ಕೋಬೇಡ. ಸ್ಟೋರ್‍ಸ್‌ನಲ್ಲಿ ಅಗ್ಗವಾಗಿ ಸಿಗುತ್ತೆ. ಬೆಲೆಗಳೆಲ್ಲ ಸಿಕ್ಕಾಪಟ್ಟೆ ಜಾಸ್ತಿ ಆಗೋಗಿದೆ.’

ನರಸಿಂಹಂ ಡಬ್ಬಲ್ ಕಪ್ಸ್‌ನ ಅಂಗಿ, ಹನಾವ ಪ್ಯಾಂಟು, ಚಪ್ಪಲಿ ಹಾಕಿಕೊಂಡು ನೀಟಾಗಿದ್ದ. ಕೃಷ್ಣನಿಗಿದ್ದ ಎಲ್ಲ ಬಟ್ಟೆಗಳು ಎರಡು ನಿಕ್ಕರ್, ಎರಡು ಅಂಗಿಗಳು. ಇದ್ದಾವೆಂದರೆ ಇದ್ದಾವೆ. ಒಂದು ನಿಕ್ಕರಿಗೆ ಪೋಸ್ಟಾಫೀಸಿದೆ. ಒಂದು ಅಂಗಿಯ ತೋಳು ಹರಿದು ಜೋತಾಡುತ್ತಿದ್ದರೆ ಅಮ್ಮ ಎತ್ತಿ ಹೊಲಿಗೆ ಹಾಕಿದ್ದಾಳೆ. ತೋಳು ಬುಡ್ಡೆಯಂತಾಗಿತ್ತು. ಒಗೆಯಲೊಂದು ಜೊತೆ. ಪ್ಯಾಂಟು ಹೊಲೆಸೆಂದು ಕೃಷ್ಣ ಎಂದೂ ಅಳಲಿಲ್ಲ. ಪ್ಯಾಂಟಿಗೆ ಹೆಚ್ಚು ಬಟ್ಟೆ ಬೇಕಾಗುತ್ತದೆ. ಬಟ್ಟೆ ಜಾಸ್ತಿಯಾದರೆ ದುಡ್ಡು ಹೆಚ್ಚಿಗೆ ಆಗುವುದೆಂದು ಅವನಿಗೆ ಗೊತ್ತು. ಎರಡು ಜೊತೆ ಹೊಲಿಸೆಂದು ಬೇಡುತ್ತಿದ್ದ. ಕೈಕಾಲು ಕಟ್ಟುತ್ತಿದ್ದ. ಅತ್ತ. ಪ್ರಯೋಜನವಿಲ್ಲವಾಗಿತ್ತು.

ಕೃಷ್ಣನಿಗೆ ನರಸಿಂಹನ ಕಂಕುಳಲ್ಲಿ ಹೊಸ ಪುಸ್ತಕ ಕಂಡಿತು.

‘ಅದು ಯಾವ ಪುಸ್ತಕ ?’ ಎಂದು ಕೇಳಿದ.

‘ಇಂಗ್ಲಿಷ್ ಪುಸ್ತಕ. ನಾನು ನಿನ್ನೇನೇ ಎಲ್ಲ ಪುಸ್ತಕಗಳನ್ನು ತಕ್ಕೊಂಡು ಬಿಟ್ಟೆ. ಭೂಗೋಳದ ಪುಸ್ತಕವನ್ನಷ್ಟೆ ತಕ್ಕೊಳ್ಳಲಿಲ್ಲ. ಭೂಗೋಳದ ಪುಸ್ತಕವಿನ್ನೂ ಸ್ಟೋರ್‍ಸಿಗೆ

# ಯಾಕಪ್ಪ...



ಮೂಲ : ಚಾಗಂಟಿ ಸೋಮಯಾಜುಲು

ಅನುವಾದ : ಸ. ರಘುನಾಥ

ಬಂದಿಲ್ಲ, ಪುಸ್ತಕಾನ ನೋಡು' ಎಂದು ಕೊಟ್ಟ.

ಕೃಷ್ಣ ಪುಟಗಳನ್ನು ತಿರುವಿದ. ಹೊಸ ಪುಸ್ತಕದಿಂದ ಒಂದು ರೀತಿಯ ಪರಿಮಳ ಹೊರಬಂದಿತು. ಕೃಷ್ಣ ಪುಸ್ತಕದಲ್ಲಿ ಮುಖವಿಟ್ಟು ವಾಸನೆ ನೋಡಿದ.

'ಹೊಸ ಪುಸ್ತಕದ ವಾಸನೆ ಚೆನ್ನಾಗಿರುತ್ತಲ್ವಾ ?' ಅಂದ ನರಸಿಂಹಂ.

'ಚೆನ್ನಾಗಿರುತ್ತೆ, ನಂಗೆಷ್ಟೋ ಇಷ್ಟ' ಅಂದ ಕೃಷ್ಣ

'ನಿಂಗೆ ಇಂಗ್ಲಿಷಲ್ಲಿ ಫಸ್ಟು ಬರ್‍ಲಿಲ್ಲ ಅಲ್ವಾ ?'

'ನಾಲ್ಕು ಮಾರ್ಕ್ಸಲ್ಲಿ ಹೋಯ್ತು.'

'ಯಾರಿಗೆ ಬಂತೊ ?'

'ಶಕುಂತಲ ಹೊಡಕೊಂಡ್ಲು.'

'ನಿಜಾನಾ! ನಾನು ನಂಬ್ಲಿಲ್ಲ, ಅವಳಿಗೆಷ್ಟು ಬಂದಿದೆ ?'

'ನಂಗೆ ಅರವತ್ನಾಲ್ಕು, ಅವಳಿಗೆ ಅರವತ್ತೆಂಟು.'

'ಹುಡುಗಿ ಅಂತ ಮೇಷ್ಟ್ರು ಹಾಕಿರ್‍ತಾರೆ.'

'ನಿನ್ನ ತಲೆ. ಅವಳು ಬುದ್ಧಿವಂತೆ.'

'ಹುಡುಗೀರು ಚಕಚಕಾಂತ ಓದಿಬಿಡ್ತಿದ್ದಾರೆ.'

ಮಾರ್ಕುಗಳ ಮಾತು ಬರುತ್ತಿದ್ದಂತೆ ಕೃಷ್ಣ ಹೆಮ್ಮೆ ಪಡುವ ಹುಡುಗನಾಗಿಬಿಟ್ಟ. ಬುದ್ಧಿವಂತನಾದದ್ದರಿಂದಲೆ ನಾಲ್ಕು ಜನ ಗೌರವದಿಂದ ಕಾಣುತ್ತಾರೆ. ಇಲ್ಲವೆಂದರೆ ಅವನ ಮಾಸಲು ಬಟ್ಟೆಗಳನ್ನು ನೋಡಿ ಎಲ್ಲ ದೂರ ಇರುತ್ತಿದ್ದರು. ಅವನಿಗೆ ಶಾಲೆಯ ಹತ್ತಿರ ನಿಲ್ಲುವುದು, ಶಾಲೆಗೆ ಹೊರಟ ನರಸಿಂಹನನ್ನು ನೋಡುವುದು ತುಂಬ ಹಿಂಸೆಯಾಗುತ್ತಿತ್ತು. ಏಕೆಂದರೆ ಕೃಷ್ಣನಿಗೆ ಶಾಲೆಗೆ ಹೋಗಿ ಕಲಿಯುವ ಅವಕಾಶವಿರಲಿಲ್ಲ. ಕೃಷ್ಣನನ್ನು ಈ ವರ್ಷ ಶಾಲೆಗೆ ಕಳುಹಿಸುವುದಿಲ್ಲವೆಂದು ಅವನ ತಂದೆ ಖಚಿತವಾಗಿ ಹೇಳಿಬಿಟ್ಟಿದ್ದ.

'ಎಲ್ಲಿಯಾದರು ಸ್ಕೂಲು ಬಿಡಿಸುತ್ತಾರ ? ಸಾಲಾನೊ ಸೋಲಾನೊ ಮಾಡಿ ಓದಿಸದೆ ಹೋದರೆ ಹುಡುಗ ಯಾವ ಕೆಲಸಕ್ಕೆ ಬಂದಾನು ? ಓದೋ ವಯಸ್ಸಿನಲ್ಲಿ ಸ್ಕೂಲು ಬಿಡಿಸಿ, ಮನೇಲೆ ಕೂರಿಸಿದರೆ ಮುಂದೆ ಕತ್ತೆ ಕಾಯೋಕೂ ತರವಿಲ್ಲದೋನು ಆಗಿಬಿಡ್ತಾನೆ. ಏನಾದರೂ ಮಾಡಿ ಶಾಲೆಗೆ ಹಾಕಿ' ಎಂದು ಅವನ ತಾಯಿ ನೂರು ಸಲ ಹೇಳಿದ್ದಳು.

'ಸ್ಕೂಲಿಗೆ ಸೇರಿಸಿದಷ್ಟಕ್ಕೆ ಆಗೋಯ್ತ? ಅವನು ಓದೋದು ಫೋರ್ತ್ ಫಾರಂ. ಫೀಜು ಜಾಸ್ತಿ. ತಿಂಗಳು ತಿಂಗಳು ಎಷ್ಟು ಕಟ್ಟಬೇಕೊ ಗೊತ್ತ? ತೂಗಿಸ್ತೀನ ? ಸೇರಿಸೋಕೆ, ಪುಸ್ತಕಗಳಿಗೇ ಆಗುತ್ತೆ ಐವತ್ತು ರೂಪಾಯಿ. ಹಾಳೆಗಳಿಗೆ ರೂಪಾಯಿ ಅರ್ಧ ಆಣೆ, ಪೆನ್ಸಿಲ್ಗೆ ಆರಾಣೆ ! ಎಲ್ಲಿಂದ ತರೋದು ? ಅವನ ಹಣೇಲಿ ಬರ್‍ದಿಲ್ವೆ. ಅವನ ಪ್ರಾರಬ್ಧ, ನಮ್ಮ ಪ್ರಾರಬ್ಧ! ವಾರ ವಾರ ಎಲ್ಲಿಲ್ಲದ ಕಾಸು ಅಕ್ಕಿಗೆ ಸುರಿಯೋದೆ ಆಗಿದೆ. ತಲೆ ಪ್ರಾಣ ಕಾಲಿಗೆ ಬರುತ್ತೆ. ಏನು ಮಾತೆ ?' ಎಂದು ಅವನ ತಂದೆ ಅಲವತ್ತುಕೊಂಡ.

ತಾಯಿಯ ಮಾತೆ ಗೆಲ್ಲುತ್ತೊ, ತಂದೆಯ ಮಾತೆ ಗೆಲ್ಲುತ್ತೊ ಇನ್ನೂ ಗೊತ್ತಾಗಿಲ್ಲ. ಕೃಷ್ಣನಿಗೆ ಮಾತ್ರ ಸಂದಿಗ್ಧತೆ ಇಲ್ಲ. ಅವನು ತಂದೆ ತಾಯಿಯನ್ನು ಚೆನ್ನಾಗಿ ಅರ್ಥಮಾಡಿಕೊಂಡಿದ್ದ. ತಾಯಿ ಪ್ರತಿ ವಿಷಯದಲ್ಲಿ ಬಡಬಡಿಸುವುದಷ್ಟೆ. ಆದರೆ ತಂದೆ ಹೇಳಿದಂತೆಯೆ ನಡೆಯುತ್ತದೆ. ಆದುದರಿಂದ ಓದಿಗೆ ಮಂಗಳ ಹಾಡುವುದೆ ಖಚಿತವೆಂದು ತೀರ್ಮಾನಿಸಿಕೊಂಡು ಅವಮಾನದಲ್ಲಿ ಕುಗ್ಗಿಹೋಗುತ್ತಿದ್ದ.

ಹೊಸ ಇಂಗ್ಲಿಷ್ ಪುಸ್ತಕದ ಪುಟಗಳನ್ನು ತಿರುವಿ ಹಾಕಿದಂತೆಲ್ಲ ಕೃಷ್ಣನ ಎದೆಯಲ್ಲಿ ಗೊಂದಲವುಂಟಾಗು ತ್ತಿತ್ತು. ಶಾಲೆಗೆ ಹೋಗುತ್ತಿದ್ದ ಹುಡುಗರಲ್ಲಿ ಈರ್ಷೆ, ತನಗೆ ಓದಿಲ್ಲದೆ ಹೋಯಿತಲ್ಲ ಎಂಬ ದುಃಖ ಎರಡೂ ಎರಡು ಹೆಡೆಯ ಹಾವಾಗಿ ಅವನ ತಲೆ ತಿನ್ನುತ್ತಿತ್ತು.

'ಕೃಷ್ಣಾ ಬೇಗ ಸೇರೊ. ಸೆಕ್ಷನ್ನುಗಳನ್ನು ಮಾಡಿ ಬಿಟ್ಟರು. ನಾನು 'ಜೆ' ಸೆಕ್ಷನ್ನಿನಲ್ಲಿದ್ದೇನೆ. ನಮ್ಮ ಬ್ಯಾಚಿ ನೋರೆಲ್ಲ ಜೆ ಸೆಕ್ಷನ್ನಿಗೇ ಬಿದ್ದಿದ್ದಾರೆ' ಅಂದ ನರಸಿಂಹಂ.

'ಅಯ್ಯಬ್ಬೋ! 'ಜೆ' ಸೆಕ್ಷನ್ನಿನವರೆಗೆ ಹುಡುಗರಿ ದ್ದಾರಾ ?' ಎಂದು ಆಶ್ಚರ್ಯಪಟ್ಟ, ಕೃಷ್ಣ.

'ಜೆ'ಗೇ ಮುಗಿಯಲಿಲ್ಲವೊ. 'ಕೆ' ಸೆಕ್ಷನ್ ಕೂಡ ಇದೆ.'

'ಎ, ಬಿ, ಸಿ, ಡಿ, ಎಂದು ಎಣಿಸಿ, 'ಹನ್ನೊಂದು ಸೆಕ್ಷನ್ನಾ!' ಅಂದ ಕೃಷ್ಣ. ಫೊರ್ತ್‌ಫಾರಂ ಒಂದರಲ್ಲೆ ಸುಮಾರು ಐನೂರು ಮಂದಿ ವಿದ್ಯಾರ್ಥಿಗಳಿದ್ದರು. ಕೃಷ್ಣ ಅಲ್ಲಿ ನಿಲ್ಲಲಾರದೆ ಪುಸ್ತಕವನ್ನು ಹಿಂದಿರುಗಿಸಿ 'ನಾನು ಚುಟ್ಟ ತರಬೇಕು. ಹೋಗ್ತೀನಿ' ಅಂದ.

'ಈ ಚಿತ್ರಾನ ನೋಡಿದೆಯೇನೊ ?' ಎಂದು ನರಸಿಂಹಂ ಪಾಠಗಳಿಗೆ ಮೊದಲಲ್ಲಿದ್ದ ಮೂರು ರಂಗಿನ ಚಿತ್ರವನ್ನು ತೆರೆದು ತೋರಿಸಿದ.

ರೈತರು ಜೋಳದ ಹೊಲ ಕೊಯ್ಯುತ್ತಿದ್ದರು. ಜೋಳದ ಗರಿಗಳನ್ನು ಕೂಡಿಸಿ ಕಟ್ಟಿಕೊಂಡಿದ್ದ ಹಕ್ಕಿ ಗೂಡು ಮೊಟ್ಟೆಗಳೊಂದಿಗೆ ಕೆಳಗುರುಳುತ್ತಿದೆ. ಹಕ್ಕಿ ಗಳೆರಡು ರೆಕ್ಕೆಬಿಚ್ಚಿ ಹೊಲದ ಮೇಲೆ ಹಾರಾಡುತ್ತಿವೆ. ಕೊಯಿಲು ಮಾಡುವವರು ತಲೆಯೆತ್ತಿ ಹಕ್ಕಿಗಳತ್ತ ನೋಡುತ್ತಿದ್ದಾರೆ. ಅದು ಮೂರು ಬಣ್ಣಗಳ ಚಿತ್ರ.

ಹೈಸ್ಕೂಲಿನ ಮೊದಲ ಬೆಲ್ಲು ಗಣಗುಟ್ಟುತ್ತ ದೂರದಲ್ಲಿದ್ದ ಹುಡುಗರನ್ನೆಲ್ಲ ಕರೆಯುತ್ತಿತ್ತು. ರೋಡು, ಪಡಸಾಲೆ, ಕೋಣೆಗಳು ವಿದ್ಯಾರ್ಥಿ, ವಿದ್ಯಾರ್ಥಿನಿ, ಉಪಾಧ್ಯಾಯರಿಂದ ಗಿಜಗುಟ್ಟತೊಡಗಿತು.

ಪುಸ್ತಕಗಳನ್ನು ಹಿಡಿದು ಸರಸ್ವತೀದೇವಿಯಂತೆ ಶಕುಂತಲ ಬಂದಳು. ಅವಳು ಚಿಕ್ಕ ಹುಡುಗಿ. ಹನ್ನೊಂದರವಳು. ಚೂಪು ಮೂಗು, ಚೂಪುಗಡ್ಡ, ಆ

## ಬರೆದ ಹನಿಗಳು

೧

ಮರ ಕಡಿದ
ಮಹಾಸಾಧನೆಗೆ
ದೇವರು ಕೊಟ್ಟ ವರ !

೨

ಮಳೆಯ ನೆನೆದರೂ
ನೆನೆಯದ ಚರಾಚರ !

೩

ಭೂಮಿ ನಿರೋಧ್ ಬಳಸುತ್ತದೆ
ಅದಕ್ಕೆ ಮೋಡ ಬಸಿರಾಗುವುದಿಲ್ಲ !

೪

ವಿಮಾನದ ಸದ್ದಿನಲ್ಲಿ
ದನಕರುಗಳ ಕೂಗು
ಮೋಡಕ್ಕೆ ತಾಕುವುದಿಲ್ಲ !

೫

ಬೆಂದ ಒಡಲ ರೈತ ಹೊರಗೆ
ಬಣ್ಣದ ಟಿ.ವಿ.ಯಲ್ಲಿ ಮಳೆ
ಸುರಿಯುತ್ತದೆ ಒಳಗೆ !

೬

ಹಸಿವ ತಾಳದೆ ರೈತರ ಸಾವು
ಅನಾರೋಗ್ಯ ನಿಮಿತ್ತ ಮಂತ್ರಿಗೆ ವಿದೇಶದಲ್ಲಿ ಚಿಕಿತ್ಸೆ !

೭

ಇನ್ನೇನು ಭೂಮಿ ಬಿಟ್ಟ
ದೊಡ್ಡ ದೊಡ್ಡ ಬಿರುಕಿನಲಿ
ಮುಳುಗಿ ಹೋಗಲಿರುವ ರೈತ !

**ಅರುಣ್ ಜೋಳದ ಕೂಡ್ಲಿಗಿ**
ಜಾನಪದ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ - ೫೮೩೨೭೬

ಎರಡಕ್ಕೂ ಹೊಂದಿಕೊಂಡ ಬಾಯಿ. ಮುದ್ದುಮುದ್ದಾಗಿ ಇರುವಳು. ಬುದ್ಧಿ, ತಿಳುವಳಿಕೆಯಲ್ಲಿ ಅವಳ ಕಣ್ಣುಗಳು ಹೊಳೆಯುತ್ತ ಚಂಚಲಗೊಳ್ಳುತ್ತವೆ.

'ಕೃಷ್ಣಾ ಇಂಗ್ಲಿಷ್‌ನಲ್ಲಿ ನಾನೇ ಫಸ್ಟು' ಎಂದು ಬರುತ್ತಲೆ ಕೆಣಕಿದಳು.

'ಇಂಗ್ಲಿಷ್ ಒಂದರಲ್ಲೆ ತಾನೆ. ನನಗೆ ಮೂರರಲ್ಲಿ ಫಸ್ಟ್ ಬಂದಿದೆ. ಗಣಿತದಲ್ಲಿ ನೂರಕ್ಕೆ ನೂರು' ಅಂದ ಕೃಷ್ಣ

'ಇಂಗ್ಲಿಷ್ ಇಂಪಾರ್ಟೆಂಟ್' ಅಂದಳು ಶಕುಂತಲ.

'ಗಣಿತ ಅದಕ್ಕಿಂತಲೂ. ಆ ಮಾತಿಗೆ ಬಂದರೆ ತೆಲುಗೆ ಮುಖ್ಯ. ತೆಲುಗಲ್ಲಿ ಫಸ್ಟ್ ಯಾರು ?'

'ಇಂಗ್ಲಿಷೇ ಮುಖ್ಯ. ಯಾರನ್ನ ಕೇಳ್ತೀಯಾ ಕೇಳು.'

'ತೆಲುಗೇ. ಬಿಯ್ಯೇ ಓದೋರ್ಗೂ ಇಂಗ್ಲಿಷ್ ಬಿಟ್ಟು ಗಣಿತ ಉಳಿದವನ್ನೆಲ್ಲ ತೆಲುಗಿನಲ್ಲೆ ಪಾಠ ಹೇಳ್ಬೇಕು ಅಂತ ಪೇಪರ್‌ಗಳಲ್ಲಿ ಬಂದಿದೆ ?'

'ನೀನು ಮಹಾ ಪೇಪರ್ ಓದಿದ್ದೀಯ ಬಿಡು.'

'ನಾನು ದಿನ ಆಂಧ್ರಪತ್ರಿಕೆ ಓದುತ್ತೀನಿ. ನಮ್ಮ ಪಕ್ಕದ ಮನೇಗೆ ಬರುತ್ತೆ.'

ಎರಡನೇ ಬೆಲ್ಲು ಥಣಗುಟ್ಟಿತು.

ನರಸಿಂಹನಿಗೆ ಶಂಕುತಲೆಯ ಮುಖ ನೋಡಲು ನಾಚಿಕೆಯುಂಟಾಯಿತು. ಅವನು ಓದು ಬುದ್ಧಿ ಇಲ್ಲದ ದದ್ದಮ. ಅವರೊಂದಿಗೆ ವಾದ ಮಾಡುವ ಶಕ್ತಿ ಇಲ್ಲದೆ ತಲೆ ತಗ್ಗಿಸಿಕೊಂಡು ಮೌನವ್ರತ ಹಿಡಿದಿದ್ದ. ತನ್ನ ಹವಾನ ಪ್ಯಾಂಟು ಮಿಣಗುಟ್ಟುತ್ತಿದ್ದರೂ ಕೃಷ್ಣನ ಮಾಸಿದ ನಿಕ್ಕರ್ ಕಾಣುತ್ತಿದ್ದರೂ ಅವನಲ್ಲಿ ಕೀಳರಿಮೆ ಕಾಣಿಸಿಕೊಂಡಿತ್ತು. ಎರಡನೇ ಬೆಲ್ಲು ಆಗುತ್ತಿದ್ದಂತೆ ತಣ್ಣಗೆ ಅಲ್ಲಿಂದ ಜಾರಿಕೊಂಡ.

'ಬೆಲ್ಲಾಯ್ತು, ಸ್ಕೂಲಿಗೆ ಬಾ' ಅಂದಳು ಶಕುಂತಲ.

'ನಾನು ಸೋಮವಾರದಿಂದ ಬರ್ತೀನಿ' ಅಂದ ಕೃಷ್ಣ.

'ಫೋರ್ತ್‌ಫಾರಂನಲ್ಲಿ ನಿನ್ನನ್ನ ನೋಡ್ಕೋತೀನಿ. ಒಂದರಲ್ಲೂ ಫಸ್ಟ್ ಬರೋಕೆ ಬಿಡೋಲ್ಲ'

'ಇನ್ನು ಎಲ್ಲದರಲ್ಲೂ ಫಸ್ಟ್ ನೀನೆ ಬಿಡು.'

'ಯಾಕೆ ?'

'ಏನಿಲ್ಲ.'

'ನೀನು ನಂ ಮನೇಗೆ ಬರೋದನ್ನೆ ಬಿಟ್ಟೆ ಯಾಕೆ ? ನಮ್ಮಮ್ಮ ಅಪ್ಪ ಕೃಷ್ಣ ಯಾಕೆ ಬರ್ತಿಲ್ಲ ಅಂತ ದಿನಾ ಕೇಳ್ತಾರ್‍ತೆ.'

'ಯಾಕೂ ಇಲ್ಲ'

'ನಾನು ಕ್ಲಾಸಿಗೆ ಹೋಗ್ಬೇಕಪ್ಪಾ' ಅಂದು ಓಟ ಕಿತ್ತಳು.

'ಶಕುಂತಲಾ' ಎಂದು ಕರೆದ.

'ಏನು ?' ಎಂದು ನಿಂತಳು.

ಯಾತಕ್ಕೆ ಕರೆದ ? ಅವಳಿಗೆ ನಿಜ ಹೇಳಿ ದುಃಖ ಉಪಶಮನ ಮಾಡಿಕೊಳ್ಳಲೆಂದೆ ? ಏತಕ್ಕೆ ಕರೆದನೊ ಅವನಿಗೇ ತಿಳಿಯದು.

'ಏನೂ ಇಲ್ಲ' ಅಂದ.

ಶಕುಂತಲ ಹೊರಟುಹೋದಳು. ಇಬ್ಬರೂ ಒಂದೇ ಊರಿನವರು. ಕ್ಲಾಸಿನಲ್ಲಿ ಎಲ್ಲರಿಗಿಂತ ಅವರಿಬ್ಬರೇ ಬುದ್ಧಿವಂತರು. ಒಬ್ಬರ ನೋಟ್ಸ್ ಒಬ್ಬರು ತೆಗೆದು ಕೊಂಡು ಸ್ನೇಹದಿಂದಿರುತ್ತಿದ್ದರು. ಸ್ಪರ್ಧೆಯಿಂದ ಓದುತ್ತಿದ್ದರು. ಶಕುಂತಲೆಯೊಂದಿಗೆ ಸ್ಪರ್ಧೆ ಕೃಷ್ಣನಿಗೆ ಉಪಯುಕ್ತವಾಗಿತ್ತು. ಕೃಷ್ಣನಿಗೆ ಶಕುಂತಲೆಯ ಕೈಬರಹ ನೆನಪಾಯಿತು. ಅವಳ ಬರವಣಿಗೆ ಚೆನ್ನಾಗಿರಲಿಲ್ಲ. ಸೊಟ್ಟಂಬಟ್ಟ ಬರೆಯುತ್ತಿದ್ದಳು. ತನ್ನದು ಮುತ್ತಿನ ಸರ.

ಶಕುಂತಲ ಶಾಲೆಗೆ ಓಡುತ್ತಿದ್ದರೆ ಕೃಷ್ಣ ಸ್ತಂಭೀಭೂತನಾಗಿ ನಿಂತು ನೋಡುತ್ತಿದ್ದ. ಕ್ರಮೇಣ ಹುಡುಗರ ಗದ್ದಲ ಅಡಗಿತು. ಪಡಸಾಲೆ ಖಾಲಿ ಆಯಿತು. ಉಪಾಧ್ಯಾಯರ ಮಾತುಗಳು ಕೇಳಿಸುತ್ತಿದ್ದವು. ಸಾವಿರಾರು ವಿದ್ಯಾರ್ಥಿಗಳು ಡೆಸ್ಕುಗಳ ಹಿಂದೆ ಕುಳಿತು ಪಾಠ ಕೇಳುತ್ತಿದ್ದರು. ಶಾಲೆಯ ಬಳಿಯಿಂದ ಕೃಷ್ಣ ಕಾಲು ಕೀಳದವನಾಗಿದ್ದ. ತನ್ನ ಓದು ನಿಂತುಹೋಯಿತಲ್ಲ ಎಂದು ದುಃಖಿಸುತ್ತ ಶಾಲೆಯ ಪಡಸಾಲೆಗೆ ಹೋದ.

'ನಾನು ಇಲ್ಲಿಂದ ಕದಲುವುದಿಲ್ಲ' ಅಂದುಕೊಂಡು ಕಂಬಕ್ಕೆ ಒರಗಿ ನಿಂತ.

'ನಾನು ಮನೆಗೆ ಹೋಗುವುದೆ ಇಲ್ಲ' ಎಂದು ನಿಶ್ಚಯಿಸಿಕೊಂಡ.

ನಾಲ್ಕನೇ ತರಗತಿಯಿಂದ ಶಾಲೆಯಲ್ಲಿ ಓದಿದ ಐದು ವರ್ಷಗಳ ಸಂಗತಿಗಳು ಒಂದೊಂದಾಗಿ ನೆನಪಿಗೆ ಬರತೊಡಗಿದವು.

ಐದನೇ ತರಗತಿಯಲ್ಲಿದ್ದಾಗ ಹುಡುಗನೊಬ್ಬ ಮೇಷ್ಟ್ರಿಗೆ ಕೃಷ್ಣನ ಮೇಲೆ ಚಾಡಿ ಹೇಳಿದ್ದ. ಮೇಷ್ಟ್ರು ನಂಬದೆ, ಸುಳ್ಳು ಹೇಳಿದನೆಂದು ಅವನಿಗೇ ನಾಲ್ಕು ಬಿಗಿದಿದ್ದರು.

ಮೂರನೇ ಫಾರಮ್ಮಿನಲ್ಲಿ ತೆಲುಗು ಮೇಷ್ಟ್ರು 'ಗಾಂಧಾರಪತಿ' ಅಂದರೆ ಅರ್ಥ ಹೇಳೆಂದರು. ಎಲ್ಲರೂ ನೆಲ ನೋಡಿ, ಮೇಲ್ಛಾವಣಿಯನ್ನು ನೋಡಿ, 'ಧೃತರಾಷ್ಟ್ರ' ಎಂದು ಹೇಳಿದರು. ತಾನೊಬ್ಬನೆ 'ಗಾಂಧಾರ ದೇಶದ ಅರಸು' ಎಂದು ಹೇಳಿದ್ದ.

ಎರಡನೇ ಫಾರಂ ಓದುತ್ತಿದ್ದಾಗ ದಸರೆಯ ನಂತರ ಹುಡುಗನೊಬ್ಬ ಶಾಲೆಗೆ ಬರುವುದನ್ನು ಬಿಟ್ಟಿದ್ದ. ಮೇಷ್ಟ್ರು ದಿನವೂ ಅವನ ಹೆಸರನ್ನು ಕೂಗಿ ಆಬ್ಸೆಂಟ್ ಹಾಕುತ್ತಿದ್ದರು. ಕಡೆಗೆ ಅವನು ಶಾಲೆ ಬಿಟ್ಟನೆಂದು ತಿಳಿಯಿತು. ಅಂದು ಅಟೆಂಡೆನ್ಸ್ ರಿಜಿಸ್ಟರಿನಲ್ಲಿ ಅವನ ಹೆಸರು ಹೊಡೆದು ಹಾಕಿ 'ಡಿಸ್ಕಂಟಿನ್ಯೂಡ್' ಎಂದು ಬರೆದು, ಕ್ಲಾಸಿನಲ್ಲಿ ಆ ಇಂಗ್ಲಿಷ್ ಶಬ್ದಕ್ಕೆ ಅರ್ಥ ಹೇಳಿದ್ದರು. ಅಂದಿನಿಂದ ಕೃಷ್ಣ 'ಡಿಸ್ಕಂಟಿನ್ಯೂ' ಎಂಬ ಶಬ್ದದ ಅರ್ಥವನ್ನು ಮರೆತದ್ದಿಲ್ಲ. ಆ ಪದ ನೆನಪಿಗೆ ಬರುತ್ತಲೆ ಅವನಲ್ಲಿ ದುಃಖ ಉಕ್ಕಿ ಹರಿಯಿತು.

'ನಾನು ಮನೆಗೇ ಹೋಗುವುದಿಲ್ಲ' ಎಂದು ಪುನಃ ನಿಶ್ಚಯಿಸಿಕೊಂಡ.

'ನಾನು ಊಟಕ್ಕೂ ಹೋಗುವುದಿಲ್ಲ' ಅಂದುಕೊಂಡ.

ಅವನ ಮುಖ ಗಾಳಿ ಹೊಡೆದ ಹೊಸ ಫುಟ್ ಬಾಲಿನಂತೆ ದುಃಖದಿಂದ ಉಬ್ಬಿಕೊಂಡಿತು. ಬತ್ತಿದ ಸುವರ್ಣಗೆಡ್ಡೆಯಂತಾಯಿತು. ಮೂಗು ನೀರು ತುಂಬಿ ಕೊಂಡು ಭಾರವಾಗಿ ನೆಗಡಿ ಹಿಡಿದಂತಾಯಿತು. ಮೂಗನ್ನು ಮೇಲಕ್ಕೆಳೆಯುತ್ತ ಉಕ್ಕಿಬರುತ್ತಿದ್ದ ದುಃಖಕ್ಕೆ ಅಣೆಕಟ್ಟೆ ಕಟ್ಟಿ ನುಂಗಿಕೊಳ್ಳುತ್ತ ಕಂಬಕ್ಕೊರಗಿ ನಿಂತಿದ್ದ.

ಮೊದಲನೆ ಪಿರಿಯಡ್ ಆಯಿತು. ಕೃಷ್ಣ ಕದಲಲಿಲ್ಲ. ಅವನ ತಂದೆ ಬಜಾರಿಗೆ ಹೊರಟ. ಪಡಸಾಲೆಯಲ್ಲಿ ಮಗನನ್ನು ನೋಡಿದ.

'ಲೇ ಕತ್ತೆ! ಚುಟ್ಟ ತಾರೊ ಅಂದ್ರೆ ಇಲ್ಲಿ ಬಿದ್ದಿರೋದೇಕೊ' ಅಂದ.

'ನೋಡು' ಅಂದ ಕೃಷ್ಣ

'ಏನೊ ನೋಡೋದು ?' ಅಂದ ತಂದೆ.

'ಪಾಪ. ಕಾಣಲ್ಲ.'

'ಏನೋ ನಿನ್ನ ಶ್ರಾದ್ಧ ?'

'ನನ್ನ ಶ್ರಾದ್ಧಾನೆ.'

'ಏನೋ !?'

'ಅವರೆಲ್ಲ ಸ್ಕೂಲಿಗೆ ಹೋದರು.'

ಆಗ ತಂದೆಗೆ ಮಗನ ಮುಖದಲ್ಲಿನ ದುಃಖದ ರೇಖೆಗಳು ಕಂಡವು.

'ಹುಚ್ಚಪ್ಪ, ಅದಾ' ಅಂದ. ಕೃಷ್ಣನ ದುಃಖದ ಅಣೆಕಟ್ಟೆಯೊಡೆಯಿತು. ಮುದುಡಿ ಬಿಕ್ಕಿಬಿಕ್ಕಿ ಅಳ ತೊಡಗಿದ. ಮಗನ ನೋವು ತಂದೆಗೆ ಅರ್ಥವಾಯಿತು. ಮಗನ ನೋವನ್ನು ತಂದೆ ಅನುಭವಿಸಿದ.

'ಶಾಲೆ ಬಿಡಿಸಿದೆ ಅಂತ ಅಳ್ತಿದ್ದೀಯ ? ಶಾಲೆಯ ಪಡಸಾಲೆ ಹಿಡಿದು ಸಂಕಟ ಪಡ್ತಿದ್ದೀಯ ಅಪ್ಪಾ ? ನಡಿ ಮನೆಗೆ' ಅಂದ.

'ನಾನು ಬರಲ್ಲ' ಎಂದು ನೆಲ ಬಿರಿಯುವಂತೆ ಅರಚಿದ.

'ಏನು ಮಾಡ್ತೀಯೊ ?'

'ಗೋಡೆಗೆ ತಲೆ ಚಚ್ಕೋತೀನಿ' ಎಂದು ಮತ್ತೂ ಗಟ್ಟಿಯಾಗಿ ಅರಚಿದ. ಆ ಕೆಲಸ ಮಾಡಿಬಿಡುವನೇನೊ ಎಂದು ತಂದೆ ಹೋಗಿ ಅಪ್ಪಿಕೊಂಡ.

'ನಡಿಯಪ್ಪಾ ಮನೆಗೆ' ಅಂದ.

'ಸ್ಕೂಲು ನಂದು' ಎಂದು ಗಟ್ಟಿಯಾಗಿ ಕೂಗಿದ.

'ನಿಂದೇ ತಂದೆ ಕಾಣೊ.'

'ಹಾಗಿದ್ದ ಮೇಲೆ ಸ್ಕೂಲಿಗೆ ಕರಕ್ಕೊಂಡು ಹೋಗು.'

'ತಲೆ ಅಡ ಇಟ್ಟಾದ್ರೂ ಸ್ಕೂಲಿಗೆ ಸೇರಿಸ್ತೀನಿ, ಮನೆಗೆ ನಡಿ.'

'ಈಗಲೇ ಸೇರಿಸು.'

'ದುಡ್ಡು ತಂದು ಸೇರಿಸ್ತೀನಿ.'

'ಮನೆಗೆ ಹೋದ್ಮೇಲೆ ಇಲ್ಲಾಂತೀಯ.'

'ಅನ್ನೊಲ್ಲ ಬಾ.'

'ಹಾಗಿದ್ಮೇಲೆ ಮೊದಲು ಪುಸ್ತಕ ಕೊಡಿಸು.'

'ಹುಚ್ಚಪ್ಪಾ ಅದಕ್ಕಾದ್ರೂ ದುಡ್ಡು ಬೇಡ್ವಾ ?'

'ಒಂದು ಪುಸ್ತಕನಾದ್ರೂ ತೆಗೆದುಕೊ.'

'ಯಾವ ಪುಸ್ತಕ ತಗೊ ಅಂತೀಯ ?'

'ಇಂಗ್ಲಿಷ್ ಪುಸ್ತಕ ತಗೊ.'

'ತಗೊಳ್ಳೋಣ ನಡಿ. ಅಳಬೇಡವೊ ನನ್ನಪ್ಪಾ, ನಾನು ಸತ್ತೆ, ಅಳಬೇಡ,' ಅಂದ ತಂದೆ. ತಂದೆಯ ಕೈಯನ್ನು ಕಂಕುಳಲ್ಲಿಟ್ಟುಕೊಂಡು ಅಳುತ್ತಲೆ ಎಳೆದು ಕೊಂಡು ಸ್ಕೂಲಿನ ಸ್ಟೋರಿನತ್ತ ನಡೆದ.

ತಂದೆ ದೀರ್ಘಾಲೋಚನೆಗೆ ಬಿದ್ದ. ಚುಟ್ಟ ಬಿಟ್ಟು ಬಿಡೋಣ ಅಂದುಕೊಂಡ. ಎಷ್ಟೇ ಬಿಡಬೇಕೆಂದು ಕೊಂಡರೂ ಬಿಡಲಾರದವನಾಗಿದ್ದ. ಚುಟ್ಟ ಬಿಟ್ಟರೆ ಕೃಷ್ಣನ ಫೀಸಿಗೆ ಆಗುತ್ತೆ. ಇನ್ನೊಂದು ದಾರಿ ಕಾಣಲಿಲ್ಲ.

'ಚುಟ್ಟಕ್ಕೆ ಕೊಟ್ಟಿದ್ನಲ್ಲ ಕಾಸು ? ಇದೆಯಾ, ಬಿಸಾಕಿಬಿಟ್ಟೆಯ ?' ಎಂದು ಮಗನನ್ನು ಕೇಳಿದ.

'ಬಿ... ಬಿ... ಬಿಸಾಕಿಲ್ಲ, ಜೇಬಲ್ಲಿದೆ... ಯಾಕಪ್ಪ ಬಿಸಾಕ್ತೀನಿ ?' ಅಂದ ಕೃಷ್ಣ.

ಅನುವಾದ : ಸ. ರಘುನಾಥ
ಶ್ರೀಲಕ್ಷ್ಮಿ ಪ್ರಾವಿಜನ್‌ಸ್ಟೋರ್ಸ್ ರಸ್ತೆ, ರಾಮಕೃಷ್ಣ ಬಡಾವಣೆ,
ಶ್ರೀನಿವಾಸಪುರ - ೫೬೩ ೧೩೫, ಕೋಲಾರ ಜಿಲ್ಲೆ

# ಮತ್ತೊಬ್ಬ ಗುರುವಿನ ನಿರ್ಗಮನ

## ಡಾ|| ರಹಮತ್ ತರೀಕೆರೆ

೧೯೮೧. ಮೈಸೂರಲ್ಲಿ ನಾವು ಎಂಎಗೆ ಸೇರಿದ್ದೆವು. ಇಂಗ್ಲಿಷ್ ಪ್ರಾಧ್ಯಾಪಕರಾಗಿ ದೇಶವಿಡೀ ಅಲೆದಾಡಿ ಪಾಠಮಾಡಿದ್ದ ಪುಣೇಕರರು, ಕಡೆಗೆ ಮಾನಸಗಂಗೋತ್ರಿಯ ಕನ್ನಡ ವಿಭಾಗಕ್ಕೆ ಬಂದಿದ್ದರು. ಅವರ ಮೊದಲನೇ ಕ್ಲಾಸು ಚೆನ್ನಾಗಿ ನೆನಪಿದೆ. ಪಾಶ್ಚಾತ್ಯ ವಿಮರ್ಶೆ ತೆಗೆದುಕೊಳ್ಳುತ್ತಿದ್ದ ಅವರು ಶೆಲ್ಲಿಯ 'ಡಿಫೆನ್ಸ್ ಆಫ್ ಪೊಯೆಟ್ರಿ' ಪ್ರಬಂಧವನ್ನು ಶುರುಮಾಡಿದರು. ರೊಮ್ಯಾಂಟಿಕ್ ಕವಿಗಳ ಜೀವನದೃಷ್ಟಿಯನ್ನು ಹೊಗಳುತ್ತ, ಅವರನ್ನು ಟೀಕಿಸುವ ಮಾಡರ್ನಿಸ್ಟರನ್ನು ವ್ಯಂಗ್ಯ ಕೋಪಗಳಿಂದ ತಿವಿಯುತ್ತ, ಪೀಠಿಕೆ ಹಾಕಿದರು. ಎದುರಾಳಿಗಳನ್ನು ಗಾಳಿಯಲ್ಲಿ ಆವಾಹಿಸಿಕೊಂಡು ಒಮ್ಮೊಮ್ಮೆ ಎರಡೂ ಕೈಗಳನ್ನು ಮೇಲಕ್ಕೆತ್ತಿ , ಗುದ್ದಲಿಯಿಂದ ನೆಲಕ್ಕೆ ಹೊಡೆಯುವಂತೆ ಭಾವಾವೇಶ ದಿಂದ ಇಡೀ ದೇಹವನ್ನು ಕುಲುಕಿಸಿ ದಣಿಸಿದರು. ತರಗತಿ ಅತ್ಯಂತ ನಾಟಕೀಯವಾಗಿತ್ತು. 'ಮುದ್ದು ಕೂಸಿನ ಹಾಗೆ ಮುಸುಮುಸು ಮಾಡುತ' ಪಾಠ ಹೇಳಿದರು. ಇಡಿಗಂಟೆ ನಾವು ಪಾಠ ಕೇಳಲಿಲ್ಲ. ಅವರ ನಾಟಕೀಯತೆಗೆ ಬೆರಗಾಗಿ, ಆಕಾರಕ್ಕೆ ಮರುಳಾಗಿ ನೋಡುತ್ತ ಇದ್ದೆವು. ಅವರೊಬ್ಬ ಸುಂದರಪುರುಷ. ಬಣ್ಣಹಚ್ಚಿದ(?) ಕಪ್ಪನೆಯ ಹುಬ್ಬು ತಾಂಬೂಲ ಹಾಕಿ ಕೆಂಪಾದ ತುಟಿಗಳು, ಹಾಲಿನಂತಹ ಬಣ್ಣ ಹೂವಿನಂತಹ ಕಣ್ಣುಗಳು. ವಯಸ್ಸು ೫೫ ಆಗಿತ್ತಾದರೂ ಸ್ಫುರದ್ರೂಪದ ಚಿಹ್ನೆಗಳು ಮಸುಕಿರಲಿಲ್ಲ. ಅವರು ಯೇಟ್ಸನ ಮೇಲೆ ಪ್ರಬಂಧ ಬರೆದು ಕೀರ್ತಿ ಪಡೆದವರು, ಇಂಗ್ಲಿಷಿನಲ್ಲಿ ಕವಿತೆ ಬರೆದವರು, ಬೇಂದ್ರೆಯವರ ನಿಕಟವರ್ತಿಗಳು- ಎಂಬೆಲ್ಲ ಕೀರ್ತಿ ಹರಡಿತ್ತು.

ತರಗತಿಗಳಲ್ಲಿ ಮೂರು ಸಾಹಿತ್ಯಕ ಮಾರ್ಗಗಳು ನಮ್ಮನ್ನು ಅಪ್ಪಳಿಸುತ್ತಿದ್ದವು. ಪುಣೇಕರರು ನವ್ಯದವರ ಮೇಲೆ ಸೇಡು ತೀರಿಸಿಕೊಳ್ಳಲೆಂದೆ ದೇವಲೋಕದಿಂದ ಅವತರಿಸಿದ ಸೈನಿಕನಂತೆ ಇದ್ದರು. ದೇವಯ್ಯ ಹರವೆಯವರು ದಲಿತ ಸಾಹಿತ್ಯದ ಬಗ್ಗೆ ಹೊಸಚಿಂತನೆಗಳನ್ನು ಮಂಡಿಸುತ್ತಿದ್ದರು. ಜಿ. ಎಚ್. ನಾಯಕ, ಚನ್ನಯ್ಯ ಅವರು ನವ್ಯದ ಪ್ರಸಿದ್ಧ ಲೇಖಕರು. ನಾವು ತಮ್ಮ ವೈಚಾರಿಕತೆ ಖಚಿತತೆಗಳಿಂದ ಜನಪ್ರಿಯರಾಗಿದ್ದ ನವ್ಯಪಂಥದವರಿಗೆ ತೆತ್ತುಕೊಂಡಿದ್ದೆವು. ವಿಚಾರವಾದದ ದೀಕ್ಷೆ ಪಡೆದು ಅದರಿಂದಲೇ ಜಗತ್ತನ್ನು ಅರಿಯಲು ಹಾತೊರೆಯುತ್ತಿದ್ದ ನಮಗೆ ಪುಣೇಕರರ ಚಿಂತನೆ ಸಾಂಪ್ರದಾಯಕ ಅನಿಸುತ್ತಿತ್ತು. ಅವರ ಭಾರತೀಯ ಸಂಸ್ಕೃತಿಯ ಆರಾಧನೆ ಅವಿಮರ್ಶಾತ್ಮಕ ಅನಿಸುತ್ತಿತ್ತು. ಅವರು ಇಂದಿರಾಗಾಂಧಿ ಹಾಗೂ ಪುಟ್ಟಪರ್ತಿ ಬಾಬಾನ ಭಕ್ತರು ಎಂಬುದು ಮುಜುಗರ ಬೆಳೆಸಿತ್ತು. ಹೀಗಾಗಿ ಕೊಂಚ ಅನುಮಾನ, ತಮಾಶೆ, ನಿರಾಸಕ್ತಿ ಇಟ್ಟುಕೊಂಡೇ ಶಿಷ್ಯರಾದೆವು. ಇನ್ನೊಂದು ಕಾರಣ ಅವರ ಪಾಠದ ವಿಧಾನ. ಅವರೊಬ್ಬ ಶಿಸ್ತಿನ ಮೇಷ್ಟರಾಗಿರಲಿಲ್ಲ. ಅವರದು ಒಂದು ವಿಚಾರವನ್ನು ಆರಂಭಿಸಿ, ಕ್ರಮಬದ್ಧವಾಗಿ ಬೆಳೆಸಿ ಮುಗಿಸುವ ಜಾಯಮಾನವಲ್ಲ. ನಡುವೆ ಸೆಳೆತ ಬಂದತ್ತ ಹೋಗಿಬಿಡುತ್ತಿದ್ದರು. ಮೋಡದಿಂದ ಮೋಡಕ್ಕೆ ಹಾರಾಡುವ ಯಕ್ಷನಂತಿದ್ದರು. ನಾವು ನೆಲದ ಮೇಲೆ ಹರಿದಾಡುತ್ತಿದ್ದೆವು. ಕನ್ನಡ ಇಂಗ್ಲಿಷ್ ಸಂಸ್ಕೃತಗಳಲ್ಲಿ ಪಾಂಡಿತ್ಯವಿದ್ದ ಅವರು ಒಳನೋಟಗಳನ್ನು ಚೆಲ್ಲಾಡುತ್ತಿದ್ದರು. ಅವನ್ನು ಆಯ್ದು ಕಟ್ಟಿಕೊಳ್ಳಲು ನಮಗೆ ಬೌದ್ಧಿಕ ಸಿದ್ಧತೆ ಇರಲಿಲ್ಲ. ನನಗಂತೂ ಅವರ ವಿದ್ವತ್ತಿನ ಆಳ ಅರಿವಾಗಿದ್ದು ಎಂಎ ಮುಗಿಸಿ ಹೊರಬಂದ ಮೇಲೆ. ಅವರ ಪುಸ್ತಕಗಳ ಮೂಲಕ. ಈಗಲೂ ಅವರ ಅಷ್ಟೊಂದು ಪ್ರಸಿದ್ಧವಲ್ಲದ ಬಸವಣ್ಣ ಹಾಗೂ ನವೋದಯ ಸಾಹಿತ್ಯದ ಮೇಲಿನ ಲೇಖನಗಳೆರಡೇ ಸಾಕು, ಅವರ ಪ್ರತಿಭೆಗೆ ಸಾಕ್ಷ್ಯ ಕೊಡಲು.

ನಾವೆಷ್ಟೇ ಅನುಮಾನ ಇರಿಸಿಕೊಂಡಿದ್ದರೂ ಪುಣೇಕರರ ನಿಷ್ಕಲ್ಮಶ ಮನಸ್ಸು, ಪ್ರಾಮಾಣಿಕತೆ, ಅಮಾಯಕ ವ್ಯಕ್ತಿತ್ವ ಇವೆಲ್ಲ ನಮನ್ನು ಒಳಗೇ ಬಂಧಿ ಸುತ್ತಿದ್ದವು. ಅದೊಂದು ಮಗುವಿನ ಜತೆಯಲ್ಲಿ ಇರುವ ಸಂಬಂಧದಂತೆ ಇತ್ತು. ಮಗುಮುಗ್ಧತೆ ಎನ್ನುವದಕ್ಕೆ ಅವರಷ್ಟು ಸೂಕ್ತ ಉದಾಹರಣೆಯನ್ನು ನಾನು ಕಂಡಿದ್ದು ಕಡಿಮೆ. ತಮ್ಮ ಮುಗ್ಧತೆಗೆ ಅವರು ಬೇಕಾದಷ್ಟು ನಿದರ್ಶನ ಒದಗಿಸುತ್ತಿದ್ದರು. ಒಮ್ಮೆ ಮೈಸೂರಲ್ಲಿ ಹೊರೆಯಾಲ ದೊರೆಸ್ವಾಮಿ ಒಂದು ಕವಿಗೋಷ್ಠಿ ಏರ್ಪಾಟು ಮಾಡಿದ್ದರು. ಅದರಲ್ಲಿ ಆಲನಹಳ್ಳಿ ಕೃಷ್ಣ ಎಚ್.ಎಂ. ಚನ್ನಯ್ಯ ಮುಂತಾದವರು ಸೇರಿದ್ದರು. 'ಮಾಯಿಯ ಮೂರು ಮುಖಗಳು' ಸಂಕಲನದ ಮೂಲಕ ಕವಿ ಯಾಗಿದ್ದ ಪುಣೇಕರರ ಕವನ ವಾಚನವೂ ಇತ್ತು. ಅವರ ಸರದಿ ಬಂತು. ಅವರು ಒಂದು ದೊಡ್ಡಹಾಳೆ ಹಿಡಿದು ಕೊಂಡು 'ವಂದೇರಾಜಕುಮಾರ, ರಾಘವೇಂದ್ರ ಕೃಪಾತನಯಾ' ಎಂಬ ರಚನೆಯನ್ನು 'ಇಂದಿರಾ ರಾಜ ಕುಮಾರ' ಎಂಬ ರಾಗದಲ್ಲಿ ಹಾಡಲಾರಂಭಿಸಿದರು. ಅವರು ಮುಂಬೈನಲ್ಲಿದ್ದಾಗ 'ಟೈಮ್ಸ್ ಆಫ್ ಇಂಡಿಯಾ' ಪತ್ರಿಕೆಗೆ ಭಾರತದ ಎಲ್ಲ ದೊಡ್ಡ ಹಿಂದೂಸ್ತಾನಿ ಸಂಗೀತ ಗಾರರ ಗೋಷ್ಠಿಗಳನ್ನು ಕುರಿತು ರಿವ್ಯೂ ಮಾಡಿದವರು. ಅವರಿಗೆ ಸಂಗೀತದಲ್ಲಿ ಬಹಳ ವಿದ್ವತ್ತಿತ್ತು . ಆದರೆ ಅವರ ಹಾಡುಗಾರಿಕೆ ಮೆಚ್ಚುವಂತಿರಲಿಲ್ಲ. ಪದ್ಯದ ಬಗ್ಗೆಯಂತೂ ಹೇಳುವಂತೆಯೇ ಇರಲಿಲ್ಲ. ಸಭೆಯಲ್ಲಿ ಗದ್ದಲ ! ಸಿಗರೇಟು ಸೇದುತ್ತ ಹೊಗೆಬಿಡುತ್ತ ಗಟ್ಟಿಯಾಗಿ ಮಾತಾಡುತ್ತ ಉದ್ದಕ್ಕೂ ಸಭಾಕಂಟಕರಂತೆ ಕಾಣುತ್ತಿದ್ದ ಆಲನಹಳ್ಳಿ ಜೋರಾಗಿ ಗಹಗಹಿಸಿ, ಗೇಲಿಮಾಡಿ ಹಾಕಿದರು. ಪುಣೇಕರರಿಗೆ ಕವನ ಮುಗಿಸುವುದು ಆಗಲಿಲ್ಲ. ಗುರುಗಳಿಗೆ ಹೀಗಾಯಿತಲ್ಲಾ ಎಂದು ನಾವೆಲ್ಲ ಮರುಗಿದೆವು. ಅವರಿಗೆ ಒಮ್ಮೆ ನಾನು ಕೇಳಿದೆ, "ನಿಮಗೆ ಇಂದಿರಾಗಾಂಧಿ ಅಂದರೆ ಯಾಕಷ್ಟು ಭಕ್ತಿ"? ಅವರೆಂದರು: "ಅವಳಿಗೆ ಈ ದೇಶದ ಬಗ್ಗೆ ಇರುವಷ್ಟು ವಿಶನ್ ಮತ್ತೆ ಯಾರಿಗೂ ಇದ್ದಿಲ್ಲ"; ತಮ್ಮ ಇಂದಿರಾಭಕ್ತಿಗಾಗಿ ಅವರು ಕೇವಲ ಹಾಸ್ಯಾಸ್ಪದರಾಗಲಿಲ್ಲ. ಪೆಟ್ಟನ್ನೂ ತಿಂದಿದ್ದಾರೆ. ೧೯೮೨ರಲ್ಲಿ ಗೋಕಾಕ ಚಳುವಳಿ



ತನ್ನ ಕಾವಿನ ಉತ್ತುಂಗಕ್ಕೆ ಏರಿತ್ತು. ನಾವೆಲ್ಲ ಚಳುವಳಿ ಮಾಡಿ ಒಂದು ದಿನ ಯಾವುದೋ ಒಂದು ಬಯಲು ಸೆರೆಮನೆಯಲ್ಲಿದ್ದೆವು. ಅವರು ಚಳುವಳಿಯನ್ನು ಇಷ್ಟಪಡಲಿಲ್ಲ. ಮಾರನೆಯ ದಿನ ನಮಗೊಂದು ಸುದ್ದಿ ಸಿಕ್ಕಿತು: ಮಾನಸಗಂಗೋತ್ರಿಯಲ್ಲಿ ಘೋಷಣೆ ಕೂಗಿಕೊಂಡು ಹೋಗುತ್ತಿದ್ದ ಗುಂಪನ್ನು ಇವರೇ ತಡೆದು "ನೀವೆಲ್ಲ ಇಂದಿರಾಗಾಂಧಿಗೆ ಕೆಟ್ಟಹೆಸರು ತರಲಿಕ್ಕೆ ಇದನ್ನೆಲ್ಲ ಮಾಡ್ತಿದೀರಿ" ಎಂದು ಜೋರು ಮಾಡಿದರಂತೆ. 'ತದಕುರ್ಲಾ ನಾಕ ಇವನಿಗೆ' ಎಂದು ಹುಡುಗರು ಅವರಿಗೆ ಅಂಗಿಹಿಡಿದು ಎಳೆದಾಡಿದರಂತೆ. ನಾಲ್ಕು ಪೆಟ್ಟೂ ಕೊಟ್ಟರಂತೆ!

ನಮ್ಮ ಗುರುಗಳು ಹೆಸರಿಗೆ ತಕ್ಕಂತೆ ಭೋಳೆಶಂಕರ. ಅವರ ಮರೆಗುಳಿತನದ ಮೇಲೂ ಅವರ ವಿಚಿತ್ರ ವರ್ತನೆಗಳ ಮೇಲೂ ನಾನಾ ಕತೆಗಳು ನಮ್ಮ ಕಾಲಕ್ಕೇ ಧಾರವಾಡ ಉಡುಪಿಗಳಿಂದ ಮೈಸೂರಿಗೆ ಆಮದಾಗಿದ್ದವು. ಅದರಲ್ಲಿ ಉಡುಪಿಯ ಕಾಲೇಜಿನಲ್ಲಿ ಪ್ರಿನ್ಸಿಪಾಲರಾಗಿದ್ದಾಗ ನಡೆದಿದ್ದು ಎನ್ನಲಾದ ಒಂದು ಪ್ರಸಂಗ ಸೇರಿದೆ. ಯಾರೋ ಒಬ್ಬ ಹುಡುಗ ಚೆನ್ನಾಗಿ ಹಾಡುವವನು ಇದ್ದನಂತೆ. ಕಾರ್ಯಕ್ರಮವೊಂದರಲ್ಲಿ ಪುಣೇಕರರು ಅವನು ವೇದಿಕೆಗೆ ಬಂದು ಹಾಡು ಹಾಡಬೇಕೆಂದು ಅಪ್ಪಣೆ ಮಾಡಿದರು. ಅವನು ಒಲ್ಲೆ ಎಂದ. ಅವನನ್ನು ಎಳೆದುತರಲು ಪುಣೇಕರರು ಧಾವಿಸಿದರು. ಅವನು ತಪ್ಪಿಸಿಕೊಳ್ಳಲು ಓಡತೊಡಗಿದ. ಪ್ರಿನ್ಸಿಪಾಲರು ಹಿಂದಿಂದೆ ಓಡತೊಡಗಿದರು. ಇಡೀ ಮೈದಾನದ ಎರಡು ಸುತ್ತು , ಶಿಷ್ಯನನ್ನು ಅಟ್ಟಿಸಿಕೊಂಡು ಗುರುಗಳು ! ಜನ ಬಹುಶಃ ಉತ್ಪ್ರೇಕ್ಷೆ ಮಾಡಿ ಕತೆ ಕಟ್ಟುತ್ತಿದ್ದರೋ ಏನೋ? ಆದರೆ ಅವರನ್ನು ಬಲ್ಲವರಿಗೆ ಈ ಕತೆಗಳು ಪೂರಾ ಸುಳ್ಳಲ್ಲ ಎನಿಸುತ್ತಿತ್ತು.

ಅವರು ತಮ್ಮ ಶಿಷ್ಯರಿಗೆ ಕೊಡುತ್ತಿದ್ದ ತಾಯಿಪ್ರೀತಿ ಆರ್ದ್ರವಾಗಿರುತ್ತಿತ್ತು. ಕ್ಲಾಸಿಗೆ ಬಂದ ಐದಾರು ನಿಮಿಷ ಕಣ್ಣುಹಾರಿಸುತ್ತ ನಗುತ್ತ ಹರಟೆ ಹೊಡೆಯುತ್ತಿದ್ದರು. ಒಂದು ದಿನ ಅವರು ಹೊಸ ಅಂಗಿ ಹಾಕಿಕೊಂಡು ತಾಂಬೂಲ ಮೆದ್ದುಕೊಂಡು ಕೆಂಪಾಗಿ ಸಿಂಗರಿಸಿದ ವರನಂತೆ ತರಗತಿಗೆ ಬಂದರು. ಅವತ್ತು ಅವರ 'ನಟನಾರಾಯಣಿ'ಗೆ 'ಸುಧಾ' ಕಾದಂಬರಿ ಸ್ಪರ್ಧೆಯಲ್ಲಿ ಬಹುಮಾನ ಬಂದಿತ್ತು. ಆ ಕಾಲಕ್ಕೆ ಸಾವಿರಾರು ರೂಪಾಯಿಯ ಬಹುಮಾನ. 'ಇವತ್ತು ಕ್ಲಾಸು ಬೇಡ, ಕಾಫಿತಿಂಡಿ ಆಗಬೇಕೆಂ'ದು ಗಂಟುಬಿದ್ದೆವು. ಅದಕ್ಕೆ ಅವರು 'ಕ್ಲಾಸು ಬಿಡೋದು ಬೇಡ. ಹಾ. ಮಾ. ನಾಯಕರು ಇದಾರೆ' ಎಂದು ಕಣ್ಣು ಮಿಟುಕಿಸಿ, ನಂತರ ವಿಮರ್ಶೆಯ ವಿದ್ಯಾರ್ಥಿಗಳಾದ ನಮ್ಮನ್ನೆಲ್ಲ ಕರೆದುಕೊಂಡು ಕ್ಯಾಂಟೀನಿಗೆ ಹೋದರು. ಸದಾ ನಗು ತುಂಟತನ ಲಾಸ್ಯವಾಡುತ್ತಿದ್ದ ಅವರ ಮುಖದಲ್ಲಿ ದುಗುಡವನ್ನು ನಾನು ಕಂಡೇ ಇಲ್ಲ. ಕಂಡಿದ್ದು ಒಂದೇ ಸಲ. ಬೇಂದ್ರೆ ತೀರಿಕೊಂಡಾಗ. ಇಡೀ ಗಂಟೆ ತರಗತಿಯಲ್ಲಿ ಮೌನ. ಏನೋ ಹೇಳಲಿಕ್ಕೆ ಹೋಗುವುದು. ಮಾತು ಹೊರಡದೆ ನಿಲ್ಲುವುದು. ಕಣ್ಣಲ್ಲಿ ನೀರಾಡುತ್ತಿತ್ತು, ಕೆಳಕ್ಕೆ ಉರುಳದೆ.

ಇಂತಪ್ಪ ಗುರುಗಳು ನಿವೃತ್ತರಾದ ಮೇಲೆ ಇದ್ದಕ್ಕಿದ್ದಂತೆ ಅದೃಶ್ಯರಾದರು. ಅವರು ಸಾರ್ವಜನಿಕ ಸಭೆಗಳಿಗೆ ಹೆಚ್ಚಾಗಿ ಹೋಗುತ್ತಿರಲಿಲ್ಲ. ಈ ನಡುವೆ ಅವರಿಗೆ ಇನ್ನೂ ಪೆನ್‌ಶನ್ ಸೆಟಲ್ ಆಗಿಲ್ಲ ಎಂದು ತಿಳಿಯಿತು. ಧಾರವಾಡ ಉಡುಪಿ ಮುಂಬೈ, ಬಿಜಾಪುರ – ಹೀಗೆ ದೇಶದ ನಾನಾ ಕಡೆ ಕೆಲಸ ಮಾಡಿದ ಅವರು ಅಲ್ಲಿಂದೆಲ್ಲ ಸರ್ವಿಸ್ ಸರ್ಟಿಫಿಕೇಟುಗಳನ್ನು ತಂದು ಒದಗಿಸಿರಲಿಲ್ಲವಂತೆ. ನಮಗೆ ಅಚ್ಚರಿ ಆಗಲಿಲ್ಲ. ಆದರೆ ಅವರು ಎಲ್ಲಿಯಾದರೂ ಸಭೆಗಳಲ್ಲಿ ಆಕಸ್ಮಿಕ ಸಿಕ್ಕಾಗ ಪ್ರೀತಿಯನ್ನೇ ಸುರಿಸುತ್ತಿದ್ದರು.

ಪುಣೇಕರರ ಅಧಿಕೃತ ಹೆಸರು ಎಸ್. ಆರ್. ಮೊಕಾಶಿ. ಶಂಕರ ರಾಮಜಿ ರಾವ್ ಮೊಕಾಶಿ. ಆದರೆ ಅವರು ತಮ್ಮನ್ನು ಸಾಕಿದ ಅಜ್ಜ ಅಜ್ಜಿಯರ ಹೆಸರನ್ನು ತಮ್ಮ ಹೆಸರಲ್ಲಿ ಸೇರಿಸಿಕೊಂಡರು. ಬೇಂದ್ರೆ ತಾಯಿಯ ಹೆಸರನ್ನು ಇಟ್ಟುಕೊಂಡಂತೆ. 'ಗಂಗವ್ವ ಗಂಗಾಮಾಯಿ'ಯ ಅರ್ಪಣೆ ಹೀಗಿದೆ:

"ನನ್ನ ಅಜ್ಜ ದಿವಂಗತ ರಾಮಚಂದ್ರ ಬಾಪೂಜಿ ಪುಣೇಕರ (ಬಾಬಾ), ಹಾಗೂ ಅಜ್ಜಿ ದಿವಂಗತ ಸೀತಾಬಾಯಿ ರಾಮಚಂದ್ರ ಪುಣೇಕರ (ಅಂಬಕ್ಕ) ಇವರಿಗೆ ಪ್ರೇಮಪೂರ್ವಕ ಈ ಪ್ರಥಮ ಕೃತಿ ಸಮರ್ಪಿತ- ಇಬ್ಬಗೆಯಿಂದ ಮೊಮ್ಮಗನಾದ ಶಂಕರ."

ತಾಯಿ ಕಡೆಯಿಂದ ಪುಣೇಕರರು ಮರಾಠಿ ಮೂಲದವರಿರಬೇಕು. ಭಾಷೆ ಮತ್ತು ಗಡಿಗಳ ಹೆಸರಲ್ಲಿ ಚಳುವಳಿಗಾರರು ಜಗಳ ಕಾಯುವಾಗ ಸೃಜನಶೀಲ ಲೇಖಕರು ಇದರ ನಡುವೆಯೇ ಕೊಂಚ ಅತೀತರಾಗಿ ಎರಡು ಸಂಸ್ಕೃತಿಗಳ ಮಿಲನದ ಫಲವನ್ನು ತಮ್ಮ ಸೃಜನಶೀಲತೆಗೆ ಬಳಸಿಕೊಳ್ಳುತ್ತಾರೆ. ಬೇಂದ್ರೆ, ಶಂಬಾ, ಪುಣೇಕರ ಇಂತಹವರು. ಪುಣೇಕರರ 'ಗಂಗವ್ವ ಗಂಗಾಮಾಯಿ', 'ಅವಧೇಶ್ವರಿ' ಎರಡೂ ಕಾದಂಬರಿಗಳು ಮಹಿಳೆಯರ ಹೆಸರಲ್ಲಿವೆ. ಕವನ ಸಂಕಲನದ ಹೆಸರು 'ಮಾಯಿಯ ಮೂರು ಮುಖಗಳು'. ತಮ್ಮ ಬರೆಹ ಚಿಂತನೆಗಳಲ್ಲಿ ಮಹಿಳೆಯ ಅಂತಸ್ಸತ್ವದ ಬಗ್ಗೆ ಸದಾ ಚಿಂತಿಸುತ್ತಿದ್ದ ಲೇಖಕರಲ್ಲಿ ಪುಣೇಕರರೂ ಒಬ್ಬರು. ಅವರು ವಯಸ್ಸಿನಲ್ಲಿ ಅಡಿಗ, ಶಿವರುದ್ರಪ್ಪ, ಕುರ್ತಕೋಟಿ, ಕಣವಿ ಅವರ ತಲೆಮಾರಿನವರು. ಅವರ ಹಿಂದೆ ಕುವೆಂಪು, ಬೇಂದ್ರೆ, ಮಾಸ್ತಿ, ಕಾರಂತ, ಮೊದಲಾದವರ ಬೆಟ್ಟದಂತಹ ಪರಂಪರೆ. ಮುಂದೆ, ಕೊಂಚ ಚಿಕ್ಕವರಾದ ತೇಜಸ್ವಿ, ಅನಂತಮೂರ್ತಿ, ಲಂಕೇಶ ಮುಂತಾದ ಯುವಲೇಖಕರ ಬಿರುಸು. ಇವೆರಡರ ನಡುವೆ ಇದ್ದ ಪುಣೇಕರರು ಎರಡೂ ತಲೆಮಾರುಗಳ ನಡುವಣ ಸಂಘರ್ಷಗಳಲ್ಲಿ ತಮ್ಮ ಸೃಜನಶೀಲತೆ ರೂಪಿಸಿಕೊಂಡವರು. ಅವರಲ್ಲಿ ಬೌದ್ಧಿಕವಾದ ಜಗಳಗಂಟಿತನವಿತ್ತು. ತಮ್ಮ ನಿಲುವಿಗೆ ಹಠಹಿಡಿಯುವ ಗುಣವಿತ್ತು. ನಮ್ಮ ನೆಲದ ಪರಂಪರೆ ಸಂಸ್ಕೃತಿಗಳ ಮೇಲೆ ಅಪಾರ ನಂಬಿಕೆಯಿಟ್ಟ ಅವರು ಆಧುನಿಕತೆ ಬಗ್ಗೆ ಸಂಶಯ ತಾಳಿದವರು. ಅದರಲ್ಲೂ ವಸಾಹತುಶಾಹಿಯ ಬೌದ್ಧಿಕ ಹಾಗೂ ಸಾಂಸ್ಕೃತಿಕ ಪರಿಣಾಮಗಳ ಬಗ್ಗೆ ಮಹಾಕ್ರೋಧ ಉಳ್ಳವರಾಗಿದ್ದರು. ಕನ್ನಡದ ನವ್ಯರು ಅವರ ಪಾಲಿಗೆ ಚರಿತ್ರೆಯ ಬ್ರಿಟಿಶರ ಪಳೆಯುಳಿಕೆಗಳು. ಇದರಿಂದ ಅವರ ಮೇಲೆ ಸದಾ ಚಾಟಿ ಬೀಸುತ್ತಿದ್ದರು. ಆದರೆ ಆಧುನಿಕತೆಯನ್ನು ಅನುಮಾನಿಸುವ ಎಲ್ಲ ಚಿಂತಕರು ತಮ್ಮ ಅತಿಯಲ್ಲಿ ನಮ್ಮ ಸಮಾಜದ ಕ್ರೌರ್ಯಗಳ ಬಗ್ಗೆ ಕುರುಡಾಗುವಂತೆ ಪುಣೇಕರರೂ ಆಗಿದ್ದರು. ಸೆಮಿನಾರುಗಳಲ್ಲಿ ಅವರು ನವ್ಯದವರನ್ನು ಹಣಿಯುತ್ತಿದ್ದರು.

ಒಂದು ಹಿಂದಿ ಸಿನಿಮಾ ಹಾಡನ್ನು ಹಾಡಿ ಇದು ಹೇಗೆ ನಮ್ಮ ಸಂಸ್ಕೃತಿಯ ಸಾರವಾಗಿದೆ ಎಂದು ಗಂಭೀರ ಪ್ರಬಂಧವನ್ನು ಮುಗಿಸುತ್ತಿದ್ದರು. ಅವರ ವಿಚಿತ್ರ ಸ್ವಭಾವ, ಶಾಕಿಂಗ್ ಆದ ತೀರ್ಮಾನಗಳು ಇವೆಲ್ಲವುಗಳ ಸಮೇತ ಅವರೊಬ್ಬ ಸ್ವತಂತ್ರವಾಗಿ ಚಿಂತನೆಮಾಡುವ ಪ್ರತಿಭಾಶಾಲಿಯಾಗಿದ್ದರು. ಬಸವಣ್ಣನ ವಚನಗಳ ಮೇಲೆ ಬರೆದಿರುವ ಲೇಖನವನ್ನು ಜೀರ್ಣಿಸಿಕೊಳ್ಳಲು ಕನ್ನಡಿಗರಿಗೆ ಇನ್ನೂ ಆಗಿಲ್ಲ. ಅವರು ಏನು ಬರೆಯದಿದ್ದರೂ 'ಗಂಗವ್ವ ಗಂಗಾಮಾಯಿ' ಕಾದಂಬರಿಯು ಒಂದೆ ಸಾಕು, ಮುಂಬರುವ ದಿನಗಳಲ್ಲಿ ಪುಣೇಕರರನ್ನು ನೆನೆಯಲು. ಅದು ಕನ್ನಡದ ಶ್ರೇಷ್ಠ ಕಾದಂಬರಿ ಎಂದರೆ ಕ್ಲೀಷೆಯಾಗುತ್ತದೆ. ಅದನ್ನು ಹತ್ತನೆ ಸಲ ಓದುವಾಗಲೂ ಎಷ್ಟೊಂದು ಫ್ರೆಶ್‌ಆಗಿಯೇ ಕಾಣುತ್ತದೆ!

ಅವರು ತೀರಿಕೊಳ್ಳುವ ಒಂದುವಾರ ಮುಂಚೆ ಇರಬೇಕು. ಧಾರವಾಡದ ಅಧ್ಯಾಪಕ ಮಿತ್ರರು ಸಿಕ್ಕಾಗ ಕೇಳಿದೆ: ಪುಣೇಕರ್ ಹೇಗಿದ್ದಾರೆ? ಅವರು "ಪುಣೇಕರ ಧಾರವಾಡದಾಗೇ ಇದಾರೇನು?" ಎಂದರು. ಅಚ್ಚರಿಯಾಯಿತು. ಪುಣೇಕರ್ ತಮ್ಮ ಮಾಳಮಡ್ಡಿಯ ಮನೆಯಲ್ಲಿ ಅಜ್ಞಾತವಾಸ ಮಾಡುತ್ತಿರುವ ರೀತಿ ಇದು. ತಮ್ಮ ಇರುವಿಕೆಯೇ ತಿಳಿಯದಂತೆ ಅವರು ಇದ್ದರೋ ಅಥವಾ ಅವರ ಇರುವಿಕೆಯನ್ನು ಜನ ಮನ್ನಿಸಿರಲಿಲ್ಲವೋ ತಿಳಿಯದು. ಪುಣೇಕರರು ಎಂದೂ ಲೈಮ್‌ಲೈಟಲ್ಲಿ ಇರಲು ಬಯಸಿದವರಲ್ಲ. ತನ್ನ ಬರೆಹದ ಬಗ್ಗೆ ಮಮಕಾರವಿರದ ಲೇಖಕ ಶಾಂತಿನಾಥ ದೇಸಾಯಿ ಎಂದು ಹೇಳುತ್ತಾರೆ. ನನಗೆ ತಿಳಿದಮಟ್ಟಿಗೆ ಅಂತಹ ಇನ್ನಿಬ್ಬರು ಎಂದರೆ ಜಿ. ರಾಜಶೇಖರ್ ಹಾಗೂ ಶಂಕರ ಮೊಕಾಶಿ ಧಾರವಾಡದಲ್ಲಿ ಇದ್ದರು. ಎಲೆಮರೆಯ ಕಾಯಿಯ ಹಾಗಲ್ಲ, ನೆಲದೊಳಗಿನ ಎರೆಹುಳವಿನ ಹಾಗೆ.

ಪುಣೇಕರರು ನನಗೊಮ್ಮೊಮ್ಮೆ ಪತ್ರ ಬರೆಯುತ್ತಿದ್ದರು. ಅದನ್ನು ಡಿಕೋಡ್ ಮಾಡಿ ಓದಿಕೊಳ್ಳುವುದು ಒಂದು ದಿನದ ಕಾರ್ಯಕ್ರಮ. ಒಮ್ಮೆ (೧.೮.೧೯೯೮) ಗುರುಗಳನ್ನು ಹುಡುಕಿಕೊಂಡು ಧಾರವಾಡಕ್ಕೆ ಹೋದೆ. ಮಾಳಮಡ್ಡಿಯಲ್ಲಿ ಕಾಡು ಬೆಳೆದ ದೊಡ್ಡ ಬಂಗಲೆಯಲ್ಲಿ ಅವರೂ ಅವರ ಮಡದಿ ಇಬ್ಬರೇ. ಅವರಿಗೆ ೭೫ ಆಗಿತ್ತು. ಪಾರ್ಕಿನ್‌ಸನ್ ಕಾಯಿಲೆಯಿಂದ ಬಳಲುತ್ತಿದ್ದರು. ಆದರೆ ಅದೇ ತೇಜಃಪುಂಜವಾದ ಮೊಗ. ಶಿಷ್ಯರನ್ನು ಕುರಿತು ಕಣ್ಣಲ್ಲಿ ಮಿನುಗುವ ಅದೇ ಪ್ರೀತಿಯ ಹೊಳಪು. 'ಬಾ' ಎಂದು ಒಳಗೆ ಕರೆದುಕೊಂಡು ಹೋದರು. 'ಲಗ್ನ ಆತೇನು? ಎಷ್ಟು ಮಕ್ಕಳು?' ಎಂದು ಕೇಳಿದರು. ಇಡೀ ದಿನ ಅವರ ಜತೆ ಇದ್ದೆ, ಮಾತಾಡಿದೆ. ನನ್ನ ಕಸುರು ಪ್ರಶ್ನೆಗಳಿಗೆಲ್ಲ ಸಹನೆಯಿಂದ ಉತ್ತರಿಸಿದರು. ಸಂದರ್ಶನದ ಆಯ್ದ ಭಾಗವನ್ನು ಇಲ್ಲಿ ಕೊಟ್ಟಿದೆ. ಅವರ 'ಹರಿಜನ್ಸ್ ಕಾಂಟ್ರಿಬ್ಯೂಶನ್ಸ್ ಟು ಮಿಡೀವಲ್ ಇಂಡಿಯನ್ ಥಾಟ್' ಕೃತಿ ನೆಪದಲ್ಲಿ ಮಾತು ಶುರು ಮಾಡಿದೆ.

**ಪ್ರ** : ನೀವು ದಲಿತ ತತ್ವಜ್ಞಾನಿಗಳ ಬಗ್ಗೆ ಚಿಂತನೆ ಮಾಡಿದೀರಿ. ಅದಕ್ಕೂ ಯೇಟ್ಸ್ ಕವಿಯನ್ನು ಅಧ್ಯಯನಕ್ಕೆ ಆರಿಸಿಕೊಳ್ಳೋದಕ್ಕೂ ಸಂಬಂಧ ಇದೆಯಾ?

**ಪು** : ಏನಿಲ್ಲ ಯೇಟ್ಸ್ ಮೂಲಕ ಇತ್ಲಾಗೆ ಹೊಳ್ದಿದೆ. ಯೇಟ್ಸ್ ಈ ರೀತಿ ಜನ್ರ ಜತೆಗೆ ಮಿಕ್ಸ್ ಆಗತಿದ್ದ. ದೊಡ್ಡ ಗುಣ ಅದು.

**ಪ್ರ** : ನಿಮ್ಮ ಬರೆಹಗಳಲ್ಲಿ ಪಶ್ಚಿಮದ ಸಾಂಸ್ಕೃತಿಕ ಯಜಮಾನಿಕೆ ವಿರುದ್ಧ ಧರ್ಮಯುದ್ಧ ಮಾಡಿಕೊಂಡು ಬಂದವರು. ನೀವು ಯೂರೋಪಿನ ಯೇಟ್ಸನನ್ನು ಆರಿಸಿಕೊಳ್ಳುವಾಗ ಹೇಗೆ ಬೇರೆ ಅನಿಸಿತು?

**ಪು** : ಅಲ್ಲಲ್ಲ, ಯೇಟ್ಸ್ ನಾ ಆರಿಸಿಕೊಂಡಿದ್ದಲ್ಲ, ಗೋಕಾಕರು ಇಂಪೋಸ್ ಮಾಡಿದರು. ಆಮೇಲೆ ಸುಮಾರು ಎರಡು ವರ್ಷದವರೆಗೆ ಯೇಟ್ಸ್ ವಾಸ್ ಮೈ ಚೀಫ್ ಎನಿಮಿ! (ನಗು) ಯಾಕ ಕೊಟ್ಟಾರೋ, ಅಂತೂ ಇಂತೂ ಮಾಡಬೇಕು ಮುಗಸ್ಬೇಕು ಅಂತಿಳಕೊಂಡು ತಗೊಂಡೆ.

**ಪ್ರ** : ನಿಮ್ಮ ಬ್ರಿಟಿಷ್ ವಿರೋಧಿ ಚಿಂತನೆಗೆ ಯೇಟ್ಸ್ ಪ್ರೇರಿಸಿದನಾ?

**ಪು** : ಯೇಟ್ಸ್ ಆ್ಯಂಟಿ ಇಂಗ್ಲಿಷ್ ಇದ್ದ ಅಂವ್ನು. 'ಯೇಟ್ಸ್ ಅಂಡ್ ಆಂಗ್ಲೋ ಫೋಬಿಯಾ' ಅಂತ ಒಂದು ಆರ್ಟಿಕಲ್ ಬರೆದೇನಿ ನಾ. ಇಂಗ್ಲಿಷ್ ಮಂದಿ ಸಲುವಾಗಿ ಭಾಳ ಸಿಟ್ಟಿತ್ತು ಅಂವ್ಗ.

**ಪ್ರ** : ಯೂರೋಪು ವಸಾಹತುಶಾಹಿಯಾಗಿ ನಮ್ಮ ಮೇಲೆ ಮಾಡಿದ ಯಜಮಾನಿಕೆಯನ್ನ ನೀವು ಕೇವಲ ಸಾಂಸ್ಕೃತಿಕವಾಗಿ ಅರ್ಥೈಸಿಕೊಂಡಂತೆ ಕಾಣ್ತದೆ. ಅದರ ಆರ್ಥಿಕ ರಾಜಕೀಯ ಆಯಾಮದ ಬಗ್ಗೆ ಅಲ್ಲ.

**ಪು** : ಇಲ್ಲ ಅವರು ಬಂದ ಮೂಲಕ ನಮಗೆ ಪ್ರಗತಿ ಆಯ್ತು. ಇದು ಶೂರ್. ನಮಲ್ಲಿ ಹಿಸ್ಟಾರಿಕಲ್ ಸೆನ್ಸ್ ಇದ್ದಿಲ್ಲ ಆ ಹಿಸ್ಟಾರಿಕಲ್ ಸೆನ್ಸ್ ಒಳ್ಳೆದೂ ಅಲ್ಲೋ ಆ ಮಾತು ಬ್ಯಾರೆ.

**ಪ್ರ** : ಅಲ್ಲ, ಅದನ್ನ ಒಂದು ಕೊರತೆ ಅಂತ ಯಾಕೆ ಭಾವಿಸಬೇಕು ನಾವು?

**ಪು** : ಡೆಫನೇಟಲಿ ಕೊರತೇನೇ ನೋಡ್ರಿ. ವೇದ ಓದ್ಲಿಕ್ಕ ನಿಮಗೆ ಬೇಕು. ಆದ್ರೆ ಅದರ್ ಹಿಸ್ಟಾರಿಕಲ್ ವಿಶನ್ ಇಲ್ಲ, ವೇದಕ್ಕೆ ಅರ್ಥ ಹಚ್ಚಬಾರದು ಅಂತ ನೇಮ ಅದೆ ನಮ್ಮಲ್ಲಿ. ಓದಿದ ಜ್ಞಾನ ತಕ್ಕೊಂಡು ಏನ್ಮಾಡಿತೀರಿ ನೀವು?

**ಪ್ರ** : ನೀವು ನವ್ಯಸಾಹಿತ್ಯದ ತಾತ್ವಿಕ ನಿಲುವುಗಳ ವಿರುದ್ಧ ಏಕಾಂಗಿಯಾಗಿ ಪ್ರತಿರೋಧ ಮಾಡ್ತಾ ಬಂದಿದೀರಿ. ನಿಮ್ಮ ಆಗ್ರಹಕ್ಕೆ ಕಾರಣ ಏನು?

**ಪು** : ಒಟ್ಟು ಪಾಶ್ಚಾತ್ಯರಿಂದ ನಮಗೆ ಒಳ್ಳೆಯದಾಗಿಲ್ಲ ಅಂತ ನನ್ನ ಕಲ್ಪನೆ. ವಿದ್ಯಾ ಬಂದದೆ, ಆದರ ಲಾಭ ತಗೋಬೇಕು, ತಗೋಳೋಣ..

**ಪ್ರ** : ಅಲ್ಲ, ನವ್ಯರ ಮೇಲಿನ ನಿಮ್ಮ ಕೋಪ..

**ಪು** : ನವ್ಯ ಅಂದ್ರೆ ಕೆಲಒಬ್ಬರು ಛಲೋ ಇದಾರೆ. ಅಡಿಗರು ಚೆನ್ನಾಗಿದಾರೆ. ಅನಂತಮೂರ್ತಿ ಚೆನ್ನಾಗಿದಾರೆ. ಅವರಿಗೆ ಇದ್ದಂಥ ಸೆನ್ಸ್ ಉಳಿದವರಿಗೆ ಇದ್ದಿದ್ರ ನಮ್ಮ ಪರಂಪರೆಯ ಗುಣಗಳನ್ನು ತಿಳ್ಕೋತಿದ್ರು. ಅವರಿಗೆ ಪಾಸ್ಟ್ ಬ್ಯಾಡವೇ ಬೇಡ.

**ಪ್ರ** : ಸಾಂಸ್ಕೃತಿಕವಾಗಿ ತುಂಬ ಮುಖ್ಯ ಎಂದು ನೀವು ಹೇಳುವ ಕನ್ನಡದ ರೊಮ್ಯಾಂಟಿಕ್ ಲೇಖಕರೂ ಕೂಡ ವಸಾಹತುಶಾಹಿ ಸೃಷ್ಟಿಗಳಲ್ಲವೇ ?

**ಪು** : ಆದರೆ ದೆ ವರ್ ಕ್ಲೋಸ್ ಟು ದೆರ್ ಪಾಸ್ಟ್. ನವ್ಯರು ಆ ಪಾಸ್ಟನ್ನ ಗೆರಿ ಹೊಡದು ಹಿಂದದೂಡಿ ಮುಂದೆ ಹೋಗಿತೀವಿ ಅಂತಾರಲ್ಲ, ಅದು ಶಕ್ಯ ಇಲ್ಲ.

**ಪ್ರ** : ನಿಮ್ಮ ಮೇಲೆ ಪ್ರಭಾವ ಬೀರಿದ ಲೇಖಕ ಯಾರು?

**ಪು** : ಬೇಂದ್ರೆಯವರೇ. ಮತ್ಯಾರೂ ಇಲ್ಲ.

**ಪ್ರ** : 'ಪಾಶ್ಚಾತ್ಯ ಸಂಸ್ಕೃತಿಯ ಹುಚ್ಚುಹೊಳೆ ಬಂದಾಗ, ನಮ್ಮ ಸಂಸ್ಕೃತಿ ಕೊಚ್ಚಿಹೋಗದಂತೆ ತಡೆಯೊಡ್ಡುಗಳನ್ನು ಕಟ್ಟಿದವರು' ಅಂತ ನಮ್ಮ ನವೋದಯ ಲೇಖಕರನ್ನು ವರ್ಣಿಸ್ತೀರಿ. ಈ ಕೆಲಸ ಕುವೆಂಪು ಹೇಗೆ ಮಾಡಿದರು?

**ಪು** : ಅವರೂ ಮಾಡಿದಾರೆ. ಅವರ 'ರಾಮಾಯಣ ದರ್ಶನಂ' ಮಂದಿಗೆ ಅರ್ಥ ಆಗೋದಿಲ್ಲ. ಆದರೆ ಕಾದಂಬರಿಗಳೊಳಗೆ ತಮ ಜೀವನದ ದರ್ಶನವನ್ನ ಏನ್ ಕೊಟ್ರಲ್ಲ, ಅದು ಅಪರೂಪವಾದಂಥದ್ದು. ಅಂದ್ರೆ ನಾಯಿ ಮತ್ತು ಮನುಷ್ಯ ಸಂಬಂಧ ಅದೆಯಲ್ಲ, ಅದು ಇಂಗ್ಲಿಷ್‌ನೊಳಗೆ ಸಿಗೋದಿಲ್ಲ.

**ಪ್ರ** : ನಿಮ್ಮ ಆಯ್ಕೆಗಳಿದಾವಲ್ಲ, ಗಾಂಧಿ, ನವೋದಯ ಲೇಖಕರು, ನೀವು ಹೇಳೊ ಹರಿಜನ್ ಫಿಲಾಸಫರ್ಸ್, ಯೇಟ್ಸ್, ಆನಂದ ಕುಮಾರಸ್ವಾಮಿ- ಇವಕ್ಕೆಲ್ಲ ಸಮಾನ ಸಂಬಂಧವಿದ್ರೆ ಅದು ಯಾವುದು?

**ಪು** : (ಭಕ್ತಿಭಾವದಿಂದ) ಹೇ! ಆನಂದ ಕುಮಾರಸ್ವಾಮಿ! ದೊಡ್‌ಮನುಷಾ. ಬ್ರಿಲಿಯಂಟ್. ಸುಮಾರು ೪೦ ಪುಸ್ತಕ ಬರೆದಿದಾನೆ. ಒಂದೊಂದು ಪುಸ್ತಕ ಒಂದೊಂದು ಸೆಂಟೆನ್ಸ್ ನಿಮಗೆ ಸ್ಫೂರ್ತಿ ತರ್ತದೆ.

**ಪ್ರ** : ಭಾರತೀಯ ಸಾಂಸ್ಕೃತಿಕ ಸ್ವಾತಂತ್ರ್ಯದ ರಕ್ಷಕರು ಅಂತ ನೀವು ಭಾವಿಸಿರೋ ಈ ಚಿಂತಕರು ಭಾರತದ ಕರಾಳ ಅಧ್ಯಾಯಗಳನ್ನು ನೋಡೋದೇ ಇಲ್ಲ.

**ಪು** : ರಾಜಕೀಯದೊಳಗೆ ಈ ಚಿಂತನ ಅದೆ. ಅದಕ್ಕಿಂತ ಈ ಮಂದಿ ಮೊದ್ಲಿಂದನೂ ತಮ್ಮ ಲಿಮಿಟ್ ಏನದೆ ಅಂತಂಬೋದು ತಿಳ್ಕೊಂಡು ಮಾಡ್ತಿದ್ದರು. 'ಡ್ಯಾನ್ಸ್ ಆಫ್ ಶಿವ' ಓದ್ರಿ. ಮುಂದೆ ಯಾವ ಡೈರೆಕ್ಷನಲ್ಲಿ ಹೋಗಬೇಕು ಅಂದಾಗ ಆನಂದ ಕುಮಾರಸ್ವಾಮಿ ಬರ್ತಾರೆ.

**ಪ್ರ** : ನಿಮ್ಮ ಮನೆಮಾತು ಕನ್ನಡ. ನಿಮಗೆ ಮರಾಠಿ ಬರ್ತದೆ. ಸಂಸ್ಕೃತದೊಳಗೆ ದೊಡ್ಡ ವಿದ್ವತ್ತನ್ನು ಪಡೆದಿದ್ದೀರಿ.

**ಪು** : ಏ ಇಲ್ಲಿಲ್ಲ..(ನಗು)

**ಪ್ರ** : ಇಂಗ್ಲಿಷಿನಲ್ಲಿ ಪಾಠ ಹೇಳಿದೀರಿ. ಕನ್ನಡ ಲೇಖಕರಾಗಿದ್ದೀರಿ. ಈ ಭಾಷೆಗಳನ್ನು ಒಂದೇ ವ್ಯಕ್ತಿತ್ವದಲ್ಲಿ ಹೇಗೆ ಸಂಭಾಳಿಸಿದಿರಿ?

**ಪು** : ಹೇ ಹೇ! ಎಲ್ಲ ಶಕ್ಯ ಅದೇರಿ. ನನಗೇನು ಬಿರುಕು ಕಂಡಿಲ್ಲ.

**ಪ್ರ** : ಅಲ್ಲ, 'ಗಂಗವ್ವ ಗಂಗಾಮಾಯಿ' ಬರೆಯೋದಕ್ಕೂ ಇಂಗ್ಲಿಷಿನಲ್ಲಿ ಪದ್ಯ ಬರೆಯೋದಕ್ಕೂ ಏನೂ ಫರಕು ಅನಿಸಲಿಲ್ಲವಾ?

**ಪು** : ಆ ಸಂತೋಷ ಬ್ಯಾರೆ. ಈ ಸಂತೋಷ ಬ್ಯಾರೆ. ನನ್ನ ಹೃದಯದ ಸಮೀಪಕ್ಕ ಇದ್ದದಕ್ಕೆ ಕನ್ನಡದೊಳಗೆ ಬರೀತೀನಿ. ಯಾವದು ಎಲ್ಲ ಕಡೆಗೆ ಹೋಗ್ಬಹುದೋ ಅದನ್ನ ಇಂಗ್ಲಿಷ್‌ದೊಳಗ ಬರೀತೀನಿ. ಅಲ್ಲಿ ಇಂಡಿಯಾ ಹ್ಯಾಗೆ ತರಬಲ್ಲೆ ಅಂತಂಬೋದನ್ನ ವಿಚಾರ ಮಾಡಿಕೋತ ಬರೀತೀನಿ.

**ಪ್ರ** : ಯಾಕೆ ನೀವು ನವ್ಯರ ಫಿಲಾಸಫಿ ಮೇಲೆ ಅಷ್ಟು ಹರಿಹಾಯ್ತೀರಿ?

**ಪು** : ಅವರ ಎಕ್ಸಿಸ್ಟೆನ್ಸಿಯಲಿಸಂ ಮೇಲೆ. ಇಟ್ ಈಜ್ ಎ ಫಿಲಾಸಫಿಕಲ್ ಡಿಸ್‌ಪೈರ್. ನಿರಾಶಾ. ನಾನು ಮತ್ತು ಜಗತ್ತು ಬ್ಯಾರೆಬ್ಯಾರೆ ಅಂತ ಭಾವನೆ ಬಂದ್‌ಬಿಡ್ತದೆ. ಆ ಭಾವನೆಯಿಂದ ಏಲಿನೇಶನ್ ಹುಟ್ತದೆ. ಈ ವಿಚಾರಸರಣಿ ಇಂಡಿಯಾಕ್ಕೆ ಬ್ಯಾಡ ಅಂತಿಳಕೊಂಡು.

**ಪ್ರ** : ನವ್ಯಸಾಹಿತ್ಯದಲ್ಲಿ ಚಂಪಾ, ಲಂಕೇಶ್, ತೇಜಸ್ವಿ ತರಹದ ಬೇರೆಬೇರೆ ಸಾಮಾಜಿಕ ಹಿನ್ನೆಲೆಯವರೂ ಇದ್ರು. ಇವರೆಲ್ಲರನ್ನ ಒಂದೇ ಚೌಕಟ್ಟಿನಲ್ಲಿ ನೋಡೋದು ಸರೀನಾ?

**ಪು** : ಸಾಧಾರಣ ಒಳ್ಳೇ ಮನುಷ್ಯರೂ ನವ್ಯಪ್ರೇರಣೆಯಿಂದ ಹಾದಿಬಿಟ್ರು. ತಮ್ಮ ಜೀವನ ಸುತ್ತಲ ಇದ್ದಂಥ ಪರಿಸರ ನೋಡ್ಕೊಂಡು ಬರದಿದ್ರೆ ಎಷ್ಟೋ ಚೆನ್ನಾಗಿ ಬರೀತಿದ್ರು. ತಮ್ಮ ಪರಿಸರಾನ ರಿಜೆಕ್ಟ್ ಮಾಡಿ ಯಾರಯಾರ ಬರದಾರೋ ಅವರ ಕಡಿಂದ ಒಳ್ಳೇ ಸಾಹಿತ್ಯ ಶಕ್ಯ ಇಲ್ಲ ಅಂತ ನನ್ನ ಅಭಿಪ್ರಾಯ.

**ಪ್ರ** : ಒಂದು ಕಡೆ ಕಾಫ್ಕ ಕಾಮೂ ನಮಗೆ ಕಲಿಸಬೇಕಾದ್ದು ಏನೂ ಇಲ್ಲ ಅಂತೀರಿ. ಇದು ಯಾವರ್ಥದಲ್ಲಿ?

**ಪು** : ಎಲ್ಲರೂ ಹೀಗೆ ಏಲಿನೇಟೆಡ್ ಆದ್ರೆ ಬೇರುಬಿಟ್ಟಂಥ ಜನ ಎಲ್ಲಿ ಹೋಗ್ಬೇಕು? ಯಾವತ್ತೂ ಜೀವನ ಹಂಗೆ ಇರೋದಿಲ್ಲ. ಜೀವನ ಅಡ್ಜಸ್ಟ್‌ಮೆಂಟ್ ಕಲಿಸ್ತದೆ ಹೊರತು ಏಲಿಯನೇಶನ್ ಕಲ್ಸೋದಿಲ್ಲ. ಸಾರ್ತ್ರೆ ಸಾಯಬೇಕಾದ್ರೆ 'ನಾ ಹೇಳಿದ್ದೆಲ್ಲ ಸುಳ್ಳು' ಅಂತ ಹೇಳಿದ (ನಗು).

**ಪ್ರ** : ಅಬ್ಸರ್ಡಿಟಿ, ಪರಕೀಯತೆಗಳು ಯೂರೋಪಿನಲ್ಲಿ ರಾಜಕೀಯ ಅಭಿವ್ಯಕ್ತಿಗಳೂ ಆಗಿದ್ದವು.

**ಪು** : ಹೌದೌದು, ನಿಜವಾಗಲೂ ಪೊಲಿಟಿಕಲ್ ಎಕ್ಸ್‌ಪ್ರೆಶನ್ನೇ. ಆದ್ರೆ ಹೇಳೋದು ಕಾಂಟೆಕ್ಸ್ಟು ಸಾಹಿತ್ಯದೊಳಗೆ ಮಿಕ್ಸ್ ಮಾಡ್‌ಬಿಟ್ಟಾರ. 'ಚೋಮನ ದುಡಿ'ಯ ಚೋಮನ ಏಲಿಯನೇಶನ್ನು ನಿಜವಾದ ಏಲಿಯೇಶನ್ನು. ಆದರೆ ಆರಾಮು ಇದ್ರೂ ಏಲಿನೇಶನ್. ಇದು ಭ್ರಾಂತಿ.

**ಪ್ರ** : ೭೦, ೮೦ರ ದಶಕಗಳಲ್ಲಿ ಬೇರೊಂದು ಬಗೆಯ ಸಾಹಿತ್ಯ ಕನ್ನಡದಲ್ಲಿ ಬಂತು. ಅದು ಹೇಗಿದೆ?

**ಪು** : ಚೆನ್ನಾಗಿದೆ, ಈಗ ದೇವನೂರ ಮಹಾದೇವ. ಫಸ್ಟ್‌ಕ್ಲಾಸ್ ಲೇಖಕ. ಅವರ 'ಕುಸುಮಬಾಲೆ' ಭಾಳ ಚೆನ್ನಾಗಿದೆ. ಅದು ಅರ್ಥ ಆಗೋದು ಸ್ವಲ್ಪ ಕಠಿಣ. ಆದ್ರೆ ಒಂದು ಕೇಂದ್ರ ಘಟನೆ ಅದೆಯಲ್ಲ, ಚೆನ್ನನ ಸಾವು, ಅದನ್ನ ನಡುಹಾಕಿದಾರೆ. ಕತೆಯ ಕೊನೆಗಲ್ಲ, ಅದಕ್ಕಾಗಿ ಆ ಕಥೆ ಏನದೆ, ಆದರ ನ್ಯಾಚುರಲ್ ಸ್ಟ್ರೀಮ್ ಕ್ಲೈಮಾಕ್ಸ್‌ಕ್ಕ ಮುಟ್ಟಬೇಕಾಗಿತ್ತಲ್ಲ ಕ್ಲೈಮಾಕ್ಸ್ ನಡುಬರ್ತದೆ. ನಡು ಬರಬಾರದು.

**ಪ್ರ** : ನಡುವೆ ಹಾಕಿರಬಹುದು. ಹಾಕಿ ಗೆದ್ದಿದ್ದಾರೋ ಇಲ್ಲವೋ ಅನ್ನೋದು ಮುಖ್ಯ.

**ಪು :** ಈ ಪ್ರಯೋಗ ಓದುಗರಿಗೆ ಸ್ವಲ್ಪ ಕಷ್ಟ ಆಗ್ತದೆ. ಆದ್ರೆ ದೇವನೂರ ಧೈರ್ಯವಂತ.

**ಪ್ರ :** ಈ ತಲೆಮಾರಿನಲ್ಲಿ ಮತ್ತೆ ಯಾರು ನಿಮ್ಮ ಪ್ರಿಯ ಲೇಖಕರು?

**ಪು :** ತೇಜಸ್ವಿ. ಅವರು ಸ್ವಲ್ಪ ಕನ್‌ವೆನ್‌ಶನಲ್. ಯೂಶುವಲ್ ರೀತಿಂದ ಬರೀತಾರೆ. ಆದ್ರೆ ಚೆನ್ನಾಗಿ ಬರೀತಾರೆ. ಮಟೇರಿಯಲ್ಲೇ ಸಾಲಿಡ್ ರೂಪದಲ್ಲಿ ಇರ್ತದೆ.

**ಪ್ರ :** ಲಂಕೇಶ್ ?

**ಪು :** ಲಂಕೇಶ್‌ನ ಹೆಚ್ಚು ಓದಿಲ್ಲಪ್ಪ. ಅವರ ಕೆಲವು ಕತೆ ನನಗೆ ಅಷ್ಟು ಹಿಡಿಸಲಿಲ್ಲ. ಒಂದೇ ಒಂದು ಕತೆ ಚೆನ್ನಾಗಿ ಅನಿಸ್ತು. ಬರದೆ ಅವರಿಗೆ ಈ ಕತೆ ಚೆನ್ನಾಗಿದೆ ಅಂತ. ಅವರೇನು ರೆಸ್ಪಾಂಡ್ ಮಾಡ್ಲಿಲ್ಲ. ಏಳೆಂಟು ಕತೆಗಳ ನಡುವೆ ಒಂದ್ ಕತೆ ಚೆನ್ನಾಗಿದೆ ಅಂದ್ರೆ ಸ್ವಲ್ಪ ಬೇಸರ ಆಗಿರ್ಬೇಕು.. (ನಗು)

**ಪ್ರ :** ಎಚ್. ಎಸ್. ಶಿವಪ್ರಕಾಶ್?

**ಪು :** ಹಾಂ. ಬಹಳ ಚೆನ್ನಾಗಿದಾರೆ. ಅವರ 'ಮಂಟೆಸ್ವಾಮಿ ಪ್ರಸಂಗ' ಎಂಥಾ ನಾಟಕ? ದೊಡ್ಡ ಪ್ರೈಜ್ ಸಿಗಬೇಕು ಅವ್ನಗ. ಕನ್ನಡ ಮಂದಿ ಓದೋದಿಲ್ಲ ಅಂತಿಳಕೊಂಡು. ನಾನು ನೋಬಲ್ ಪ್ರೈಜ್ ಸಿಕ್ಕ ಅನೇಕ ಪುಸ್ತಕಗಳನ್ನು ಓದಿದೀನಿ. ಈ ಗುಣಗಳು ಅಲ್ಲಿಲ್ಲ.

**ಪ್ರ :** ಏನ್ ಗುಣ ಸಾರ್ ಅದು?

**ಪು :** ಮಂಟೆಸ್ವಾಮಿ ಒಳಗ 'ಹರಿಜನ್ ಕಾಂಟ್ರಿಬ್ಯೂಶನ್ ಟು ಮಿಡೀವಲ್ ಇಂಡಿಯನ್ ಥಾಟ್' ಅಂಬೋದು ಅಲ್ಲೇ ಸಿಕ್ತದ ನಿಮಗೆ. ಮಂಟೆಸ್ವಾಮಿ ಅಂತಂಬೋವ ಯಾವ ಜಾತಿ ನಮಗ್ಗೊತ್ತಿಲ್ಲ. ಅಂಥ ಮನಷ್ಯನ ಕಡೆ ಇಂಥಾ ವಿದ್ಯಾ, ಈ ಗುಣ, ಅವನ ಮಾತ್ನೊಳಗ ಫಿಲಾಸಫಿ ಸಿಕ್ತದೆ. ಕಾರ್ಯದೊಳಗ ನಿಜವಾದ ಅವಧೂತ ಅಂಬೋ ಗುಣ ಸಿಕ್ತದ.

**ಪ್ರ :** ಮೈಸೂರು ಸೀಮೆಯಲ್ಲಿ ಮಂಟೆಸ್ವಾಮಿಯ ದೊಡ್ಡ ಪರಂಪರೇನೇ ಇದೆ. ಮಂಟೆಸ್ವಾಮಿ ಒಕ್ಕಲುಗಳು ಹಾಡುವ ದೊಡ್ಡ ಕಾವ್ಯಗಳು ಪ್ರಕಟವಾಗಿವೆ.

**ಪು :** ಇಲ್ಲ, ನನಗವು ಸಿಕ್ಕಿಲ್ಲ.

**ಪ್ರ :** ಕರ್ನಾಟಕ ಸಂಸ್ಕೃತಿ ಅಧ್ಯಯನಗಳಲ್ಲಿ ಈ ಅನುಭಾವಿ ಪಂಥಗಳ ಬಗ್ಗೆ ಒಂದು ಬಗೆಯ ನಿರಾಸಕ್ತಿ ಇದೆ.

**ಪು :** ನೆಗ್ಲೆಕ್ಟ್ ಮಾಡಿದಾರೆ. ಮೂಲತಃ ಇವು ಕಲ್ಟ್ ಸಂಪ್ರದಾಯ. ಗುಪಿತ ಸಮಾಜಗಳು. ಮತ್ತೊಂದು ಕಾರಣ ಅಂತಂದ್ರೆ, ನಮ ಸಮಾಜ ಎಷ್ಟು ಟ್ರಾನ್ಸ್‌ಪರೆಂಟ್ ಇತ್ತೂ ಅಂತಂದ್ರೆ, ಮ್ಯಾಲಿಂದ ಬಂದಂಥ ತತ್ವಜ್ಞಾನ ಕೆಳಗೆ ಇಳಿದುಬಿಡುತ್ತಿತ್ತು. ಹಳ್ಳಿ ಮಂದಿ ಮಾತ್ ಕೇಳ್ರಿ ನೀವು. ಫಿಲಾಸಫಿಗೆ ಮಹತ್ವ ಕೊಡಬೇಕಂತಂಬೋದೇ ನಮ ಆಧುನಿಕ ಸ್ಕಾಲರ್‌ಗಳಿಗೆ ಒಪ್ಪಿಗೆ ಆಗೋದಿಲ್ಲ. ಇದು ಪಾಶ್ಚಾತ್ಯ ಶಿಕ್ಷಣದ ಪ್ರಭಾವ.

**ಪ್ರ :** ಅವಧೇಶ್ವರಿಯ ಮುನ್ನುಡಿಯಲ್ಲಿ ಕರ್ನಾಟಕ ಸಂಸ್ಕೃತಿಗೆ ಕೊಡುಗೆ ಕೊಟ್ಟ ಮಹನೀಯರ ಹೆಸರು ಹೇಳಿದ್ದೀರಿ. ಶಂಬಾ ಹೆಸರು ಬಿಟ್ಟಿದ್ದೀರಿ. ಯಾಕೆ ಅಂತ ಕುತೂಹಲವಾಗಿದೆ.

**ಪು :** ಹಿ ಈಜ್ ಟೂ ಇಂಟಲೆಕ್ಚುವಲ್ ಅಂತ ಅನಿಸತದ ನನಗ.

**ಪ್ರ :** ಇದೊಂದು ಸಮಸ್ಯೇನಾ?

**ಪು :** ಎಲ್ಲ ಪ್ರಾಬ್ಲೆಮ್ಸ್ ಇಂಟೆಲೆಕ್ಚುವಲಿ ಕ್ರಿಯೇಟೆಡ್. ಪ್ರಶ್ನೆ ಹುಟ್ಟಿಸಿರೋದು ತಾವೆ, ಆ ಪ್ರಶ್ನೆಗೆ ಉತ್ರ ಕೊಟ್ಟಿರೋದೂ ತಾವೆ. ಹೀಗಾಗಿ ಶಂಬಾ ಎಷ್ಟು ಚೆನ್ನಾಗಿ ಬರದರೂ ಬೆಳಕಿಗೆ ಬರಲಿಲ್ಲ. ತಾನು ಅಜ್ಞಾನಿಯಂತೆ ಪ್ರಕಟಮಾಡಿಕೊಂಡು ಯಾರು ಬರೀತಾರೆ, ಅವರ ಗುಣ ಬ್ಯಾರೆ ಇರ್ತದೆ. ಈ ಮಂಟೆಸ್ವಾಮಿ ಇಂತಹವನು. ಅಲ್ಲಮ ಪ್ರಭು ಇದ್ದಾನೆ. ಮನುಷ್ಯ ಯಾರೂ ಇಂಟೆಲೆಕ್ಚುವೆಲ್ ಆಗಬಾರದು. ಅಂತಂದ್ರೆ, ನಮ್ಮ ಮೂಲಶಕ್ತಿಯನ್ನ ಇಂಟಲೆಕ್ಚುಯಾಲಿಟೀನೇ ಕಡಿಮೆ ಮಾಡ್ತದೆ.

**ಪ್ರ :** ನಮ್ಮೆದುರಿನ ಜಗತ್ತನ್ನ ಅರ್ಥಮಾಡಿಕೊಳ್ಳೋದಕ್ಕೆ ರ್‍ಯಾಶನಾಲಿಟಿಯ ಅವಶ್ಯಕತೆ ಇಲ್ಲ ಅಂತೀರಾ?

**ಪು :** ಯೆಸ್, ಅವಶ್ಯ ಅದೆ. ಈಗ ಬೇಂದ್ರೆಯವರ ಅರ್ಧದಷ್ಟು ಕಾವ್ಯ ಅರ್ಥ ಆಗೋದಿಲ್ಲ.




**ಪ್ರ :** ಕಾರಂತರಿಗೆ ಇದನ್ನು ಹೇಗೆ ಅನ್ವಯಿಸಬಹುದು ?

**ಪು :** ಒಂದ್ ಮೂರ್ನಾಕು ಕಾದಂಬರಿಗಳನ್ನು ಬಿಟ್ಟು ನಮಗೆ ಒಪ್ಪಿಗೆ ಆಗೋದಿಲ್ಲ. 'ಬೆಟ್ಟದ ಜೀವ' 'ಚೋಮನ ದುಡಿ' 'ಅಳಿದ ಮೇಲೆ' ಇವು ನಿಜವಾದ ಅವರ ಕಾಂಟ್ರಿಬ್ಯೂಶನ್ಸ್.

**ಪ್ರ :** ನಮ್ಮ ಆಧುನಿಕ ಫಿಕ್ಷನ್ ಇದೆಯಲ್ಲ, ಈ ಗದ್ಯ, ಈ ಕಾದಂಬರಿ, ಇದರ ಮೂಲಶಕ್ತಿ ರ್‍ಯಾಶನಾಲಿಟಿ ಅಲ್ಲವಾ ?

**ಪು :** ಹ್ಞಾ, ಹಾಗೆ ಹೇಳಬಹುದು. ಭೈರಪ್ಪ ಎಲ್ಲಿ ಪ್ರಯತ್ನಪೂರ್ವಕವಾಗಿ ರ್‍ಯಾಶನಲ್ ಗುಣ ತರ್ಲಿಕ್ಕೆ ಪ್ರಯತ್ನ ಮಾಡ್ತಾರೋ ಆವಾಗ ಫೇಲ್ ಆಗ್ತಾರೆ. ಉದಾಹರಣೆಗೆ 'ದಾಟು'. ಅನಂತಮೂರ್ತಿ ಕತೆ ಒಳಗೆ ಇದ್ದಂಥ ಗುಣ ಅವರ ಕಾದಂಬರಿಗಳೊಳಗ ಇಲ್ಲ. 'ಸೂರ್ಯನ ಕುದುರೆ' ಎಂಥಾ ಕತಿ!? ಹಾಗೇ ನಮ್ಮ ಮಾಸ್ತಿ ಭಾಳ ರ್‍ಯಾಶನಲ್ ಮನುಷ್ಯ. ಎಲ್ಲಿ ರ್‍ಯಾಶನಾಲಿಟಿ ತಂದಾರೊ ಅಲ್ಲಿ ಅಷ್ಟು ಒಳ್ಳೆದಾಗಿಲ್ಲ. ರ್‍ಯಾಶನಾಲಿಟಿ ಹೊಡೆದು ತಳಗ, ಅದನ್ನ ಮೀರಿ ಬರೀಲಿಕ್ಕೆ ಪ್ರಯತ್ನ ಮಾಡಬೇಕು. ಅದು ಎಲ್ಲಾರಿಗೂ ಶಕ್ಯ ಆಗೋದಿಲ್ಲ.

**ಪ್ರ :** ನಿಮ್ಮ ಕಾದಂಬರಿಗಳು ಸ್ತ್ರೀಯರ ಹೆಸರಲ್ಲಿವೆ. ನಿಮ್ಮ ಕತೆಗಳಲ್ಲಿ ಕೂಡ ಸ್ತ್ರೀಯರು ಬರತಾರೆ. ಬದುಕನ್ನು ಎದುರು ಹಾಕ್ಕೊಂಡು ಸೆಣಸಾಟ ಮಾಡುವ ಧೀಮಂತ ಸ್ತ್ರೀಯರು. 'ಗಂಗಾಮಾಯಿ'ಯ ಗಂಗವ್ವ. 'ಅವಧೇಶ್ವರಿ'ಯ ಪುರುಕುತ್ಸಾನಿ. 'ನಟನಾರಾಯಣಿ'ಯ ಜುಬೇದ ಇವರೆಲ್ಲ. ಈ ಸ್ತ್ರೀಯರನ್ನು ಕಾಣಿಸುವಾಗ ನಿಮ್ಮ ಪ್ರೇರಣೆ ಏನು?

**ಪು :** ನಮ್ಮ ಭಾರತೀಯ ಸ್ತ್ರೀ ಬಗ್ಗೆ ೧೯ನೇ ಶತಮಾನದ ಮೆಕಾಲೆ ಬರದಂಥ ಮಾತುಗಳು ನೆನಪಿಗೆ ಬರ್ತಾವ. 'ದಿ ಪೊಜಿಶನ್ ಆಫ್ ದಿ ಇಂಡಿಯನ್ ವಿಮೆನ್ ಈಜ್ ಅಟ್ ಹೋಂ' ಅಂತಿಳಕೊಂಡು ಬರದಾನ. ಅವರಿಗೆ ಶಿಕ್ಷಣ ಇರೋದಿಲ್ಲ ಅಷ್ಟೇ ಹೊರತು, ಎಲ್ಲ ರೀತಿಂದ ಗಂಡಸಿನಷ್ಟೆ ಗುಣ ಅವರಿಗೆ ಇರ್ತದ. ಒಮ್ಮೊಮ್ಮೆ ಅವನಕ್ಕಿಂತ ದೊಡ್ಡ ಗುಣಗಳೂ ಇರ್ತಾವೆ. ಅವರಿಗೆ ಮಾತಾಡ್ಲಿಕ್ಕೆ ಸ್ಕೋಪ್ ಇಲ್ಲಾಂತ ಸಣ್ಣಪಾತ್ರಗಳು ಆಗತಾವೆ. ನಮ್ಮಜ್ಜಿ ಸಾಲಿಡ್ ಹೆಣಮಗಳು. ಕಟಬಾಯಿಗೆ ತಿವೀತಿದ್ದಳು. ಅಜ್ಜನಕಿಂತ ದೊಡ್ಡಾಕಿ. ನಮ್ಮ ಸ್ತ್ರೀಯರಲ್ಲಿರೋ ದೊಡ್ಡಗುಣ ವಿಜಡಂ. ಇಂಟೆಲಿಜೆನ್ಸ್ ಅಲ್ಲ. ಬೇಂದ್ರೆಯವರ 'ಸಖೀಗೀತ'ದೊಳಗ ಒಂದು ಮಾತ್ ಬರ್ತದ. 'ನೀವು ಬುದ್ಧಿವಂತರು ಹೌದು, ಆದ್ರೆ ನಾವೇನ್ ಮಾಡಬೇಕು'? ಚಾಲೆಂಜ್ ಮಾಡಿ ಕೇಳತಾಳೆ ಗಂಡನಿಗೆ. ದಟ್ ಕೈಂಡ್ ಆಫ್ ಚಾಲೆಂಜ್ ಇಂಡಿಯನ್ ವುಮನ್ ಪೋಜಸ್ ಬಿಫೋರ್ ಹರ್ ಹಸ್‌ಬಂಡ್. ಇದನ್ನ ಸ್ವಲ್ಪಮಟ್ಟಿಗೆ ತಂದೀನಿ. ಪೂರ್ತಿ ಅಲ್ಲ.

ಬಹಳ ಹೊತ್ತಿನವರೆಗೆ ಮಾತಾಡಿದ ಪುಣೇಕರರು ದಣಿದರು. ಸಂಜೆಯಾಗುತ್ತಿತ್ತು. ಮನೆಯ ಮುಂದಿನ ಮರಗಳಲ್ಲಿ ದಿನವೆಲ್ಲ ಅಲೆಯಲು ಹೋಗಿದ್ದ ಹಕ್ಕಿಗಳು ಬಂದು ಗೂಡುಸೇರುವ ಮುನ್ನ ಕಲಕಲ ಎಬ್ಬಿಸಿದ್ದವು. ನಮಸ್ಕಾರ ಮಾಡಿ ಬಂದೆ. ಅಂದು (೧. ೮.೯೮) ಅವರನ್ನು ನಾನು ಕಂಡದ್ದು ಅದೇ ಕೊನೆ. ನನ್ನ ಗುರುಗಳು ಯಾರಿಗೂ ಅರಿಯದ ರೀತಿಯಲ್ಲಿ ಇದ್ದು ನಿರ್ಗಮಿಸಿದರು.

ಕೆಲವು ತಿಂಗಳ ಹಿಂದೆ ಕನ್ನಡಿಗರ ರಾಜಕೀಯ ಗುರುವಾಗಿದ್ದ ಪ್ರೊ. ನಂಜುಂಡಸ್ವಾಮಿಯವರು, ಪಾಠವಿನ್ನೂ ಬಾಕಿಯಿರುವಾಗಲೇ ತರಗತಿ ಬಿಟ್ಟು ನಿರ್ಗಮಿಸಿದರು. ಈಗ ಪಾಠವೆಲ್ಲ ಮುಗಿಸಿದ್ದ ಮತ್ತೊಬ್ಬ ಗುರುವಿನ ನಿರ್ಗಮನವಾಗಿದೆ. ವಸಾಹತುಶಾಹಿಯ ನೆರಳು ಬುದ್ಧಿಯ ಮೇಲೆ ಕವಿದು ನಮ್ಮ ಸ್ವಂತಿಕೆಯನ್ನು ನಾವೇ ಕಾಣದಂತಾಗಿದೆ ಎಂದು ಕಳವಳಪಡುತ್ತ ಅವರು ಎತ್ತಿದ ಪ್ರಶ್ನೆಗಳು ಜೀವಂತವಾಗಿವೆ. ಅವರು ಕೊಟ್ಟುಹೋಗಿರುವ ಅದ್ಭುತ ಕಾದಂಬರಿ 'ಗಂಗಾಮಾಯಿ' ಜೀವಂತವಾಗಿದೆ. ಇವಂತೂ ನಿರ್ಗಮಿಸುವ ಪ್ರಶ್ನೆಯೇ ಇಲ್ಲ.

**ಡಾ॥ ರಹಮತ್ ತರೀಕೆರೆ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬, ಬಳ್ಳಾರಿ ಜಿಲ್ಲೆ



ಬಹುಮಾಧ್ಯಮ ಕಲೆ

# ಅಪೂರ್ವ ಕಲಾವಿದ ರಾಮದಾಸ್ ಅಡ್ಯಂತಾಯ



ಟೆರಕಾಟದಲ್ಲಿ ಮೂಡಿದ ಭಂಗಿ

ಎಲೆಮರೆಯ ಕಾಯಿಯಂತಿದ್ದು, ಯಾವ ಪ್ರಚಾರದ ಸುಳಿಗೂ ಸಿಲುಕದೆ ಕಲಾ ಸೇವೆಯಲ್ಲಿ ತೊಡಗಿರುವವರಲ್ಲಿ ರಾಮದಾಸ್ ಅಡ್ಯಂತಾಯ ಒಬ್ಬ ಅಪರೂಪದ ಕಲಾವಿದ.

ಕಾರ್ಖಾನೆಗಳಲ್ಲಿ ಕೆಲಸ ಮಾಡುತ್ತಲೇ ರಾತ್ರಿ ಶಾಲೆಯಲ್ಲಿ ಓದು ಮುಂದುವರಿಸಿದ ರಾಮದಾಸ್, ಕೆನ್ ಕಲಾಶಾಲೆಯಲ್ಲಿ ಕಲಾವಿದ ಹಡಪದ್‌ರ ಪ್ರಭಾವಕ್ಕೆ ಒಳಗಾಗಿ ಅಲ್ಲೇ ಪದವಿ ಮುಗಿಸಿ ಕೆಲಕಾಲ ಬಿಷಪ್ ಕಾಟನ್ ಶಾಲೆಯಲ್ಲಿ ಚಿತ್ರಕಲಾ ಶಿಕ್ಷಕರಾಗಿಯೂ ಕಾರ್ಯ ನಿರ್ವಹಿಸಿದ್ದಾರೆ.

ಟೆರಕಾಟ, ಜಲವರ್ಣ, ತೈಲವರ್ಣ ಮಾಧ್ಯಮಗಳಲ್ಲಿ ರಚಿತವಾಗಿರುವ ಇವರ ಕಲಾಕೃತಿಗಳು ರವೀಂದ್ರನಾಥ ಠಾಗೋರ್ ಮುಂತಾದ ಕಲಾವಿದರ ಚಿತ್ರಗಳ ಜೊತೆಗೆ ಪ್ರದರ್ಶನಗೊಂಡಿರುವುದು ಇವರ ಕಲಾಕೃತಿಗಳ ಮೌಲ್ಯವನ್ನು ತೋರುತ್ತದೆ.

ಮಂಜುನಾಥ ಎಚ್.
'ಮುಂದಲಹಟ್ಟಿ', ಸಿದ್ಧರಾಮನ ಹುಂಡಿ, ಯಡಕೊಳ ಅಂಚೆ, ಮೈಸೂರು



ಪ್ರಕೃತಿ (ತೈಲವರ್ಣ)



ಪ್ರಕೃತಿ (ತೈಲವರ್ಣ)



[illegible]

# ಪುಸ್ತಕ ಲೋಕಕ್ಕೆ ನವಕರ್ನಾಟಕ



### ಬಿಡುವಿನ ವೇಳೆಯ ಸದುಪಯೋಗ ಹೇಗೆ ?
*ಕಮಲಾ ರಾಮಸ್ವಾಮಿ*

ನಾವು ಸಾಕಷ್ಟು ಸಮಯ ಪೋಲು ಮಾಡಿದರೂ 'ಅಯ್ಯೋ! ಟೈಂ ಎಲ್ಲಿದೆ ಮಾರಾಯ' ಅಂಥ ಬಡಬಡಿಸುತ್ತೇವೆ. ಸಿಕ್ಕ ಸಮಯವನ್ನು ಸಮರ್ಥವಾಗಿ, ಸೃಜನಾತ್ಮಕವಾಗಿ ಬಳಸಿಕೊಳ್ಳುವ ಮನೋಭಾವವಿದ್ದಲ್ಲಿ ಪ್ರತಿಕ್ಷಣ ಕೂಡ ಅಮೂಲ್ಯವಾದುದೆ. ಬಿಡುವಿನ ವೇಳೆಯಲ್ಲಿ ಕಾಲಹರಣ ಮಾಡುವ ಬದಲು ಈ ಪುಸ್ತಕ ಓದಿ ಸದುಪಯೋಗ ಪಡೆದುಕೊಳ್ಳಿ.

### ಕಾಲೇಜು ವಿದ್ಯಾರ್ಥಿನಿಯರ ವ್ಯಕ್ತಿತ್ವ ವಿಕಾಸ ಹೇಗೆ ?
*ಡಾ|| ಪಿ. ಎಸ್. ಗೀತಾ*

ಕಾಲೇಜು ಅಂದಕೂಡಲೆ ಅಲ್ಲೊಂದು 'ಜೋಶ್' ಕಂಡುಬರುತ್ತದೆ. ಓದು, ಆತ್ಮೀಯರ ಒಡನಾಟ, ತುಂಟಾಟ ಅಲ್ಲಿ ಸಹಜ. ಈ ನಡುವೆ ವಿದ್ಯಾರ್ಥಿಗಳ ವ್ಯಕ್ತಿತ್ವ ಅಲ್ಲೆಲ್ಲಿಯೋ ಕಳೆದುಹೋಗಬಾರದು. ತಮ್ಮ ಬದುಕನ್ನು ಸುಂದರವಾಗಿ ರೂಪಿಸಿಕೊಳ್ಳಲು ಅವರು ಚಿಂತಿಸಬೇಕು. ಆ ಚಿಂತನೆಗೆ ಒತ್ತಾಸೆಯಾಗಿ ನಿಲ್ಲಬೇಕಾದವರು ಹೆತ್ತವರು ಮತ್ತು ಅಧ್ಯಾಪಕರು. ಇವರು ಮಕ್ಕಳ ಬಗ್ಗೆ ಸಹಾನುಭೂತಿಯಿಂದ ವರ್ತಿಸುವುದು ಅಗತ್ಯವಾಗುತ್ತದೆ. ಆ ದಿಸೆಯಲ್ಲಿ ಈ ಕೃತಿ ಮಾರ್ಗದರ್ಶಿಯಾಗಿದೆ.





### ಅನ್ಯೋನ್ಯ ದಾಂಪತ್ಯ ಹೇಗೆ ?
*ಡಾ|| ಸಿ. ಆರ್. ಚಂದ್ರಶೇಖರ್*

ಗಂಡ-ಹೆಂಡತಿ ಪರಸ್ಪರ ಹೊಂದಿಕೊಂಡು ಪ್ರೀತಿ-ವಿಶ್ವಾಸದಿಂದ ಬಾಳಲು ಕಲಿಯಬೇಕು. ಇಲ್ಲದಿರೆ ದಾಂಪತ್ಯ ಸೂತ್ರ ಕಳೆದ ಗಾಳಿಪಟವಾಗುತ್ತದೆ. ಅಲ್ಲಿ ಯಾರಿಗೂ ನೆಮ್ಮದಿಯಿರುವುದಿಲ್ಲ. ದಾಂಪತ್ಯವನ್ನು ಅನ್ಯೋನ್ಯವಾಗಿಸಿ, ಪರಸ್ಪರ ಸಾಮರಸ್ಯದಿಂದ ಬಾಳುವುದು ಹೇಗೆ? ಸಾಮರಸ್ಯಕ್ಕೆ ಕುಂದುಂಟಾಗುವ ಸಂದರ್ಭ ಬಂದಾಗ ಏನು ಮಾಡಬೇಕು ? ಸಮಸ್ಯೆಗಳನ್ನು ಯಾರಲ್ಲಿ ಹೇಳಿಕೊಂಡು ಪರಿಹಾರಕ್ಕೆ ಪ್ರಯತ್ನಿಸಬೇಕು ? ಈ ಪುಸ್ತಕ ಓದಿ ತಿಳಿಯಿರಿ.

### ಮನಸ್ಸೇ ನೀ ಪ್ರಶಾಂತವಾಗಿರು
*ಡಾ|| ಸಿ. ಆರ್. ಚಂದ್ರಶೇಖರ್*

ಮನಸ್ಸು ತಿಳಿಯಾದ ಪ್ರಶಾಂತ ಕೊಳದ ಹಾಗಿರಬೇಕು. ಅಲ್ಲಿ ಪುಟ್ಟದೊಂದು ಕಲ್ಲು ಬಿದ್ದರೂ ಅದು ಕದಡಿ ಬಗ್ಗಡವಾಗುತ್ತದೆ. ಮನಸ್ಸು ಗೊಂದಲದ ಗೂಡಾಗುತ್ತದೆ. ಹಾಗಾದರೆ ಇಂದಿನ ಈ ಗಡಿಬಿಡಿಯ ಜೀವನದಲ್ಲಿ ಮನಸ್ಸು ಪ್ರಶಾಂತವಾಗಿರಲು ಏನು ಮಾಡಬೇಕು ? ಏನಾದರೂ ಸರಳ ಕ್ರಮಗಳಿವೆಯೇ ? ಅವು ಯಾವುವು ಎಂಬುದನ್ನು ಕುರಿತ ಪುಸ್ತಕ ಇದು.





### ನಮ್ಮ ಆಹಾರ ಹೇಗಿರಬೇಕು ?
*ಡಾ|| ನಾ. ಸೋಮೇಶ್ವರ*

'ಊಟ ಬಲ್ಲವನಿಗೆ ರೋಗವಿಲ್ಲ' ಅನ್ನುವ ಮಾತಿದೆ. ಆರೋಗ್ಯವಂತರಾಗಿರಲು ಉತ್ತಮ, ಹಿತಮಿತ ಆಹಾರ ಸೇವನೆ ಅಗತ್ಯ. ಯಾವುದನ್ನು ತಿನ್ನಬೇಕು ? ಯಾವುದನ್ನು ಬಿಡಬೇಕು ಎನ್ನುವ ಪರಿಜ್ಞಾನವಿಲ್ಲದಿದ್ದರೆ, ಸಿಕ್ಕಿದ್ದನ್ನು ಮುಕ್ಕಿದರೆ ದೇಹ ರೋಗದ ಗೂಡಾಗುತ್ತದೆ. ಹಾಗಾದರೆ ನಮ್ಮ ಆಹಾರ ಹೇಗಿರಬೇಕು ? ಸೇವನೆಯ ಮಧ್ಯೆ ಇರಬೇಕಾದ ಕಾಲದ ಅಂತರ ಎಷ್ಟು? ಸಮತೂಕದ ಆಹಾರವೆಂದರೇನು ? ಯಾವ ಆಹಾರ ನಮಗೆ ಒಳ್ಳೆಯದು ? ಓದಿ ನೋಡಿ.

### ನೀವು ಚೆನ್ನಾಗಿ ಆಲೋಚಿಸಬಲ್ಲಿರಾ ?
*ಡಾ|| ಜಾನಕಿ ಸುಂದರೇಶ್*

ಪ್ರತಿಯೊಂದು ಮನಸ್ಸು ಸಕಾರಾತ್ಮಕವಾಗಿ, ಸೃಜನಶೀಲವಾಗಿ ಆಲೋಚಿಸಲು ಕಲಿಯಬೇಕು. ಇದರಿಂದ ಜೀವನ, ಸಮಾಜ ಮತ್ತಷ್ಟು ಸಹ್ಯವಾಗಿ ಹೊಸ ಆವಿಷ್ಕಾರಗಳಿಗೆ ನಾಂದಿಯಾಗುತ್ತದೆ. ಇಂತಹ ಆರೋಗ್ಯಪೂರ್ಣ ಆಲೋಚನೆಗಳು ಯಾವುವು ? ನಕಾರಾತ್ಮಕ ಆಲೋಚನೆಗಳ ನಿವಾರಣೆ ಹೇಗೆ ? ಚೆನ್ನಾಗಿ ಆಲೋಚಿಸಲು ಬಯಸುತ್ತೀರಾ ? ಈ ಕೃತಿ ಓದಿ.



ಆಯಾ ಕ್ಷೇತ್ರಗಳಲ್ಲಿ ಅನುಭವಿಗಳಾದ, ಸಮರ್ಥ ಲೇಖಕರು
ರಚಿಸಿರುವ 12 ಕೃತಿಗಳು – ಖ್ಯಾತ ಚಿತ್ರಕಾರರ
ಸಂದರ್ಭೋಚಿತ ಚಿತ್ರಗಳ ಸಹಿತ.




**ತಲಾ ರೂ. 40 ಬೆಲೆಯ,**
**ರೂ. 480 ಮೌಲ್ಯದ ಪುಸ್ತಕಗಳು**
**ಪ್ರಕಟಣಪೂರ್ವ ರಿಯಾಯಿತಿ**
**ಬೆಲೆ ರೂ. 350ಕ್ಕೆ ಲಭ್ಯ !**

ಅನಾವರಣ ದಿನಾಂಕದ ನಂತರ ಈ ರಿಯಾಯಿತಿ ಲಭ್ಯವಿಲ್ಲ

## ವ್ಯಕ್ತಿ ವಿಕಸನ ಮಾಲಿ



ಸಂಪಾದಕರು
ಡಾ|| ಸಿ. ಆರ್. ಚಂದ್ರಶೇಖರ್

# ಪ್ರಕಾಶನದ ಹೆಮ್ಮೆಯ ಕೊಡುಗೆ





## ನೀವು ಯಶಸ್ವೀ ಗೃಹಿಣಿಯೇ ?

*ಶಾಂತಾ ನಾಗರಾಜ್*

'ಹೆಣ್ಣು ಮನೆಯ ಕಣ್ಣು' ಎಂಬುದೊಂದು ಮಾತಿದೆ. ಸಂಸಾರ ಸುಸೂತ್ರವಾಗಿ ಸಾಗಲು ಅವಳ ಕೊಡುಗೆ ಅಪಾರ. ಆದರೆ ಹಲವು ಒತ್ತಡಗಳ ನಡುವೆ ಸಿಕ್ಕ ಗೃಹಿಣಿ ಮನಸ್ಸಿನ ಸ್ಥಿಮಿತತೆ ಕಳೆದುಕೊಂಡು ಒದ್ದಾಡಬೇಕಾದ ಸಂದರ್ಭಗಳು ಉಂಟಾಗಬಹುದು. ಅಂಥ ಒದ್ದಾಟದಿಂದ ಹೊರಬಂದು ಯಶಸ್ವಿ ಗೃಹಿಣಿಯಾಗಲು ಬಯಸಿದ್ದೀರಾ ? ಈ ಕೃತಿ ಓದಿ.

## ವೃದ್ಧಾಪ್ಯವನ್ನು ನಿಭಾಯಿಸುವುದು ಹೇಗೆ ?

*ಡಾ|| ಕೆ. ಆರ್. ಶ್ರೀಧರ್*

ವೃದ್ಧಾಪ್ಯವನ್ನು ಗೆದ್ದವರಾರ್ದೇಳಿ ? ಅದೊಂದು ಸಹಜ ಕ್ರಿಯೆ. ಆದರೆ ಅದರೊಳಗೆ ಸಿಕ್ಕಿ ನೋವಿನಿಂದ ನರಳುವವರೇ ಹೆಚ್ಚು. ಮುದಿತನ ಶಾಪವಲ್ಲ, ವ್ಯಕ್ತಿಯ ಜೀವನದಲ್ಲಿ ಅದೊಂದು ಅವಸ್ಥೆ. ವೃದ್ಧಾಪ್ಯವನ್ನು ಸಹ್ಯವಾಗಿಸಿಕೊಂಡು, ಜೀವನದ ಅಂತ್ಯಕಾಲವನ್ನು ಸುಖಮಯವಾಗಿಸಿಕೊಂಡು ಚಟುವಟಿಕೆಯಿಂದಿರುವ ನಿಟ್ಟಿನಲ್ಲಿ ಈ ಕೃತಿ ಅತ್ಯುಪಯುಕ್ತ.





## ಲೈಂಗಿಕ ಚಿಕಿತ್ಸೆ : ನೈಜ ಪ್ರಕರಣಗಳು

*ಡಾ|| ವಿನೋದ್ ಛೆಬ್ಬಿ*

ಆರೋಗ್ಯಕರ ಲೈಂಗಿಕ ಜೀವನ ಸುಖ ಸಂಸಾರಕ್ಕೆ ಭದ್ರ ಬುನಾದಿ. ಸಮಾಜದ ಸ್ವಾಸ್ಥ್ಯಕ್ಕೂ ಸಹಾಯಕ. ಕೆಲವೊಮ್ಮೆ ಇದು ಸಾಧ್ಯವಾಗದೆ ಹೋಗಬಹುದು. ಆಗ ತಜ್ಞರ ಸಲಹೆ, ಚಿಕಿತ್ಸೆ ಅಗತ್ಯವಾಗಬಹುದು. ಸಮಸ್ಯೆಗಳು ತಲೆದೋರಿದಾಗ ವೈದ್ಯರ ಸಲಹೆ ಚಿಕಿತ್ಸೆ ಪಡೆಯಲು ಸಂಕೋಚಪಡಬಾರದು. ಇಂಥ ಹಲವು ನೈಜ ಪ್ರಕರಣಗಳನ್ನು ವಿವರಿಸುವ ಕೃತಿ ಇದು.

## ಪರೀಕ್ಷೆಯನ್ನು ಯಶಸ್ವಿಯಾಗಿ ಎದುರಿಸುವುದು ಹೇಗೆ ?

*ಅರವಿಂದ ಚೊಕ್ಕಾಡಿ*

ಪರೀಕ್ಷೆ ಮಕ್ಕಳಿಗೆ ಪೆಡಂಭೂತದಂತೆ ಕಾಡುತ್ತದೆ. ಅದು ಬಂತೆಂದರೆ ಇನ್ನಿಲ್ಲದ ಆತಂಕ, ಭಯ ಆವರಿಸಿ ಮನಸ್ಸು ಖಿನ್ನವಾಗುತ್ತದೆ. ಅಂತಹ ಪರೀಕ್ಷೆಯನ್ನು ಯಶಸ್ವಿಯಾಗಿ ನಿಭಾಯಿಸುವುದು ಹೇಗೆ ? ಶಿಕ್ಷಕರು, ಹೆತ್ತವರು ಯಾವ ರೀತಿಯಲ್ಲಿ ಈ ಪರೀಕ್ಷಾ ಭೀತಿಯನ್ನು ನಿವಾರಿಸಲು ಸಹಾಯಕವಾಗಬಹುದು ? ಹಲವು ಸಲಹೆಗಳಿರುವ ಇದನ್ನು ಓದಿ.





## ಮಕ್ಕಳಲ್ಲಿ ಸೃಜನಶೀಲತೆಯನ್ನು ವೃದ್ಧಿಸುವುದು ಹೇಗೆ ?

*ಡಾ|| ಕಿಕ್ಕೇರಿ ವೀರನಾರಾಯಣ*

ಮಕ್ಕಳ ಮನಸ್ಸು ಸದಾ ಹೊಸತನಕ್ಕೆ ತುಡಿಯುತ್ತಾ ಕ್ರಿಯಾಶೀಲವಾಗಿರುವಂಥದು. ಅಂತಹ ಮನಸ್ಸುಗಳಿಗೆ ನಾವು ಬರೀ ಓದು ಬರೆಹವನ್ನಷ್ಟೆ ಹಚ್ಚಿದರೆ ಅವು ಏಕತಾನತೆಯಿಂದ ನರಳುತ್ತವೆ. ಓದಿನ ಜೊತೆ ಜೊತೆಗೆ ಸೃಜನಶೀಲ ಮಾಧ್ಯಮಗಳಲ್ಲೂ ಅವರನ್ನು ತೊಡಗಿಸಿಕೊಳ್ಳುವ ಸಹೃದಯತೆ ಇರಬೇಕು. ಯಾವುವು ಆ ಸೃಜನಶೀಲ ಮಾಧ್ಯಮಗಳು ? ಪುಸ್ತಕ ಓದಿ.

## ಯಶಸ್ವೀ ಶಿಕ್ಷಕರಾಗುವುದು ಹೇಗೆ ?

*ಅರವಿಂದ ಚೊಕ್ಕಾಡಿ*

'ಶಿಕ್ಷಕರು ನಾಳಿನ ಯಶಸ್ವೀ ಪ್ರಜೆಗಳ ರೂವಾರಿಗಳು' ಎನ್ನುವ ಮಾತಿದೆ. ತಿದ್ದಿ, ತೀಡಿ, ಅವರನ್ನು ಪ್ರೋತ್ಸಾಹಿಸಿ ಅವರ ಬುದ್ಧಿಯನ್ನು ಸೌಜನ್ಯದಿಂದ ಒರೆಹಚ್ಚುವ ಗುಣ ಶಿಕ್ಷಕರಲ್ಲಿರಬೇಕು. ಎಳವೆಯಲ್ಲೆ ಕುಡಿ ಚಿವುಟಿ ಹಾಳುಗೆಡವಬಾರದು. ಹಾಗಾದರೆ ಯಶಸ್ವೀ ಶಿಕ್ಷಕರಾಗಲು ಏನು ಮಾಡಬೇಕೆನ್ನುತ್ತೀರ ? ಇಲ್ಲಿವೆ ನೋಡಿ ಅಂತಹ ಹಲವು ಸರಳ ಸೂತ್ರಗಳು.

ರಿಯಾಯಿತಿ ಬೆಲೆ ಜೊತೆಗೆ ಅಂಚೆ ವೆಚ್ಚ ರೂ. 30 ಸೇರಿಸಿ ನಮಗೆ ಎಂ.ಓ/ಡಿ.ಡಿ. ಕಳಿಸಿ




ವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ 5159, ಕುಮಾರ ಪಾರ್ಕ್ ಪೂರ್ವ

ಂಗಳೂರು - 560 001

ದೂರವಾಣಿ/ಫ್ಯಾಕ್ಸ್ : 22203580/81/82

mail : nkp@bgl.vsnl.net.in website : www.navakarnatakabooks.com

**ಶಾಖೆಗಳು**

ಗಾಂಧಿನಗರ, ಬೆಂಗಳೂರು - 560 009
✆ 22251382

ಕೆ. ಎಸ್. ರಾವ್ ರಸ್ತೆ, ಮಂಗಳೂರು - 575 001
✆ 2441016

ರಾಮಸ್ವಾಮಿ ವೃತ್ತ, ಮೈಸೂರು - 570 024
✆ 2424094

ಸ್ಟೇಷನ್ ರಸ್ತೆ, ಗುಲ್ಬರ್ಗಾ - 585 102
✆ 224302





# ಕಲಾ ಚಟುವಟಿಕೆಗಳ ತಾಣ



ಬೆಂಗಳೂರಿನ ಚಿತ್ರಕಲಾ ಪರಿಷತ್ ಭಾವೀ ಕಲೆಗಾರರನ್ನು ರೂಪಿಸುವ ಕಲಾವಿದ್ಯಾಲಯ.

ಪ್ರಖ್ಯಾತ ಚಿತ್ರಕಾರರು, ಶಿಲ್ಪಿಗಳ ಅಪೂರ್ವ ಕೃತಿಗಳ ಖಾಯಂ ಪ್ರದರ್ಶನ ನಡೆಸುವುದರ ಜೊತೆಗೆ, ಆಗಾಗ ನಾಡಿನ ಹಾಗೂ ವಿದೇಶಗಳ ಖ್ಯಾತ ಚಿತ್ರಗಾರರ, ಶಿಲ್ಪಿಗಳ, ಛಾಯಾಚಿತ್ರಗಾರರ ಅತ್ಯುತ್ತಮ ಕೃತಿಗಳ ಪ್ರದರ್ಶನ ಏರ್ಪಡಿಸುತ್ತ ಕಲಾಭ್ಯಾಸಿಗಳನ್ನು ಕಲಾಸಕ್ತರನ್ನು ಆಕರ್ಷಿಸುವ ಕಲಾ ಚಟುವಟಿಕೆಗಳ ತಾಣ.

ಚಿತ್ರ ಕಲೆಯ ವಿವಿಧ ಪ್ರಕಾರಗಳ ಅಭ್ಯಾಸದಲ್ಲಿ ಮಗ್ನರಾಗಿರುವ ಯುವ ಕಲಾವಿದರಿಗೆ ವರ್ಷದ ಕೊನೆಯಲ್ಲಿ ತಮ್ಮ ಕಲಾ ಸಾಮರ್ಥ್ಯವನ್ನು ಪ್ರದರ್ಶಿಸುವ ಅವಕಾಶ. ಕಳೆದ ವರ್ಷ ಪ್ರದರ್ಶನಗೊಂಡ ಹಿರಿಯ ವಿದ್ಯಾರ್ಥಿಗಳ ಪೈಕಿ ಇಬ್ಬರ ಕಲಾಕೃತಿಗಳು ಇಲ್ಲಿವೆ.

– ಕೆ. ಪಿ. ಎಸ್








ವಲಸೆಗಾರರು

**ಪ್ರೊ|| ಶಿವರಾಮಯ್ಯ**

**ಪು**ರಾತನ ಜಗತ್ತಿನ ಇತಿಹಾಸಕಾರ ಹೆರೊಡೋಟಸ್ ಕ್ರಿ. ಪೂ. ಸು ೨೫೦೦ ವರ್ಷಗಳಷ್ಟು ಹಿಂದಿನ ಗುಲಾಮ-ಒಡೆಯ ಸಂಸ್ಕೃತಿ ಕಾಲದ ಒಂದು ಮಾತನ್ನು ದಾಖಲಿಸಿದ್ದಾನೆ. ಈಜಿಪ್ಟಿನ ಫೇರೋ (ದೊರೆ) ಇಡೀ ದೇಶದ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸುವುದಕ್ಕಾಗಿ 'ಬಂಡಾಯಗಾರರನ್ನು ಕೊಲ್ಲು, ಕುಲೀನರನ್ನು ಪುರಸ್ಕರಿಸು' ಎಂಬ ಆದೇಶವೊಂದನ್ನು ಜಾರಿಯಲ್ಲಿಟ್ಟಿದ್ದನಂತೆ. ಇವತ್ತಿನ ಜಾಗತಿಕ ಸಂದರ್ಭಕ್ಕೆ ಇದೇ ಮಾತನ್ನು ಸ್ವಲ್ಪ ಬದಲಿಸಿ ಹೇಳುವುದಾದರೆ 'ಬಡರಾಷ್ಟ್ರಗಳನ್ನು ಹತ್ತಿಕ್ಕು, 'ಶಕ್ತಿಶಾಲಿ ರಾಷ್ಟ್ರಗಳನ್ನು ಪುರಸ್ಕರಿಸು' ಎಂಬುದು ನವಸಾಮ್ರಾಜ್ಯಶಾಹಿಗಳ ಅನಧಿಕೃತ ಶಾಸನವಿದ್ದಂತಿದೆ. ಅರೆಗುಲಾಮ - ಒಡೆಯ ಸಂಸ್ಕೃತಿ ೨೧ನೇ ಶತಮಾನಕ್ಕೂ ಮುಂದುವರಿಯುತ್ತಲೇ ಇದೆ ಎಂದರೆ ಅತಿಶಯವೇನಲ್ಲ. ಇದನ್ನು ಒಂದು ಪ್ರಾಯೋಗಿಕ ಪರೀಕ್ಷಾವಿಧಾನದಿಂದ ವಿಶ್ಲೇಷಿಸಿ ಹೇಳಬಹುದು.

ನಿಮ್ಮ ಮೇಜಿನ ಮೇಲೆ ಒಂದು ಗ್ಲೋಬ್ ಇದ್ದ ಪಕ್ಷದಲ್ಲಿ ಅದನ್ನು ಒಮ್ಮೆ ಹಾಗೇ ತಿರುಗಿಸುತ್ತ ನೋಡಿ: ದ್ವಿತೀಯ ಮಹಾಯುದ್ಧದ ತರುವಾಯ ಯಾವ ಯಾವ ಭೂಖಂಡಗಳಲ್ಲಿ ಲೆಕ್ಕವಿಲ್ಲದಷ್ಟು ಹತ್ಯಾಕಾಂಡಗಳು ನಡೆದು ಎಷ್ಟೊಂದು ನೆತ್ತರ ಚಿತ್ತಾರಗಳು ಮೂಡಿವೆ ಎಂಬುದನ್ನು ಗುರುತು ಮಾಡಿಕೊಳ್ಳಿ. ನಂತರ ಇದಕ್ಕೆ ಕಾರಣರು ಯಾರು ? ಯಾಕಾಗಿ ಅವರು ರಕ್ತ ಹರಿಸಿದರು ? ಇದರಿಂದ ಅವರಿಗಾದ ಲಾಭವೇನು ? ಮತ್ತು ಇದರ ಪರಿಣಾಮವೇನು ? ಎಂದೆಲ್ಲಾ ಕೊಂಚ ಯೋಚಿಸಿದರೆ ನಮಗೆ ತಿಳಿದು ಬರುವ ಐತಿಹಾಸಿಕ ಸತ್ಯ ಏನೆಂದರೆ ಈ ಎಲ್ಲಕ್ಕೂ ಕಾರಣ ನವಸಾಮ್ರಾಜ್ಯಶಾಹಿ ರಾಷ್ಟ್ರಗಳು, ಅದರಲ್ಲೂ ಅಮೆರಿಕವೆಂಬ ಬಲಾಢ್ಯ ರಾಷ್ಟ್ರವೇ ಇಷ್ಟಕ್ಕೂ ಕಾರಣವೆಂದು ಯಾರಿಗಾದರೂ ಹೊಳೆಯದಿರದು.

ಅಮೆರಿಕ ಇದಕ್ಕಾಗಿ ನಿರಂತರವಾಗಿ ತರಹೇವಾರಿ ಕಾರ್ಯತಂತ್ರಗಳನ್ನು ರೂಪಿಸುತ್ತಾ ತಾನು ಹೇಳಿದ್ದೇ ಪರಮ ಸತ್ಯವೆಂದು ತುತ್ತೂರಿ ಊದುತ್ತಾ ಬರುತ್ತಿದೆ. ೨೦೦೧ ಸೆಪ್ಟೆಂಬರ್ ೧೧ರ ನಂತರ ತನ್ನದೇ ರಾಷ್ಟ್ರದ ಶೈಕ್ಷಣಿಕ ಸ್ವಾತಂತ್ರ್ಯವನ್ನು ಕಸಿದುಕೊಳ್ಳುತ್ತಿದೆ. ದುರ್ಬಲ ರಾಷ್ಟ್ರಗಳ ನೈಸರ್ಗಿಕ ಸಂಪನ್ಮೂಲಗಳು ಹಾಗೂ ಅಗ್ಗವಾದ ಮಾನವಶ್ರಮದ ಮೇಲೆ ಅದರ ಹದ್ದಿನ ಕಣ್ಣು ನೆಟ್ಟಿವೆ. ಈ ನಿಟ್ಟಿನಲ್ಲಿ ಸಂಪದ್ಭರಿತ ರಾಷ್ಟ್ರಗಳೆಂದರೆ ಲ್ಯಾಟಿನ್ ಅಮೆರಿಕ, ಕೆರೇಬಿಯನ್, ಅರಬ್‌ಕೊಲ್ಲಿ ಮತ್ತು ಏಷ್ಯಾಖಂಡದ ರಾಷ್ಟ್ರಗಳು. ದುರಾದೃಷ್ಟವಶಾತ್ ಇದೇ ಪ್ರದೇಶಗಳಲ್ಲಿ ಇಸ್ಲಾಮ್ ಹಾಗೂ ಬೌದ್ಧ ಧಾರ್ಮಿಕವರ್ಗಗಳೂ ಅತಿ ದಟ್ಟಣೆಯಿಂದ ಬೇರುಬಿಟ್ಟಿವೆ.

ಈ ಹಿನ್ನೆಲೆಯಲ್ಲಿ ಇಡೀ ಜಗತ್ತಿನತ್ತ ಕಣ್ಣು ಹಾಯಿಸಿದರೆ, ವಿಯೆಟ್ನಾಂ ಮೊದಲುಗೊಂಡು ಇಂಡೊನೇಷಿಯಾ, ಕಾಂಬೋಡಿಯಾ, ಕೊರಿಯಾ, ಲೆಬನಾನ್, ಇರಾನ್, ಇರಾಕ್, ಪನಾಮ, ಚಿಲಿ, ಆಫ್‌ಘಾನಿಸ್ತಾನ, ಕಜಕಸ್ಥಾನ, ಚೆಚನ್ಯಾ, ಗ್ವಾಟೆಮಾಲಾ, ಫಿಲಿಪೀನ್ಸ್, ಉಗಾಂಡ, ಸೊಮಾಲಿಯಾ, ನೈಜೀರಿಯಾ, ಇಥಿಯೋಪಿಯ ಮತ್ತು ಇತ್ತೀಚಿನ ಹೈಟಿಯವರೆಗೆ ಅಮೆರಿಕದ ಕಬಂಧಬಾಹುವಿನ ಕೈವಾಡವಿರುವುದು ಅರಿವಾಗುತ್ತದೆ. ಅಮೆರಿಕದ ನೇರ ಅಥವಾ ಪರೋಕ್ಷ ಹಸ್ತಕ್ಷೇಪವಿಲ್ಲದೆ ಈ ಯಾವ ದೇಶದಲ್ಲೂ ಒಂದು ತೊಟ್ಟು ರಕ್ತ ಚೆಲ್ಲಿರಲಾರದು.

ಅಲ್ಲದೆ, ಮೂತಿ ತೂರಿಸಲು ಅವಕಾಶ ಸಿಕ್ಕಿದ ಒಂಟೆ ಗುಡಾರವನ್ನೇ ಎತ್ತಿತು ಎಂಬಂತೆ ಅಮೆರಿಕದ ಮಿತ್ರರಾಷ್ಟ್ರಗಳಲ್ಲಿ ಒಂದಾದ ಇಸ್ರೇಲ್ ಗಾಜಾ ಪಟ್ಟಿಯ ಬಲದಂಡೆಯುದ್ದಕ್ಕೂ ಕಳೆದ ಅರ್ಧ ಶತಮಾನ ಪರ್ಯಂತ ರಕ್ತದ ಚಿತ್ತಾರಗಳ ಪಸೆ ಆರದಂತೆ ಪ್ಯಾಲೆಸ್ಟೈನರ ಹತ್ಯೆಗೈಯುತ್ತಿದೆ. ಹಿಂದೆ ಜರ್ಮನಿಯ ನಾಜಿಗಳಿಂದ ಯಮಯಾತನೆಗೆ ಸಿಕ್ಕಿ ವಲಸೆ ಬಂದ ಯಹೂದಿಗಳು ಅರಬ್ ರಾಷ್ಟ್ರಗಳ ನಟ್ಟನಡುವೆ ತಮ್ಮ ನೆಲೆಯನ್ನು ಕಂಡುಕೊಂಡು ತಮ್ಮ ನೆಲೆಯನ್ನು ಯಾವಾಗಲೂ ವಿಸ್ತರಿಸಿಕೊಳ್ಳುತ್ತಾ ಪ್ಯಾಲೆಸ್ಟೈನಿನ ದುರಂತಕ್ಕೆ ಕಾರಣರಾಗಿದ್ದಾರೆ.

ಇಷ್ಟಾದರೂ ಸಹ ಅಮೆರಿಕ ಮಾತ್ರ ಸಮಾನತೆ, ಸ್ವಾತಂತ್ರ್ಯ, ಸ್ವಾಭಿಮಾನ, ಸೋದರತ್ವಗಳಂತಹ ಪ್ರಜಾಪ್ರಭುತ್ವ ಮೌಲ್ಯಗಳ ಗುತ್ತಿಗೆದಾರನಂತೆ ಬಡಬಡಿಸುತ್ತದೆ. ಅದು ಷಟ್‌ಖಂಡಪರ್ಯಂತ ಆಯಕಟ್ಟಿನ ಜಾಗಗಳಲ್ಲಿ ತನ್ನ ಸೇನಾ

# ಈ ನೆಲದ ಮೇಲೆ ಯಾಕಿಷ್ಟು ನೆತ್ತರ ಚಿತ್ತಾರಗಳು ?

ಶಿಬಿರಗಳನ್ನು ನಿರ್ಮಿಸಿಕೊಂಡು, ಸುಮಾರು ೨೦ ಸಲ ಇಡೀ ಭೂಮಂಡಲವನ್ನೇ ಸುಟ್ಟು ಬೂದಿ ಮಾಡುವಷ್ಟು ಅಣ್ವಸ್ತ್ರಗಳನ್ನು ಶೇಖರಿಸಿಟ್ಟುಕೊಂಡಿದೆ.

ಸ್ವಾತಂತ್ರ್ಯ, ಸಮಾನತೆಗಳ ರಕ್ಷಕನೆಂದು ಬೀಗುವ ಅಮೆರಿಕ ಮಾನವ ವಿರೋಧಿ ಅಣುಬಾಂಬುಗಳನ್ನು ೧೯೪೫, ಆಗಸ್ಟ್ ೬ ಮತ್ತು ೯ರಂದು ಹಿರೋಷಿಮಾ ನಾಗಸಾಕಿಗಳ ಮೇಲೆ ಹಾಕಿತು. ಸಾವಿರಾರು ಜನ ಅಸುನೀಗಿದ ಈ ಲೋಕವಿನಾಶಕ ಕೃತ್ಯದ ಮೂಲಕ ಇಡೀ ಜಗತ್ತನ್ನು ತನ್ನ ಹತೋಟಿಯಲ್ಲಿಟ್ಟುಕೊಳ್ಳುವ ತನ್ನ ಮಹಾದಾಸೆಯನ್ನು ಸಾರಿತು. ನಂತರದ ದಿನಗಳಲ್ಲಿ ಬಂಡವಾಳಶಾಹಿ ವ್ಯವಸ್ಥೆಗೆ ಪರ್ಯಾಯವನ್ನು ಕಂಡುಕೊಂಡು ಸಮಾಜವಾದದತ್ತ ಹೆಜ್ಜೆ ಇಡುತ್ತಿದ್ದ ಕೊರಿಯಾ, ವಿಯೆಟ್ನಾಂ, ಕಾಂಬೋಡಿಯಾ ಮುಂತಾದ ರಾಷ್ಟ್ರಗಳು ಅಮೆರಿಕದ ದಾಳಿಗೆ ತುತ್ತಾದವು. ಅಮೆರಿಕದ ಆಕ್ರಮಣಕಾರಿ ನೀತಿಯು ಇಂದಿಗೂ ಮುಂದುವರೆಯುತ್ತಿದೆ. ೧೯೬೬ರಲ್ಲಿ ಪ್ಯಾಟ್ರಿಸ್ ಲುಮುಂಬಾನ ಹತ್ಯೆ, ೧೯೭೧ರಲ್ಲಿ ಚಿಲಿಯ ಅಲೆಂಡೆಯ ಕಗ್ಗೊಲೆ... ಹೀಗೆ ಅನೇಕ ವಿಧ್ವಂಸಕ ಕೃತ್ಯಗಳ ಹಿಂದೆ ಸಿ. ಐ. ಎ. ಕೈವಾಡವಿರುವುದು ಎಲ್ಲರಿಗೂ ತಿಳಿದ ವಿಷಯ. ಡ್ಯಾಗ್ ಹ್ಯಾಮರ್‌ಶೀಲ್ಡ್ ಸತ್ತಿದ್ದೂ ಅದರಿಂದಲೇ.

ತೈಲನಿಕ್ಷೇಪ ಹಾಗೂ ವ್ಯವಹಾರಗಳ ಮೇಲಿನ ಏಕ ಸ್ವಾಮ್ಯತೆ ಹಾಗೂ ತೈಲ ಸಾಗಾಣಿಕೆಗಾಗಿ ಕೊಳವೆ ಮಾರ್ಗಗಳ ಸುಗಮ ದಾರಿ ನಿರ್ಮಾಣ ಈ ಕಾರಣಗಳಿಗಾಗಿ ಅಮೆರಿಕದ ಮತ್ತು ಅದರ ಮಿತ್ರಪಡೆಗಳು ಅಫ್‌ಘಾನಿಸ್ಥಾನ ಮತ್ತು ಇರಾಕ್‌ಗಳನ್ನು ಮುತ್ತಿ ವಶಪಡಿಸಿಕೊಂಡವು. ಸದ್ದಾಂನ ಕಾಲದಲ್ಲಿ ಸ್ವಾಗತಿಸಿದರು ಎನ್ನಲಾದ ಇರಾಕಿಗಳೇ ಈಗ 'ಅಮೆರಿಕನ್ನರೇ ಇಲ್ಲಿಂದ ತೊಲಗಿ' ಎಂದು ವಿದೇಶಿ ಪಡೆಗಳ ವಿರುದ್ಧ ಆರ್ಭಟಿಸುತ್ತಿದ್ದಾರೆ. ಇದಕ್ಕಾಗಿ ಇನ್ನೂ ಹಲವು ನಿದರ್ಶನಗಳನ್ನು ನೀಡಬಹುದು. ೨೫ ವರ್ಷಗಳು ನಿರಂತರ ಯುದ್ಧ ಮಾಡಿದರೂ ಅಮೆರಿಕ ವಿಯೆಟ್ನಾಂನ ಕ್ರಾಂತಿಕಾರಿ ಯೋಧರನ್ನು ಹತ್ತಿಕ್ಕಲಾಗದೆ ಹಿಮ್ಮೆಟ್ಟಬೇಕಾಯಿತು. 'ವಿಯೆಟ್ನಾಂ ಮಿಡತೆಗಳು ಅಮೆರಿಕದ ಆನೆಯನ್ನೂ ಮಣಿಸಿದ್ದು ಒಂದು ಆಧುನಿಕ ವೀರಗಾಥೆ'. ಇತ್ತ ಸಮೀಪದ ಸಮಾಜವಾದಿ ರಾಷ್ಟ್ರ ಕ್ಯೂಬಾವನ್ನು ಅಳಿಸಿಹಾಕಲು ಹೂಡಿದ ಇದುವರೆಗಿನ ಎಲ್ಲ ಪ್ರಯತ್ನಗಳೂ ವಿಫಲಗೊಂಡಿವೆ. ಸೆಪ್ಟೆಂಬರ್ ೧೧ರ ಕುಖ್ಯಾತಿಯ ಒಸಾಮ ಬಿನ್ ಲ್ಯಾಡೆನ್ ಎಂಬ 'ಇಲಿಯು' ಆಫ್‌ಘನ್ ಗುಡ್ಡದ ಬಿಲಗಳಲ್ಲಿದ್ದುಕೊಂಡು ಇನ್ನೂ ಅಮೆರಿಕದ ನಿದ್ದೆ ಕೆಡಿಸುತ್ತಲೇ ಇದ್ದಾನೆ. ಯಾವ ಕಾರಣಕ್ಕೂ ಪ್ಯಾಲಿಸ್ಟೈನ್ ನಾಯಕ ಯಾಸೆರ್ ಅರಾಫತ್‌ನ ಹತ್ಯೆಗೆ ಯತ್ನಿಸುವುದಿಲ್ಲವೆಂದು ವಚನ ಕೊಟ್ಟಿದ್ದ ಇಸ್ರೇಲ್ ಈಗ ಅದನ್ನು ಉಲ್ಲಂಘಿಸುವುದಕ್ಕಾಗಿ ಸಮಯ ಕಾಯುತ್ತಿದೆ. ಈ ಅಂಶಗಳೆಲ್ಲ ಇನ್ನೊಂದು ಮಹಾ ಚುನಾವಣೆಗೆ ಅಣಿಯಾಗುತ್ತಿರುವ ಜಾರ್ಜ್ ಬುಷ್ ವರ್ಚಸ್ಸಿಗೆ ಮಂಕು ಕವಿಸುತ್ತಿವೆ. ಆದರೂ ಅವನೇ ಗೆಲ್ಲಬಹುದು!



ದಿಲ್ಲಿ

ದಿಲ್ಲಿ ಇಲ್ಲಿ ಎಲ್ಲ
ವ್ಯವಹಾರ, ವ್ಯಾಪಾರ
ಸರಕಾರದ ಬಾಗಿಲುಗಳು
ಇರುವುದು, ತೆರೆಯುವವು
ಬೆನ್ನ ಹಿಂದೆ, ನೇರ ನಡೆ
ನುಡಿ ಬಾಯಿಯಲ್ಲೇ ಮಾತ್ರ

**ಶೈಲಜಾ ಉಡಚಣ**
ಜೇವರ್ಗಿ ಕಾಲನಿ, ಮೇಲ್ ಸೇತುವೆ ಹತ್ತಿರ
ಗುಲ್ಬರ್ಗಾ - ೫೮೫೧೦೨

ಆದರೂ ಈ ಬಲಾಢ್ಯ ರಾಷ್ಟ್ರಗಳು ದರೋಡೆ-ಕೊಳ್ಳೆಗಳಿಗೆ ಹೊಸ ಹೊಸ ರಹದಾರಿಗಳನ್ನು ಕಂಡುಕೊಳ್ಳುತ್ತಲೇ ಇರುತ್ತವೆ. ಈ ನಿಟ್ಟಿನಲ್ಲಿ ಅವರ ಹೊಸ ಮಂತ್ರವೆಂದರೆ ಪರಿಸರ ಸಂರಕ್ಷಣೆ ಎಂಬುದು. ಇದಕ್ಕಾಗಿ ಹಿಂದುಳಿದ ಹಾಗೂ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿನ ಯುವಜನತೆ ವ್ಯವಸ್ಥೆಯ ವಿರುದ್ಧ ಸಂಘಟಿತರಾಗದಂತೆ ನೋಡಿಕೊಳ್ಳಲು ಅಲ್ಲಲ್ಲಿ ಎನ್‌ಜಿಓ ತಂಡಗಳನ್ನು ಹುಟ್ಟುಹಾಕಿ ಅವುಗಳನ್ನು ಸಹಾಯ ಧನವೆಂಬ ಗಾಳದಿಂದ ಸೆಳೆದುಕೊಳ್ಳಲಾಗುತ್ತಿದೆ. ಪರಿಸರ ಸಂರಕ್ಷಣೆ, ಜೈವಿಕ ಅರಣ್ಯ ರಕ್ಷಣೆ, ಹುಲಿಯೋಜನೆ ಮುಂತಾದ ಹೊಸ ಹೊಸ ಜಾಗತಿಕ ಕಾರ್ಯಯೋಜನೆಗಳನ್ನು ಜಾರಿಗೆ ತರುವ ಮೂಲಕ ಆದಿವಾಸಿ ಗಿರಿಜನರನ್ನು ಅವರ ಮೂಲನೆಲೆಯಿಂದ ಎತ್ತಂಗಡಿ ಮಾಡಲಾಗುತ್ತಿದೆ. ಇದನ್ನು ಪ್ರತಿರೋಧಿಸುವ ಹೋರಾಟಗಾರರಿಗೆ ನಕ್ಸಲೈಟ್, ಎಲ್‌ಟಿಟಿಇ, ಪಿಡಬ್ಲ್ಯೂಜಿ ಮುಂತಾದ ಲೇಬಲ್ ಹಚ್ಚಿ ಭಯೋತ್ಪಾದಕರೆಂದು ಪರಿಗಣಿಸಿ ಎನ್‌ಕೌಂಟರ್‌ನಲ್ಲಿ ಮುಗಿಸಲಾಗುತ್ತಿದೆ. ಹೀಗಾಗಿ ಅಭಯಾರಣ್ಯಗಳ ನಟ್ಟನಡುವಿನ ಹಸಿರು ನೆಲದಲ್ಲಿ ನೆತ್ತರ ಚಿತ್ತಾರಗಳು ಮೂಡುತ್ತಿವೆ. ಇದರಿಂದಾಗಿ ಅಮೆಜ಼ಾನ್ ತಪ್ಪಲಿನ ಕಾಡುಗಳಲ್ಲಿ, ಆಫ್ರಿಕಾದ ಅರಣ್ಯಗಳಲ್ಲಿ, ಹಿಮಾಲಯ ಹಾಗೂ ಪಶ್ಚಿಮಘಟ್ಟಗಳ ತಪ್ಪಲಿನಲ್ಲಿದ್ದ ಬುಡಕಟ್ಟು ಜನರು ಅಳಿವಿನ ಅಂಚಿಗೆ ತಳ್ಳಲ್ಪಡುತ್ತಿದ್ದಾರೆ. ಅಡವಿಯಲ್ಲೂ ಇವರು ಉಳಿಯುವಂತಿಲ್ಲ, ನಾಗರಿಕರ ನಡುವೆಯೂ ಬದುಕುವಂತಿಲ್ಲ. ಕಡೆಗೆ ಅವರದ್ದೇ ಆದ ಮಸಣ ಭೂಮಿಯೂ ಇಲ್ಲ. ಭಯಪೀಡಿತರಾದ ಈ ಜನ ಹತಾಶರಾಗಿ ಕೊನೆಗೆ ಕೋಮುವಾದಿಗಳ ತೆಕ್ಕೆಗೆ ಬಿದ್ದು ಪಾತಕಲೋಕಕ್ಕೆ ಸೇರುತ್ತಾರೆ. ಇದಕ್ಕೆ ಒಂದು ನಿದರ್ಶನ ಗುಜರಾತ್ ಹತ್ಯಾಕಾಂಡದಲ್ಲಿ ಭಾಗೀದಾರರಾದ ಸರ್ದಾರ್ ಸರೋವರ ಅಣೆಕಟ್ಟೆಯ ಮುಳುಗಡೆ ಪ್ರದೇಶದಿಂದ ಎತ್ತಂಗಡಿಯಾದ ಆದಿವಾಸಿ ಗಿರಿಜನರು.

ಈ ಆದಿವಾಸಿ ಬುಡಕಟ್ಟುಗಳು ವನಾಂತರದಲ್ಲಿರುವವರೆಗೆ ಸಾಮ್ರಾಜ್ಯಶಾಹಿ ಲೂಟಿಕೋರರ ಆಟ ಅಲ್ಲಿ ನಡೆಯುವಂತಿಲ್ಲ; ನಾಟಾ ಕಳ್ಳ ಸಾಗಾಣಿಕೆಗೆ, ವನೌಷಧಿ ಹಾಗೂ ಅಪರೂಪದ ಜೈವಿಕ ತಳಿಗಳ ಕೊಳ್ಳೆಗೆ ಅಡ್ಡನಿಲ್ಲುತ್ತಾರೆ. ಆದ್ದರಿಂದ ಅವರನ್ನು ಅಲ್ಲಿಂದ ಒಕ್ಕಲೆಬ್ಬಿಸುವುದು ಸದ್ಯದ ಜಾಗತಿಕ ಮಾರುಕಟ್ಟೆಯ ಹವಣಿಕೆಯಾಗಿದೆ. ಹಾಗಾಗಿ ನವಸಾಮ್ರಾಜ್ಯಶಾಹಿಗಳು ಅನೇಕಾನೇಕ ಯೋಜನೆಗಳನ್ನು ರೂಪಿಸುತ್ತಾರೆ. ದುರ್ಬಲ ರಾಷ್ಟ್ರಗಳ ಕೈಗೊಂಬೆ ದಳ್ಳಾಳಿ ಪ್ರಭುತ್ವಗಳು ಅದನ್ನು ಅನುಮೋದಿಸುತ್ತವೆ. ಆಗ ಹಾಡುಹಗಲೇ ಜೈವಿಕಾರಣ್ಯಗಳ ಮೇಲೆ ಹತ್ಯಾಚಾರ ಆರಂಭವಾಗುತ್ತದೆ. ಪ್ರತಿರೋಧಿಸುವ ಜನಸಮುದಾಯಗಳನ್ನು ಬಗ್ಗು ಬಡಿಯಲಾಗುತ್ತದೆ. ಆದರೆ 'ಕೊಂದವರು ಉಳಿಯುವರೇ' ಎಂಬ ಸತ್ಯ ಅವರಿಗೆ ಈಗ ಹೊಳೆಯುವುದಿಲ್ಲ.

ಒಟ್ಟಾರೆ, ಹೀಗೆ ಕೇವಲ ಐಹಿಕಾಭ್ಯುದಯಾಕಾಂಕ್ಷಿಗಳಾದ ಬಂಡವಾಳಶಾಹೀ ರಾಷ್ಟ್ರಗಳು ತಮ್ಮ ಸಂಪನ್ಮೂಲ ಕ್ರೋಢೀಕರಣ, ಮಾರುಕಟ್ಟೆಯ ನಿಯಂತ್ರಣ ಹಾಗೂ ಮಾನವಶ್ರಮದ ವಶೀಕರಣ : ಈ ಉದ್ದೇಶಗಳಿಗಾಗಿ ಈ ನೆಲದ ಮೇಲೆ ರಕ್ತದ ಕಲೆಗಳನ್ನು ಮೂಡಿಸುತ್ತಾ ಬಂದಿವೆ. ಇದು ಅನಾದಿ ಕಾಲದಿಂದಲೂ ನಡೆದು ಬರುತ್ತಿರುವ ಮನುಕುಲದ ಮತ್ಸ್ಯ ನ್ಯಾಯ. ಸದ್ಯದ ಅಧ್ವರ್ಯುವಾಗಿರುವ ಅಮೆರಿಕ, ಅಕ್ಷರಶಃ ಲಕ್ಷಾಂತರ ಜನರ ಹತ್ಯಾಕಾಂಡಕ್ಕೆ ಪ್ರತ್ಯಕ್ಷ ಇಲ್ಲವೇ ಪರೋಕ್ಷ ಕಾರಣವಾಗಿದೆ. ಈ ಎಲ್ಲ ಅಂಶಗಳನ್ನು ದೃಢಪಡಿಸಿಕೊಳ್ಳಲು ನಿಮ್ಮ ಮುಂದಿರುವ ಗ್ಲೋಬನ್ನು ಮತ್ತೊಮ್ಮೆ ಆವರ್ತಗೊಳಿಸಿ ನೋಡಿ.

**ಪ್ರೊ॥ ಶಿವರಾಮಯ್ಯ**
ನಂ ೧೭೨, ಐಸೆಕ್ ರೋಡ್, ಟೀಚರ್ಸ್ ಕಾಲೋನಿ ನಾಗರಭಾವಿ, ಬೆಂಗಳೂರು - ೫೬೦ ೦೭೨




## ಮಂಗಳೂರಿನಲ್ಲಿ ಪುಸ್ತಕ ಪ್ರದರ್ಶನ

ಈ ಪ್ರದರ್ಶನವನ್ನು ಸೈಂಟ್ ಆಗ್ನೇಸ್ ಕಾಲೇಜಿನ ಮುಖ್ಯ ಗ್ರಂಥಪಾಲಕರಾದ ಎಸ್. ಟಿ. ಸುಧಾ 'ಹೊಸತು' ತಿಂಗಳ ಪತ್ರಿಕೆಯ ಚಂದಾದಾರರಾಗುವ ಮೂಲಕ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ರಸಾಯನ ಶಾಸ್ತ್ರ ವಿಭಾಗದ ಪ್ರೊ॥ ಜಯಂತ್ ಉಪಸ್ಥಿತರಿದ್ದರು.



# ಬುದ್ಧನೂ ಕವಿತೆಯೂ

ಜಗವು ಮಲಗಿದ ನಿಶ್ಯಬ್ದದಲ್ಲಿ ಧಿಗ್ಗನೆದ್ದ
ಬುದ್ಧ –
ಹುಚ್ಚೆದ್ದ ಜನಜಂಗುಳಿಯಿಂದ
ಹೋದ ದೂರ – ಬಹುದೂರ !
ಧ್ಯಾನಸ್ಥನಾದ
ಬೋಧಿವೃಕ್ಷದ ಕೆಳಗೆ.
ಹಾಗೆಯೇ
ಬಯಲೊಳಗೆ ಬಯಲಾಗಿ ನಿಂತು
ತನ್ನಂತರಂಗದ ತಲ್ಲಣವ
ರೋಧಿಸಿಕೊಂಡ ಭೇದಿಸಿಕೊಂಡ
ಬಾಸು ತುಂಬಿ ಉಳಿದ ಭಾವಕೋಟಿಯು
ದುಗುಡ ದುಮ್ಮಾನಗಳನೂ...
ದಯೆಯಿಲ್ಲದ ಬದುಕ – ನರಕ ಕಂಡು
ನೊಂದ, ಬೆಂದ
ಕಂದನಂತೆ ಮೌನಮುಖಿಯಾದ.

ತಾನೊಂದು ಕವಿತೆಯಾದ.

ಚಿಪ್ಪೊಡೆದ ಕವಿತೆಯೊಳಗಿನ
'ಘನ-ದನಿ' ಜಗಕೆಲ್ಲ ಸಾರಿದ.
ಬಾರಿ ಬಾರಿ ತಿಳಿ ಹೇಳಿದ.

ಮೌನ ತಳದಿಂದ ಕೇಳಿ ಬಂದ
'ದನಿ'ಯೊಂದು ತಾನೇ ತಂದೆನೆಂದ.

ಕವಿತೆಯ ತಿಳಿವು – ಬುದ್ಧನಿಗಾದ ಮಹಾ ಅರಿವು !
ಮಾತುಗಳಿಂದ ಸಿಡಿದು, ದೂರಾಗಿ ಒಡೆದ
ಕ್ಷಣಭಂಗದ ಅನುರಣನದ ಅಭಿವ್ಯಕ್ತಿ – ಕಲ್ಪವೃಕ್ಷ

ಮಾತು ಕವಿತೆ
ಕವಿತೆ ಮಾತು
ಬುದ್ಧ ಮೌನ
ಮೌನ ಬುದ್ಧ !

ಬಾನು ಬಯಲೊಳಗೋ
ಬಯಲು ಬಾನೊಳಗೋ ?

ಕಾರಣ ಹುಡುಕುತ್ತ ಹೋದ
ಕವಿತೆ
ಮೌನ ಭೇದಿಸುತ್ತ ಹೋದ
ಬುದ್ಧ

ರಾತ್ರಿ ಹೆತ್ತ ಹಗಲುಗ್ರೂಸಿನ ಈ
ರಹಸ್ಯ ಸೆಣಸಾಟ
ತಪ್ತವಾದ ಅನುಭವದ ಆ
ಮೂಲ ಹುಡುಕಾಟ !

ಬಾಯಿ ಚಪ್ಪರಿಸಿದ ಮಗುವಿನಂತೆ
ಮಾತಾಡಿತು ಮೆಲ್ಲಗೆ ಕವಿತೆ :

ಮೌನವಾದ ಕವಿತೆ
ಬರೀ ಮೌನದಲ್ಲೋ ಅಣ್ಣಾ !
ಧ್ಯಾನಸ್ಥಗೊಂಡ ಬುದ್ಧನಂತೆ
ಅರಿವನ್ನು ತರಹೋದ
ತಳಿರ ತಂತು !

ಮೌನವಾಯಿತು ಕವಿತೆ,
ಕವಿತೆ ಹುಟ್ಟುವ ಪರಿಯೇ
ನಿಂತು ಹೋಯಿತು – ಎಂದೆಲ್ಲ
ಅರ್ಥವಿಲ್ಲದ ಪಿಸುಗುಟ್ಟುವ ಮಾತು !

ಬುದ್ಧ ಮಾತು ಬಿಟ್ಟು
ಮೌನವಾದ.
ಮೌನ ಮರೆತು
ಜಗವ ತುಂಬಿ ಉಳಿದು
ಬೆಳಕಾಗಿ ಬೆಳೆದು ನಿಂತ.

ಕವಿತೆಯೊಂದು ಮಾತು ಮೀರಿದ
ಘನ.
ಘನವನ್ನು ಮೀರಿ ನಿಂತ ಮಾತೊಂದು
ಬುದ್ಧ !

ಬುದ್ಧನೊಳಗಿನ ಆ ನಿರಾಳ ನಿತಾಂತ
'ಸದ್ದು' ಬಿಚ್ಚಿಕೊಂಡಂತೆ ಮನನ
ತರಳ ಕೊರಳಿಂದ ಬೆರಳ ನುಡಿಯಿಂದ
ಉಚ್ಚಿಕೊಂಡಂತೆ 'ಕವಿತೆ' ತನನ !

ಗುಂಡಣ್ಣ ಕಲಬುರ್ಗಿ, ಎಂ. ಇ. ಎಸ್. ಕಲಾ/ವಾಣಿಜ್ಯ ಮಹಾವಿದ್ಯಾಲಯ, ಮೂಡಲಗಿ - ೫೯೧ ೩೧೨. ಬೆಳಗಾವಿ ಜಿಲ್ಲೆ

# ಅಲೆಮಾರಿಗಳಿಲ್ಲದ ಬಯಲು



ಅಕ್ಟೋಬರ್ – ಮುಂಗಾರು ತಗ್ಗಿ ಹಿಂಗಾರು ಆರಂಭವಾಗುವ ಅವಧಿ. ಆಗೊಮ್ಮೆ ಈಗೊಮ್ಮೆ ಆಕಾಶ ನೋಡುವ ಅವಕಾಶ ಸಿಗುತ್ತದೆ. ಹಾಗೊಂದು ಸಂಜೆ ನೀವು ತಲೆ ಎತ್ತಿ ನೋಡಿದಿರಾದರೆ ಎಲ್ಲೆಲ್ಲೂ ಮಿನುಗುವ ಚುಕ್ಕಿಗಳೇ. ಎದ್ದುಕಾಣುವ ಅಲೆಮಾರಿ ಗ್ರಹಗಳೆಲ್ಲಾ ಮಾಯವಾಗಿಬಿಟ್ಟಿವೆಯೋ ಎನ್ನಿಸುತ್ತದೆ. ಧೋ ಎಂದು ಮಳೆ ಸುರಿದಾಗ ತಡಿಕೆ ಕಟ್ಟಿಕೊಂಡ ಅಲೆಮಾರಿಗಳು ಓಡಿಹೋಗುವ ಹಾಗೆ! ಹಾಗಾಗಿ ನಕ್ಷತ್ರಗಳ ಗುಂಪುಗಳ ಪರಿಚಯವೇ ಸಂಜೆಯ ಮುಖ್ಯ ಕೆಲಸವಾಗುತ್ತದೆ. ವೃಶ್ಚಿಕ, ಧನು ಈ ರಾಶಿಗಳು ಪಶ್ಚಿಮದ ಅಂಚಿಗೆ ಸರಿದ ಹಾಗೆ, ಆಕಾಶಗಂಗೆಯ ಹರಿವು ಸ್ಪಷ್ಟವಾಗುತ್ತದೆ. ತಿಂಗಳ ಮೊದಲರ್ಧ ಚಂದ್ರನೂ ಇಲ್ಲದಾಗ ಈ ವೈಭವ ಕೋರೈಸುವುದು. ದಕ್ಷಿಣದಿಂದ ಹೊರಟ ಆಕಾಶಗಂಗೆ ಉತ್ತರದತ್ತ ಸಾಗುತ್ತದೆ. ವೀಣಾ (ಲೈರಾ), ರಾಜ ಹಂಸ (ಸಿಗ್ನಸ್) ಮತ್ತು ಗರುಡ (ಅಕ್ವಿಲಾ)ದ ಮಧ್ಯೆ ತೂರಿ ಈಶಾನ್ಯಕ್ಕೆ ತಿರುಗುತ್ತದೆ. ಯುಧಿಷ್ಠಿರ (ಸಿಫಿಯಸ್) ಮತ್ತು ಕುಂತಿ (ಕ್ಯಾಸಿಯೋಪಿಯ) ಮೂಲಕ ಹರಿಯುತ್ತದೆ.

ಕುಂತಿಯನ್ನು ಗುರುತಿಸಿದಿರಲ್ಲವೇ? ಹಾಗಾದರೆ ಸಪ್ತರ್ಷಿಗಳು ಗೈರು ಹಾಜರು! (ಎಂಬುದನ್ನು ಗಮನಿಸಿ)

ಮಕರ ರಾಶಿ ನೆತ್ತಿಯ ಮೇಲೆ ಕಾಣುತ್ತಿರುವ ಅವಕಾಶ ಬಳಸಿಕೊಂಡು ಅದನ್ನು ಗುರುತಿಸಿ. ತಿಂಗಳ ಉತ್ತರಾರ್ಧಕ್ಕೆ ಚಂದ್ರ ಮಾರ್ಗದರ್ಶಿಯಾಗಿ ಬರುತ್ತಾನೆ. ಆಗ ದಸರಾ ಸಂಭ್ರಮ. ಎಲ್ಲೆಲ್ಲೂ ದೀಪಗಳ ಅಲಂಕಾರ. ಆದ್ದರಿಂದ ಆ ಮೊದಲೇ, ಕ್ಷೀಣ ರಾಶಿಗಳಾದ ಮಕರ, ಕುಂಭಗಳನ್ನು ಗುರುತಿಸಿಕೊಳ್ಳಿ. ೨೧-೨೨ರಲ್ಲಿ ಚಂದ್ರ ಮಕರ ರಾಶಿಯ ತ್ರಿಕೋಣದ ಆಕಾರದ ಮೂಲಕವೇ ಹಾದುಹೋಗುವುದನ್ನು ಕಾಣುವಿರಿ. ವಿಜಯ ದಶಮಿಯಂದು ಅದು ಕುಂಭ ರಾಶಿಯನ್ನು ಹಾದ ಮೇಲೆ ೨೫ರಂದು ಮೀನ ರಾಶಿಯ ಮೀನಿನ ಪಕ್ಕ ಅಂದರೆ ನಕುಲ (ಪೆಗಸಸ್) ದಕ್ಷಿಣಕ್ಕೆ ಕಾಣುವುದು. ಪೆಗಸಸ್ ಚೌಕವನ್ನು ಚಂದ್ರನ ಬೆಳಕಿನಲ್ಲೂ ಗುರುತಿಸಬಹುದು. ಆದರೆ ಮೀನನ್ನು ಮಾತ್ರ ಚಂದ್ರನಿಲ್ಲದಾಗಲೇ ಗುರುತಿಸಬೇಕು.




ಹುಣ್ಣಿಮೆಯ ಚಂದ್ರನ ಪಕ್ಕ ಇರುವುದೇ ಅಶ್ವಿನಿ. ಅಂದು ಚಂದ್ರ ಗ್ರಹಣವಿದೆ. ಆದರೆ ಚಂದ್ರ ಭೂಮಿಯ ನೆರಳನ್ನು ಪ್ರವೇಶಿಸುವಾಗ ನಮ್ಮ ದಿಗಂತದಿಂದ ಕೆಳಗಿಳಿದಿರುತ್ತದೆ. ಗುಜರಾತ್‌ನಿಂದ ಆರಂಭವನ್ನು ಮಾತ್ರ ನೋಡಲು ಸಾಧ್ಯ. ಹಾಗೆಯೇ ೧೪ರ ಸೂರ್ಯ ಗ್ರಹಣದ ನೋಟವೂ ನಮಗೆ ಲಭ್ಯವಿಲ್ಲ. ಈ ಪಾರ್ಶ್ವಗ್ರಹಣ, ರಷ್ಯಾ, ಚೀನಾ, ಜಪಾನ್‌ಗಳಿಗೆ ಮಾತ್ರ.

ಸಂಜೆಯ ಆಕಾಶದಿಂದ ನಾಪತ್ತೆಯಾದ ಅಲೆಮಾರಿಗಳು ಹೋಗುವುದಾದರೂ ಎಲ್ಲಿಗೆ? ಬೆಳಗಿನ ಆಕಾಶದಲ್ಲಿ ಹಾಜರ್! ೩ರ ಬೆಳಗಿನ ಜಾವ ಪೂರ್ವದ ಅಂಚಿಗೆ ಕಣ್ಣು ಹಾಯಿಸಿ. ಶುಕ್ರ ಗ್ರಹ – ಅದರ ಪಕ್ಕವೇ ಮಘ ನಕ್ಷತ್ರ. ಒಂದು ವಾರದ ನಂತರ ಮಾರ್ಗದರ್ಶಿ ಚಂದ್ರ ಅವನ್ನು ಸಮೀಪಿಸುವ ಹೊತ್ತಿಗೆ ಅವು ಬೇರೆ ಬೇರೆಯಾಗಿಬಿಟ್ಟಿರುತ್ತವೆ. ೧೦ರಂದು ಚಂದ್ರ-ಮಘ ಜೋಡಿ. ೧೧ರಂದು ಚಂದ್ರ-ಶುಕ್ರ ಜೋಡಿ. ಹಾಗೇ ದೃಷ್ಟಿಯನ್ನು ದಿಗಂತದ ಅಂಚಿಗೆ ಹೊರಳಿಸಿದರೆ ಗುರು ಗ್ರಹವೂ ಕಾಣುವುದು. ತಿಂಗಳ ಕೊನೆಯ ವಾರದಲ್ಲಿ ಗುರು ಸ್ಪಷ್ಟವಾಗಿಯೇ ಕಾಣುವುದು. ಈಗ ದಿಗಂತದ ಅಂಚಿನಲ್ಲಿ ಕಾಣುವ ಚುಕ್ಕೆ ಮಂಗಳಗ್ರಹ. ದಿನ ಕಳೆದಂತೆ ಶುಕ್ರ-ಗುರು ಸಮೀಪಿಸುವುದನ್ನು ಕಾಣಬಹುದು.




ಬುಧಗ್ರಹವನ್ನು ಈ ತಿಂಗಳು ನೋಡುವುದು ಸಾಧ್ಯವೇ ಇಲ್ಲ ಎನ್ನಬಹುದು. ಶನಿ ಗ್ರಹವನ್ನು ಖಂಡಿತಾ ನೋಡಬಹುದು. ಏಕೆಂದರೆ ಅದು ಮಧ್ಯರಾತ್ರಿಗೇ ಉದಯಿಸುತ್ತದೆ. ಬೆಳಗಿನ ಜಾವಕ್ಕೆ ನೆತ್ತಿಯ ಮೇಲೇ ಕಾಣುತ್ತದೆ. ಏಳರಂದು ಚಂದ್ರನ ಪಕ್ಕ ಕಾಣುವ ಚುಕ್ಕೆಯೇ ಶನಿಗ್ರಹ.

ಹ್ಯಾಲೀ ಧೂಮಕೇತು ಬಿಟ್ಟುಹೋದ ತುಣುಕುಗಳು ಒತ್ತಟ್ಟಿಗೆ ಅದರ ಕಕ್ಷೆಯಲ್ಲಿ ಸೇರಿಕೊಂಡಿವೆ. ಅವನ್ನು ಭೂಮಿ ೨೦-೨೧ರಂದು ಸಮೀಪಿಸಲಿದೆ. ಆಗ ಈ ಕಣಗಳು ಭೂಮಿಯತ್ತ ಧಾವಿಸುವುವು; ಗಾಳಿಯಲ್ಲಿ ಉರಿದು ಬೂದಿಯಾಗುವುವು. ನಮಗೆ ಉಲ್ಕೆಗಳಂತೆ ಆಕಾಶದ ದೀಪಾವಳಿಯ ನೋಟ ಒದಗಿಸುವುವು. ಇದಕ್ಕೆ ಅಕ್ವಾರಿಡ್ಸ್ ಎಂದು ಹೆಸರು.

ಹೊಸ ಧೂಮಕೇತುವೊಂದು ಸೂರ್ಯನನ್ನು ಸಮೀಪಿಸಿದೆ. ಎಎಸ್‌ಎಎ ಎಂಬ ಹೆಸರಿನ ಇದು ಅಕ್ಟೋಬರ್ ೭ರಂದು ಸೂರ್ಯನಿಗೆ ಅತಿ ಸಮೀಪವಾಗಿ ಹಾದುಹೋಗಲಿದೆ. ಕೇವಲ (!) ೧೫ ಮಿಲಿಯನ್ ಕಿ.ಮೀ.ಗಳ ಈ ದೂರ ಅದಕ್ಕೆ ಪ್ರಾಣಾಂತಿಕವಾಗಬಹುದು ಎಂದು ನಿರೀಕ್ಷೆ. ಸೆಪ್ಟೆಂಬರ್ ಮೊದಲ ವಾರದಲ್ಲಿ ಇದು ಪತ್ತೆಯಾಯಿತು. ಅದು ಬದುಕಿ ಉಳಿದರೆ ಅಕ್ಟೋಬರ್ ಕೊನೆಯ ಭಾಗದಲ್ಲಿ ಬೆಳಗಿನ ಜಾವ ಕಾಣಬಹುದು.

ಇನ್ನೊಂದು ಧೂಮಕೇತು ಮೆಕ್‌ಹೋಲ್ಝ್ ಪ್ರಕಾಶ ಪಡೆಯುತ್ತಿದೆ. ಜನವರಿಯಲ್ಲಿ ಬರಿಗಣ್ಣಿಗೆ ಕಾಣುವಂತಾಗಬಹುದು ಎಂದು ನಿರೀಕ್ಷೆ.

## ಖಗೋಳ ದಿನಚರಿ

೩ ಶುಕ್ರ ಗ್ರಹ-ಮಘ ನಕ್ಷತ್ರ ಜೋಡಿ
೫ ಚಂದ್ರ ಭೂಮಿಯಿಂದ ಗರಿಷ್ಠ ದೂರದಲ್ಲಿ
೬ ಚಾಂದ್ರಮಾಸದ ಕೊನೆಯ ಪಾದ-ಚಂದ್ರೋದಯ ನಡುರಾತ್ರಿಗೆ
೭ ಚಂದ್ರ-ಶನಿ ನಡುವೆ ಕನಿಷ್ಠ ಕೋನ
೧೦ ಮಘ-ಚಂದ್ರ ನಡುವೆ ಕನಿಷ್ಠಕೋನ
೧೧ ಶುಕ್ರ-ಚಂದ್ರ ನಡುವೆ ಕನಿಷ್ಠಕೋನ
೧೩ ಗುರು-ಮಂಗಳ-ಚಂದ್ರಗಳ ಪುಟ್ಟ ತ್ರಿಕೋಣ
೧೪ ಬೆಳಿಗ್ಗೆ ೦೮:೧೮ಕ್ಕೆ ಅಮಾವಾಸ್ಯೆ. ಪಾರ್ಶ್ವ ಸೂರ್ಯಗ್ರಹಣ. ಚೀನಾ, ರಷ್ಯಾ, ಜಪಾನ್‌ನಿಂದ ಕಾಣುವುದು
೧೮ ಚಂದ್ರ ಭೂಮಿಯಿಂದ ಕನಿಷ್ಠ ದೂರದಲ್ಲಿ
೧೯ ಭೂಮಿ-ಶನಿ-ಸೂರ್ಯ ಕೋನ ಸರಿಯಾಗಿ ೯೦ ಡಿಗ್ರಿ
೨೦ ಚಾಂದ್ರಮಾಸದ ಮೊದಲ ಪಾದ-ಚಂದ್ರಾಸ್ತ ನಡುರಾತ್ರಿಗೆ
೨೧ ಅಕ್ವಾರಿಡ್ಸ್ ಉಲ್ಕಾವೃಷ್ಟಿ
೨೮ ಬೆಳಿಗ್ಗೆ ೮:೩೭ಕ್ಕೆ ಹುಣ್ಣಿಮೆ
ಚಂದ್ರಗ್ರಹಣ-ಗುಜರಾತ್‌ನಿಂದ ಚಂದ್ರಾಸ್ತದ ವೇಳೆಗೆ ಆರಂಭ (ಅಮೆರಿಕದವರಿಗೆ ಪೂರ್ಣ ಗ್ರಹಣದ ನೋಟ ಲಭ್ಯ)


**ಡಾ|| ಬಿ. ಎಸ್. ಶೈಲಜಾ**
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

# ಕನ್ನಡ ಸಾಹಿತ್ಯ ಮತ್ತು ದಲಿತತತ್ವ

ಕನ್ನಡ ಸಾಹಿತ್ಯದಲ್ಲಿ ಪ್ರಮುಖವಾಗಿ ಎರಡು ಧಾರೆಗಳಿವೆ. ಒಂದು, ಹಸಿದವರ ಧಾರೆ. ಇನ್ನೊಂದು, ಹೊಟ್ಟೆ ತುಂಬಿದವರ ಧಾರೆ. ಹಸಿದವರ ಧಾರೆಯನ್ನು ಹಸಿವಿನ ಧಾರೆಯೆಂದೂ, ಹೊಟ್ಟೆ ತುಂಬಿದವರ ಧಾರೆಯನ್ನು ಸಂತೃಪ್ತಿಯ ಧಾರೆಯೆಂದೂ ಕರೆಯಬಹುದು. ಇಲ್ಲಿಯ ಹಸಿವು ಕೇವಲ ಹೊಟ್ಟೆ ಮೂಲದ ದೈಹಿಕ ಹಸಿವು ಮಾತ್ರ ಆಗಬೇಕಿಲ್ಲ. ಅದನ್ನೂ ಒಳಗೊಂಡ ಸಾಮಾಜಿಕ ಹಸಿವೂ ಆಗಿರಬಹುದು. ಅಂತಹ ಸಾಮಾಜಿಕ ಹಸಿವು ಸಮಾಜದಲ್ಲಿನ ಹಸಿವು, ಬಡತನ, ಮೌಢ್ಯ, ನಿರುದ್ಯೋಗ, ಜಾತೀಯತೆ ಮೊದಲಾದ ಅನೇಕ ಸಾಮಾಜಿಕ ಅನಿಷ್ಟಗಳನ್ನು ಕೇಂದ್ರೀಕರಿಸಿ ಅವುಗಳಿಂದ ಸಮಾಜವು ಮುಕ್ತವಾಗಬೇಕೆಂದು ಹಾತೊರೆಯುತ್ತಿರುತ್ತದೆ. ಇಂತಹ ಹಸಿವು ನಿತ್ಯ ನೋವನ್ನುಣ್ಣುವ ಸಮುದಾಯಗಳಿಗೆ ಸಹಜವಾಗಿಯೇ ಇರುತ್ತದೆ. ಆದ್ದರಿಂದ ಆ ಎಲ್ಲಾ ಜಾಡ್ಯಗಳಿಂದ ಹೊರಬರಬೇಕೆಂಬ ಹಂಬಲ ಮತ್ತು ಜಾಗೃತ ಪ್ರಜ್ಞೆ ಮೊದಲಿಗೆ ಅವರಲ್ಲಿ ಮೊಳೆಯುತ್ತದೆ. ಇದು ಸಹಜ.

ಇದಕ್ಕೆ ಹೊರತಾಗಿ ಮತ್ತೊಂದು ವರ್ಗವಿದೆ. ಅದು ಸಾಮಾಜಿಕವಾದ ಮೇಲ್ವರ್ಗ. ಈ ವರ್ಗವು ಸಾಮಾಜಿಕವಾಗಿ ಮಾತ್ರವಲ್ಲದೆ, ಆರ್ಥಿಕವಾಗಿಯೂ ಮೇಲ್ವರ್ಗವಾಗಿರುತ್ತದೆ. ಅದರ ಸಾಮಾಜಿಕ ಅಂತಸ್ತು ಮೂಲಭೂತವಾಗಿ ಅದರ ಆರ್ಥಿಕ ಬಲವನ್ನು ಆಧರಿಸಿ ನಿರ್ಮಾಣಗೊಂಡಿರುತ್ತದೆ ಎಂಬುದು ಇಲ್ಲಿಯ ಪ್ರಾಥಮಿಕ ಸತ್ಯ. ಈ ಹಿನ್ನೆಲೆಯಲ್ಲಿ ಸಮಾಜೋ ಆರ್ಥಿಕ ನೆಲೆಯಲ್ಲಿ ಮೇಲ್‌ಸ್ತರದಲ್ಲಿರುವ ವರ್ಗವು ಹೊಟ್ಟೆ ಮೂಲದ ದೈಹಿಕ ಹಸಿವಿಗೆ ದೂರವಿದ್ದು, ದೇಹದ ಸಮತೋಲನವನ್ನು ಕಾಪಾಡಿಕೊಳ್ಳುವುದಕ್ಕಾಗಿ ಉಪವಾಸ ವ್ರತ, ತಮ್ಮಲ್ಲಿಯ ಅಗತ್ಯ ಮೀರಿದ ಸಂಪತ್ತಿನ ಕಾರಣಕ್ಕಾಗಿ ದಾನ-ಧರ್ಮ ಎಂಬ ಆದರ್ಶಗಳನ್ನು ತಮ್ಮ ಮೌಲ್ಯವನ್ನಾಗಿಸಿಕೊಂಡಿರುತ್ತದೆ. ಇಂತಹ ವರ್ಗದಲ್ಲಿ ಕೆಲವರಾದರೂ ಸಮಾಜದಲ್ಲಿರುವ ಹಸಿವನ್ನು ಅಂದರೆ ವಿಶಾಲಾರ್ಥದ ಸಾಮಾಜಿಕ ಹಸಿವನ್ನು ತಮ್ಮದಾಗಿಸಿಕೊಂಡಿರುತ್ತಾರೆ. ಅಂತಹ ಸಾಮಾಜಿಕ ಹಸಿವಿನ ನೆಲೆಯಲ್ಲಿಯೇ ಬಸವಣ್ಣ ಮೊದಲಾದ ಸಮಾಜಬದ್ಧ ಚಿಂತಕರು ಕಾಣಿಸಿಕೊಂಡು, ಹಸಿವಿನ ಧಾರೆಯು ವಿಸ್ತರಣೆಗೊಳ್ಳುವುದು.

ಹೀಗೆ ಸಾಹಿತ್ಯದಲ್ಲಿರುವ ಹಸಿವಿನ ಧಾರೆಯನ್ನು ದೈಹಿಕವಾಗಿ ಹಸಿವಿನ ಅನುಭವವನ್ನು ಉಂಡವರು ಮತ್ತು ಅದರಾಚೆಗೆ ಸಮಾಜ ಬದಲಾಗಬೇಕೆಂಬ ಸಾಮಾಜಿಕ ಹಸಿವನ್ನು ಉಳ್ಳಂತಹ ಒಂದು ವರ್ಗವು ಕಟ್ಟಿಕೊಡುತ್ತದೆ. ಅಂತಹ ಕ್ರಿಯೆಯಲ್ಲಿ ಕಾಣುವ ಈ ವರ್ಗವು ವಚನಕಾರರಾಗಿ ಪ್ರಗತಿಶೀಲರಾಗುತ್ತಾರೆ, ನವ್ಯರಾಗಿ, ಬಂಡಾಯದವರಾಗುತ್ತಾರೆ. ಇದು ಕನ್ನಡದ ಚಾರಿತ್ರಿಕ ಗತಿಯಲ್ಲಿ ಕಾಣಿಸಿಕೊಂಡ ಹಸಿವಿನ ಧಾರೆಯ ಅವಸ್ಥಾಂತರದ ವೈವಿಧ್ಯ ರೂಪ. ಇದಕ್ಕೆ ಹೊರತಾದುದು ಸಂತೃಪ್ತಿಯ ಧಾರೆ.

ಸಂತೃಪ್ತಿಯ ಧಾರೆಯನ್ನು ಕಟ್ಟಿಕೊಡುವ ವರ್ಗದಲ್ಲಿ ದೈಹಿಕ ಮತ್ತು ಅದನ್ನು ಒಳಗೊಂಡ ಸಾಮಾಜಿಕ ಹಸಿವಿಗೆ ದೂರವುಳಿದ ಚಿಂತಕರ ಸಮಾವೇಶವಿದೆ. ಅವರಿಗೆ ಯಾವುದೇ ದೇಶವು ಪುಣ್ಯ ಭೂಮಿಯೇ ಆಗಿದೆ. ದೇಶದಲ್ಲಿರುವ ಎಲ್ಲಾ ಕೆಳ ಸಮುದಾಯಗಳು ತಮ್ಮ ಆಶೋತ್ತರಗಳಿಗೆ ಮಾತ್ರ ಪೂರಕವಾಗಿ ದುಡಿಯುತ್ತಾ ಬಂದಿರುವುದರಿಂದ ಅವರಿಗೆ ಸಮಾಜವೆಂಬುದು ಸ್ವರ್ಗವೇ ಆಗಿದೆ. ಅಂತಹ ಮನಸ್ಥಿತಿಯಲ್ಲಿ ಅವರಿಗೆ ತಮ್ಮ ಪಕ್ಕದಲ್ಲಿರುವ ವಾಸ್ತವದ ಕ್ರೂರ ಸತ್ಯಗಳು ಅನ್ಯರಿಗೆ ಎರವಾಗಿ ಮತ್ತು ತಮಗೆ ಮಾತ್ರ ಪೋಷಕವಾಗಿ ಇರುವುದರಿಂದ ಆ ಮೌಲ್ಯ ವ್ಯವಸ್ಥೆಯ ಕಾಯ್ದುಕೊಳ್ಳುವಿಕೆ ಮತ್ತು ರಾಜನ ಮೂಲಕ 'ರಾಜ್ಯ' ಎಂಬ ತಮ್ಮ ವರ್ಗದ ಪರವಾಗಿ ವ್ಯವಸ್ಥೆಯನ್ನು ಕಾಯುವ ಅಸ್ತ್ರವು ಉದಿಸುತ್ತದೆ. ಇಂತಹ ಸುಖದ ನೆಲೆಯಲ್ಲಿಯೇ ಸಂತೃಪ್ತಿಯ ಧಾರೆಯು ಕಾಣಿಸಿಕೊಳ್ಳುವುದು. ಅಲ್ಲಿ ಏಳುವ ಭಾವ ಮತ್ತು ಭೌತ ಸಾಮ್ರಾಜ್ಯದಲ್ಲಿ ತಾನು ಚಕ್ರವರ್ತಿಯಾಗಿ, ಗಂಧರ್ವ ರಾಜ್ಯವನ್ನು ಇಳೆಗೆ ಇಳಿಸುವುದು.

ಇಂತಹ ಸಂತೃಪ್ತಿಯ ಧಾರೆಯನ್ನು ಕಟ್ಟಿಕೊಡುವ ಸಾಹಿತ್ಯ ಕೃತಿಗಳು ರಮ್ಯ ಲೋಕದ ಅನಾವರಣಗಳಾಗಿವೆ. ರಸ, ಸೌಂದರ್ಯ, ರತಿ-ಶೃಂಗಾರ ಮೊದಲಾದ ಅನೇಕ ಲೀಲಾ ವಿಲಾಸಗಳಲ್ಲಿ ಅದು ಮೈತಳೆಯುತ್ತದೆ. ಅದಕ್ಕೆ ಪೂರಕವಾಗಿ ಆಕರ್ಷಣೀಯವಾದ ಛಂದೋಲಯಗಳು ಸಹ ನರ್ತಿಸುತ್ತವೆ. ಅಂತಹ ಕಾವ್ಯ ಲೋಕದಲ್ಲಿ ವಿಹರಿಸಿದವರಿಗೆ ಇಹವು ಬೇಡವಾಗಿ, ಪರವೇ ಸಾಕೆನಿಸುತ್ತದೆ.

ಹೀಗೆ ಸುಖದ ಸಾಮ್ರಾಜ್ಯದಲ್ಲಿ ಲೋಲುಪಗೊಳ್ಳುವ ಸಂತೃಪ್ತಿಯ ಕಣ್ಣು ಆಕಾಶದತ್ತ ತನ್ನ ದೃಷ್ಟಿಯನ್ನು ಹರಿಸಿದರೆ, ಸಾಮಾಜಿಕ ಅನಿಷ್ಟಗಳ ವಾಸ್ತವದಲ್ಲಿ ಮುಳುಗೇಳುವ ಹಸಿವಿನ ಕಣ್ಣು ನೆಲದತ್ತ ತನ್ನ ದೃಷ್ಟಿಯನ್ನು ಹರಿಯಿಸುತ್ತದೆ. ಇಲ್ಲಿಯೇ ಆಕಾಶ ಮತ್ತು ನೆಲ ಎಂಬ ಎರಡು ಪ್ರತಿಮೆಗಳು ಅಸ್ತಿತ್ವವನ್ನು ಪಡೆಯುವುದು.

ಒಟ್ಟಾರೆ ನೆಲ ಮತ್ತು ಆಕಾಶದ ಸತ್ಯವನ್ನು ಪ್ರತಿನಿಧಿಸುವ ಎರಡು ಭಿನ್ನ ಸಾಹಿತ್ಯಕ ಧಾರೆಗಳಲ್ಲಿ ಮೊದಲನೆಯದು ಸಾಮಾಜಿಕ ಬದ್ಧತೆಯನ್ನುಳ್ಳದಾಗಿದ್ದರೆ, ಎರಡನೆಯದು ಕಲೆಗಾಗಿ ಕಲೆ ಎಂಬ ಸೀಮಿತ ತತ್ವದೊಂದಿಗೆ ಬದ್ಧತೆಯನ್ನುಳಿಸಿಕೊಳ್ಳುವುದಾಗುತ್ತದೆ. ಈ ಎರಡನೆಯ ಧಾರೆಗೆ ಸಾಮಾಜಿಕ ಜವಾಬ್ದಾರಿ ಎಂಬುದು ಅತ್ಯಂತ ಅಲಕ್ಷ್ಯ ಮತ್ತು ಮೊದಲನೆಯ ಧಾರೆಯು ಸಮಾಜಕ್ಕಾಗಿ ತಾನು ಎಂಬ ನೆಲೆಯಲ್ಲಿ ಹೊರಟರೂ ಅದು ಕಲೆಯ ಮೂಲಕವಾಗಿಯೇ ಸಾಗುತ್ತದೆ ಎಂಬುದು ಅದರ ಹೆಚ್ಚುಗಾರಿಕೆಯಾಗುತ್ತದೆ.

ಹೀಗೆ, ಎರಡು ಭಿನ್ನ ಧಾರೆಗಳಲ್ಲಿ ಒಂದಾದ ಹಸಿವಿನ ಧಾರೆಯಲ್ಲಿ ದಲಿತ ಸಾಹಿತ್ಯವು ಕಾಣುತ್ತದೆ. ಇದು ಕನ್ನಡದ ಮಟ್ಟಿಗೆ, ಕರ್ನಾಟಕದ ಎಪ್ಪತ್ತರ ದಶಕದಲ್ಲಿ ಘಟಿಸಿದ ಚಾರಿತ್ರಿಕ ಮಹತ್ವದ ಸಂಗತಿಯಾಗಿದೆ. ಇಂತಹ ಸಾಹಿತ್ಯವು ಸಾಹಿತ್ಯಕ ಒತ್ತಾಸೆಯಲ್ಲಿ ಮಾತ್ರ ಮೂಡಿಬಾರದೆ, ಸಾಮಾಜಿಕ ಒತ್ತಾಸೆಯಲ್ಲಿ ಮುಖ್ಯವಾಗಿ ಮೂಡಿಬಂದಿದೆ ಎಂಬುದು ಇದರ ವಿಶಿಷ್ಟತೆಯಾಗಿದೆ. ಇಂತಹ ಸಾಮಾಜಿಕ ಒತ್ತಾಸೆಗಳಲ್ಲಿ ಮೂಡಿದ ಶರಣ ಮತ್ತು ಪ್ರಗತಿಶೀಲ ಸಾಹಿತ್ಯಗಳನ್ನು ಇಲ್ಲಿ ನೆನೆಸಿಕೊಳ್ಳಬೇಕು. ಆದರೂ ಈ ಎಲ್ಲಾ ಸಾಹಿತ್ಯಗಳಿಗೆ ಭಿನ್ನವಾದ ಇದರ ಸೃಷ್ಟಿ ಮತ್ತು ಸಂವೇದನೆಯಿದೆ ಎಂಬುದನ್ನು ಗುರುತಿಸಿಕೊಳ್ಳುವಲ್ಲಿ ಇದರ ಸಾಂಸ್ಕೃತಿಕ ಮಹತ್ವವು ವೇದ್ಯಗೊಳ್ಳುತ್ತದೆ.

ದಲಿತ ಜಗತ್ತು ಇದುವರೆಗೂ ಅಕ್ಷರಗಳ ಮೂಲಕ ಮಾತನಾಡಿಯೇ ಇರಲಿಲ್ಲ. ಕಾರಣ, ಅದಕ್ಕೆ ಅಕ್ಷರವು ದಕ್ಕಿರಲಿಲ್ಲ. ಇದಕ್ಕೆ ಅಪವಾದವೆಂಬಂತೆ ಅಲ್ಲೊಬ್ಬರು ಇಲ್ಲೊಬ್ಬರು ದಲಿತ ಮೂಲದ ಬರಹಗಾರರು ಮಾತನಾಡಿದರೂ ಅವರ ಧ್ವನಿ ಅತ್ಯಂತ ಕ್ಷೀಣವಾಗಿತ್ತು. ಇನ್ನೂ ಕೆಲವು ಧ್ವನಿಗಳು ಕ್ರಾಂತಿಕಾರಕವಾಗಿರದೆ, ಗಾಂಧೀ ಮಾದರಿಯ ಹರಿಜನೋದ್ಧಾರ ಎಂಬ ಸುಧಾರಣಾವಾದಿ ನೆಲೆಯದ್ದೂ ಮಾತ್ರವಾಗಿತ್ತು. ಆದ್ದರಿಂದಲೇ ೨೦ರ ದಶಕದ ಪೂರ್ವದಲ್ಲಿ ಕಂಡುಬಂದ ದಲಿತ ಮೂಲದ ಬರಹಗಾರರ ವಿಭಿನ್ನ ಸಾಂಸ್ಕೃತಿಕ ಸಂಘರ್ಷಗಳ ಸಾಹಿತ್ಯವು ಒಂದು ಪ್ರಸ್ಥಾನವಾಗಿ ಅಸ್ತಿತ್ವ ಪಡೆಯಲು ಸಾಧ್ಯವಾಗದೇ ಹೋದದ್ದು.

ಈ ಹಿನ್ನೆಲೆಯಲ್ಲಿ ೭೦ರ ದಶಕದಿಂದೀಚೆಗೆ ಕಾಣಿಸಿಕೊಂಡ ದಲಿತ ಸಾಹಿತ್ಯವನ್ನು ಪರಿಶೀಲಿಸಿಕೊಳ್ಳಬೇಕು. ಇಲ್ಲಿಯ ಸಾಹಿತ್ಯವು, ಈಗಾಗಲೇ ಹೇಳಿರುವಂತೆ, ಕೇವಲ ಸಾಹಿತ್ಯಕ ಒತ್ತಾಸೆಯಲ್ಲಿ ಮೂಡಿಬರದೆ ಸಾಮಾಜಿಕ ಒತ್ತಾಸೆಯಲ್ಲಿ ಮೂಡಿಬಂದುದಾಗಿದೆ. ಇಲ್ಲಿ ಚಳವಳಿಯಿದೆ. ಅದನ್ನು ಕಟ್ಟಿಕೊಟ್ಟ ಸಂಘಟನೆಯಿದೆ. ಆ ಸಂಘಟನೆಯನ್ನು ರೂಪು

ಡಾ || ಕಾ.ವೆಂ. ಶ್ರೀನಿವಾಸಮೂರ್ತಿ

**ದಲಿತ ಸಾಹಿತ್ಯ, ಚಿಂತನೆ ಮತ್ತು ಹೋರಾಟಗಳು ದಲಿತರನ್ನಷ್ಟೇ ಜಾಗೃತಿಗೊಳಿಸಲಿಲ್ಲ, ಅದರ ಮೂಲಕವಾಗಿ ಸ್ತ್ರೀ, ಮುಸ್ಲಿಂ ಇತರೆ ಹಿಂದುಳಿದ ವರ್ಗ ಮೊದಲಾದ ಅನೇಕ ಶೋಷಿತ ಸಮುದಾಯಗಳನ್ನು ಸಹ ಜಾಗೃತಗೊಳಿಸಿದೆ. ಇಂತಹ ವಿಶಾಲವಾದ ಸಾಂಸ್ಕೃತಿಕ ಮಹತ್ವವು ದಲಿತ ಚಳವಳಿಗಿದೆ. ಈ ಹಿನ್ನೆಲೆಯಲ್ಲಿಯೇ ಕಳೆದ ಮೂವತ್ತು ವರ್ಷಗಳಲ್ಲಿ ಸ್ತ್ರೀ, ಶೂದ್ರ, ಮುಸ್ಲಿಂ ಮೊದಲಾದ ಅನೇಕ ಸಮುದಾಯ ಮೂಲವಾದ ಶೋಷಿತ ಸಂವೇದನೆಗಳು ಕನ್ನಡದಲ್ಲಿ ನಿಚ್ಚಳವಾಗಿ ಕಾಣಿಸತೊಡಗಿದ್ದು ಶತಮಾನಗಳ ಉದ್ದಕ್ಕೂ ಮಾತನಾಡದವರು ಇಲ್ಲಿ ಒಮ್ಮೆಲೆ ಮಾತನಾಡಲು ತೊಡಗಿರುವುದು.**

ಗೊಳಿಸಿ, ಜೀವ ಕೊಟ್ಟ ಸಿದ್ಧಾಂತವಿದೆ. ಆ ಸಿದ್ಧಾಂತದಲ್ಲಿ ಮಾರ್ಕ್ಸ್‌ನನ್ನೊಳಗೊಂಡ ಅಂಬೇಡ್ಕರ್ ತೀವ್ರವಾಗಿ ಕಾಣುತ್ತಾರೆ. ಅಂತಹ ಕಾಣುವಿಕೆಯಲ್ಲಿ ಹೊಸ ರಾಜಕೀಯ ಅರ್ಥಶಾಸ್ತ್ರವು ಸಮಾಜಕ್ಕೆ ಪ್ರವೇಶಿಸುವ ಒತ್ತಾಯವು ಪುಟಿದೇಳುತ್ತಿದೆ. ಅಂತಹ ಸಮಾಜೋ ಆರ್ಥಿಕ ಚಳವಳಿಯಲ್ಲಿ ಭವಿಷ್ಯದ ಕಾಣ್ಕೆಯಷ್ಟೇ ಸ್ಥಾಯಿಯಾಗಿರದೆ, ಚರಿತ್ರೆಯೂ ಪುನಾರಚನೆಗೊಳಗಾಗುತ್ತಿದೆ. ಈ ಎಲ್ಲದರ ಸಮಗ್ರೀಕೃತ ಕನ್ನೆ ನೆಲದಲ್ಲಿ ಹುಟ್ಟಿದ ದಲಿತ ಸಾಹಿತ್ಯವು ತನ್ನನ್ನು ವಿವರಿಸಿಕೊಳ್ಳಲು ಬೇಕಾದ ಹೊಸ ಮೀಮಾಂಸೆ ಮತ್ತು ಅದರೊಳಗಿನ ಮಾನದಂಡಗಳನ್ನು ತನ್ನ ಮೂಲಕವೇ ಕಟ್ಟಿಕೊಳ್ಳುತ್ತಿದೆ. ಈ ಹೊಸ ಸಾಹಿತ್ಯ ಮೀಮಾಂಸೆಯು ತನ್ನ ವಿವರಣೆಗಾಗಿಯಲ್ಲದೇ ತನ್ನ ಪೂರ್ವದ ಅಭಿಜಾತವೆನಿಸಿದ ಸಾಹಿತ್ಯ ಮತ್ತು ಸಂಸ್ಕೃತಿಗಳನ್ನು ಸಹ ವಿವರಿಸಿಕೊಳ್ಳಲು ಅನೇಕ ಒಳನೋಟಗಳನ್ನು ನೀಡುತ್ತಿದೆ. ಈ ಎಲ್ಲದರ ಪರಿಣಾಮವಾಗಿ ದಲಿತ ಸಾಹಿತ್ಯವು ಕನ್ನಡ ಸಾಹಿತ್ಯಕ್ಕಷ್ಟೇ ವಿಸ್ತರಣೆಯಾಗಿ ಬರದೆ ಅದರ ಮೀಮಾಂಸೆ ಎಂಬ ಜ್ಞಾನಶಿಸ್ತಿಗೂ ಹೊಸ ವಿಸ್ತರಣೆಯಾಗಿ ಬಂದಿದೆ.

ಹೀಗೆ ದಲಿತ ಸಾಹಿತ್ಯದ ಮೂಲಕವಾಗಿ ನಮ್ಮ ಸಾಮಾಜಿಕ ಜಗತ್ತಿನ ಅಂಚಿನಲ್ಲಿ ಉಸಿರಿಡಿದು ಬದುಕುತ್ತಾ ಬಂದಿದ್ದ ಸಾವಿರಾರು ವರ್ಷಗಳ ಶೋಷಿತ ಮತ್ತು ಅಲಕ್ಷಿತ ಸಂವೇದನೆಗಳು ಭಾರತೀಯ ಚಿಂತನೆಯ ಪ್ರಧಾನ ಸ್ತರಕ್ಕೇರುವಂತಾಯಿತು. ಇಂತಹ ಬೆಳವಣಿಗೆಯು ಹೋರಾಟದ ಹಾದಿಯನ್ನು ಹಿಡಿದು ಭವಿಷ್ಯವನ್ನು ಕಟ್ಟಿಕೊಳ್ಳುವ ಅದಮ್ಯ ಉತ್ಸಾಹದಲ್ಲಿ ಸಾಹಿತ್ಯ ಭವನಗಳಾಚೆಗೂ ಕಂಡುಬಂದಿತು. ಇದು ವರ್ತಮಾನ ಮತ್ತು ಪರಂಪರೆಗಳನ್ನು ಮುಖಾಮುಖಿಗೊಳಿಸಿಕೊಂಡ ಜಾಗೃತಾವಸ್ಥೆಯಲ್ಲಿ ಪ್ರಕಟಗೊಂಡ ದಲಿತತ್ವದ ಕ್ರಿಯಾರೂಪವಾಗಿದೆ.

ದಲಿತ ಸಾಹಿತ್ಯ, ಚಿಂತನೆ ಮತ್ತು ಹೋರಾಟಗಳು ದಲಿತರನ್ನಷ್ಟೇ ಜಾಗೃತಿಗೊಳಿಸಲಿಲ್ಲ, ಅದರ ಮೂಲಕವಾಗಿ ಸ್ತ್ರೀ, ಮುಸ್ಲಿಂ ಇತರೆ ಹಿಂದುಳಿದ ವರ್ಗ ಮೊದಲಾದ ಅನೇಕ ಶೋಷಿತ ಸಮುದಾಯಗಳನ್ನು ಸಹ ಜಾಗೃತಗೊಳಿಸಿದೆ. ಇಂತಹ ವಿಶಾಲವಾದ ಸಾಂಸ್ಕೃತಿಕ ಮಹತ್ವವು ದಲಿತ ಚಳವಳಿಗಿದೆ. ಈ ಹಿನ್ನೆಲೆಯಲ್ಲಿಯೇ ಕಳೆದ ಮೂವತ್ತು ವರ್ಷಗಳಲ್ಲಿ ಸ್ತ್ರೀ, ಶೂದ್ರ, ಮುಸ್ಲಿಂ ಮೊದಲಾದ ಅನೇಕ ಸಮುದಾಯ ಮೂಲವಾದ ಶೋಷಿತ ಸಂವೇದನೆಗಳು ಕನ್ನಡದಲ್ಲಿ ನಿಚ್ಚಳವಾಗಿ ಕಾಣಿಸತೊಡಗಿದ್ದು, ಶತಮಾನಗಳ ಉದ್ದಕ್ಕೂ ಮಾತನಾಡದವರು ಇಲ್ಲಿ ಒಮ್ಮೆಲೆ ಮಾತನಾಡಲು ತೊಡಗಿರುವುದು. ಆ ಮಾತುಗಳು ಬೀದಿಗಳಲ್ಲಿ ಹೆಜ್ಜೆಗಳಾಗಿಯೂ ಮಾರ್ಪಟ್ಟು, ಸ್ಥಾಪಿತ ಹಿತಾಸಕ್ತಿಗಳು ಎಚ್ಚರದಿಂದ ಅವುಗಳನ್ನು ಗಮನಿಸುವಂತಾಗಿದೆ. ಇಂತಹ ಚಳವಳಿ ಮೂಲದ ಸಾಹಿತ್ಯವು ಹೆಚ್ಚು ಅಧ್ಯಯನ ಯೋಗ್ಯವಾಗಬೇಕಿತ್ತು. ಆ ಅಧ್ಯಯನದಲ್ಲಿ ಮನುಷ್ಯವಾದೀ ಸಿದ್ಧಾಂತವು ಚಲನೆಗೊಂಡು ಸಮಕಾಲೀನ ಮತ್ತು ಚಾರಿತ್ರಿಕ ವಾಸ್ತವಗಳು ಹೆಚ್ಚು ಅರಿವಿಗೆ ಬರಬೇಕಿತ್ತು. ಅಂತಹ ಸಾಹಿತ್ಯವಾದ ವಿಶಾಲಾರ್ಥದ ಬಂಡಾಯ ಸಾಹಿತ್ಯವು ಔಪಚಾರಿಕ ಶಿಕ್ಷಣವಾದ ಶಾಲಾ-ಕಾಲೇಜುಗಳ ಪಠ್ಯಗಳಲ್ಲಿ ನಿಯಾಮಕವಾಗಬೇಕಿತ್ತು. ಅದನ್ನು ಮೊದಲಿಗೆ ಗುರುಗಳು ಕಲಿತು, ಅನಂತರದಲ್ಲಿ ಅದನ್ನು ಶಿಷ್ಯರಿಗೆ ಬೋಧಿಸಬೇಕಾಗಿತ್ತು. ಆದರೆ ಏಕೋ ಏನೋ ಈ ಜನಪರ ಸಾಹಿತ್ಯ ಮತ್ತು ಅದರ ಚಿಂತನೆಯು ಸಮಾಜವಾದಿಯಾಗಬೇಕಿದ್ದ ಶಿಕ್ಷಣ ಕ್ಷೇತ್ರದಲ್ಲಿ ಮುಖ್ಯ ಸ್ಥಾನವನ್ನು ಪಡೆಯಲೇ ಇಲ್ಲ. ಆದ್ದರಿಂದ ಶಾಲೆಯಿಂದ ವಿಶ್ವವಿದ್ಯಾಲಯದವರೆಗೂ ಕನ್ನಡ ಸಾಹಿತ್ಯವೆಂದಾಗ ಅದು ಪಂಪನಿಂದ ಹಿಡಿದು 'ಅಡಿಗ'ರವರೆಗೆ ಮಾತ್ರ ಬಂದು ನಿಂತುಬಿಡುತ್ತದೆ. ಅದರಾಚೆ ಇರುವ ದಲಿತ ಅಥವಾ ಬಂಡಾಯ ಸಾಹಿತ್ಯಕ್ಕೆ ಮೀಸಲಾತಿಯ ರೂಪದಲ್ಲಿ ದೇವನೂರು ಮತ್ತು ಸಿದ್ಧಲಿಂಗಯ್ಯನವರು ಪಠ್ಯವಾಗುತ್ತಾರೆ. ಇದರಿಂದಾಚೆಗೆ ಈ ಶೇ. ೧೮ ಬೆಳೆಯುವುದೇ ಇಲ್ಲ. ಇದು ಇವತ್ತಿನವರೆಗೂ ಸತ್ಯ. ಪ್ರಾಚೀನ, ಮಧ್ಯಕಾಲೀನ, ನವೋದಯ ಮತ್ತು ನವ್ಯ – ಈ ನಾಲ್ಕು ಘಟ್ಟ – ಪಂಥಗಳಿಗೆ ನೀಡಿದ ಪ್ರಾತಿನಿಧ್ಯದ ಹಿನ್ನೆಲೆಯಲ್ಲಿ ಪಠ್ಯವಾಗಿರುವ ಬಂಡಾಯ ಸಾಹಿತ್ಯವನ್ನು ಗಮನಿಸಿ ಆಡಿದ ಮಾತುಗಳು ಇವಾಗಿವೆ. ಬಂಡಾಯದಂತೆ ಪ್ರಗತಿಶೀಲವೂ ಇಲ್ಲಿ ನಿರ್ಲಕ್ಷ್ಯಕ್ಕೊಳಗಾಗಿರುವುದು ಸೋದರ ಚಿಂತನೆಗಳಿಗೊದಗಿದ ದುಸ್ಥಿತಿಯನ್ನು ತೋರುತ್ತದೆ.

ಹೀಗೆ ಜನಪರ ಸಾಹಿತ್ಯಕ್ಕೊದಗಿದ ಮೀಸಲಾತಿ ರೂಪದ ಅವಸ್ಥೆಗೆ ಸಾಮಾಜಿಕ ಬದ್ಧತೆಗೆ ದೂರವಾದ ಮನಸ್ಸುಗಳು ಕಾರಣವಾಗಿವೆ. ಇನ್ನೊಂದೆಡೆಯಲ್ಲಿ, ತಾವು ಸಾಮಾಜಿಕ ಬದ್ಧತೆಯನ್ನು ತೋರ್ಪಡಿಸಿಕೊಳ್ಳುವ ಸಾಹಿತ್ಯವನ್ನು ಬರೆದವರಾಗಿಯೂ ಆಳದಲ್ಲಿ ಅವರ ಬಗೆಗೆ ಕೀಳರಿಮೆಯನ್ನು ಮತ್ತು ನವ್ಯದಂತಹ ಸಾಹಿತ್ಯ ಚಿಂತಕರ ಬಗೆಗೆ ಅನಗತ್ಯ ಭ್ರಮೆ ಹಾಗೂ ಮೇಲರಿಮೆಯನ್ನು ಇಟ್ಟುಕೊಂಡಿರುವುದರಿಂದ ಅಂಥವರು ಸದಸ್ಯರಾಗಿದ್ದ ಸಮಿತಿಗಳ ಮೂಲಕವಾಗಿ ಬಂಡಾಯದ ಪುಸ್ತಕಗಳು ಪಠ್ಯಗಳಾಗದೇ ಹೋಗಿವೆ. ವಿದ್ಯಾರ್ಥಿಗಳ ಮಧ್ಯೆ ಅವು ಚರ್ಚೆಗೆ ದೂರವೂ ಆಗಿವೆ. ಈ ಹಿನ್ನೆಲೆಯಲ್ಲಿ ಪಠ್ಯ ಮತ್ತು ಶಾಲಾ-ಕಾಲೇಜುಗಳಾಚೆಗಿನ ಬಯಲು ವೇದಿಕೆಗಳಲ್ಲಿ ದಲಿತ-ಬಂಡಾಯ ಸಾಹಿತ್ಯದ ಅಸ್ತಿತ್ವವು ಮುಖ್ಯವಾಗಿ ಇದೆ ಎಂಬುದನ್ನು ಗಮನಿಸಬೇಕು. ಆದ್ದರಿಂದ ಯಾರಾದರೂ ದಲಿತ-ಬಂಡಾಯ ಸಾಹಿತ್ಯದ ಬಗೆಗಿನ ಅರಿವನ್ನು ಹೊಂದಿದ್ದರೆ ಅಥವಾ ಅದರ ಮೂಲಕ ತಾವೂ ಆ ಮನೋಧರ್ಮದ ಬರಹಗಾರರಾಗಿದ್ದರೆ ಅದು ಶಾಲಾ-ಕಾಲೇಜು ಮತ್ತು ಅದರ ಪಠ್ಯಗಳಿಂದ ಅಲ್ಲ; ಅದರಾಚೆಗೆ ಸಾಧ್ಯವಾದ ಕಲಿಕೆಯಿಂದ ಮಾತ್ರ ಎಂಬುದು ಇಲ್ಲಿಯ ಅತ್ಯಂತ ಮುಖ್ಯ ಮಾರ್ಮಿಕ ಸತ್ಯವಾಗುತ್ತದೆ.

ದಲಿತ ಸಾಹಿತ್ಯವು ದಲಿತರಲ್ಲಿ ಆತ್ಮಜಾಗೃತಿಯನ್ನುಂಟುಮಾಡಿದೆ. ಇದು ಮುಖ್ಯ. ಆದರೆ ಅಷ್ಟೇ ಮುಖ್ಯವಾಗಿ ಅವರಲ್ಲಿ ಆತ್ಮಗೌರವವನ್ನು ಉಂಟುಮಾಡಬೇಕಿದೆ. ಇಂತಹ ಆತ್ಮಗೌರವದ ಉದ್ದೀಪನಕ್ಕೆ ದಲಿತ ಸಂಸ್ಕೃತಿಯು ಪೂರಕವಾಗಿದೆ. ಅದನ್ನು ಭಾರತದ ಸಾಮಾಜಿಕ ಶ್ರೇಣೀಕೃತ ವ್ಯವಸ್ಥೆ ಮತ್ತು ಅದರೊಳಗಿನ ಹಿಂಸೆಯನ್ನು ಕುರಿತ ವ್ಯಾಖ್ಯಾನದಲ್ಲಿ ಕಂಡುಕೊಳ್ಳಬಹುದಾಗಿದೆ.

ಭಾರತೀಯ ಶ್ರೇಣೀಕೃತ ಜಾತಿವ್ಯವಸ್ಥೆಯಲ್ಲಿ ದಲಿತ ಸಂಸ್ಕೃತಿಯು ಅತ್ಯಂತ ಕೆಳ ಅಥವಾ ತಳಮಟ್ಟದಲ್ಲಿದೆ. ಹಾಗಾಗಿ ಇದು ತನ್ನ ಮೇಲಿನ ಎಲ್ಲಾ ೪೦೦೦ ಜಾತಿಗಳಿಂದ ತುಳಿಸಿಕೊಂಡಿದೆ. ತಾನು ಎಷ್ಟೇ ಬೆವರು ಹರಿಸಿ, ಸಂಪತ್ತನ್ನು ಉತ್ಪಾದಿಸಿದರೂ ಅದರ ಬಹುಭಾಗವು ಮೇಲ್ವರ್ಗದ ಪಾಲಾಗುತ್ತಾ ಬಂದಿದೆ. ದುಡಿಮೆಯನ್ನೆ ಬದುಕನ್ನಾಗಿಸಿಕೊಂಡರೂ ಗೇಣುದ್ದದ ಹೊಟ್ಟೆ ತುಂಬಿಸಿಕೊಳ್ಳಲಾಗದ ಈ ಸಂಸ್ಕೃತಿಯು ಹಸಿವಿನಿಂದ ದಾನಕ್ಕೆ ಕೈ ಚಾಚಿದೆ. ಆ ದಾನವನ್ನು ನೀಡಿದ ಕೈ ತಾನು ಮೇಲೆ ನಿಂತು, ಅದಕ್ಕಾಗಿ ಒಡ್ಡಿದ ಕೈಯನ್ನು ಕೆಳಗೆ ಶಾಶ್ವತವಾಗಿ ಇರಿಸಿದೆ. ಇದು ದುಡಿಮೆಗೆ ತಕ್ಕ ನ್ಯಾಯ ಸಿಗದ ಆರ್ಥಿಕ ಶೋಷಣೆ. ಇಂತಹ ಶೋಷಣೆಯನ್ನು ಅನುಭವಿಸಿದ ದಲಿತ ಸಂಸ್ಕೃತಿಯು ಸೇಡಿನ ರೂಪದಲ್ಲಿ ತನ್ನ ಮೇಲಿನ ಯಾವ ಸಂಸ್ಕೃತಿಯನ್ನೂ ಶೋಷಣೆಗೆ ಒಳಪಡಿಸಲಿಲ್ಲ. ತಾನು ಜಾತಿಯ ಕಾರಣಕ್ಕಾಗಿ ಸಹ ಸಾಮಾಜಿಕ ಅಪಮಾನಕ್ಕೊಳಗಾದರೂ ತನ್ನ ಮೇಲಿನ ಯಾವ ಜಾತಿಯವರನ್ನೂ ನಿಂದಿಸುವ, ಹಿಂಸಿಸುವ ಕ್ರೌರ್ಯಕ್ಕಿಳಿಸಲಿಲ್ಲ. ಅಲ್ಲೆಲ್ಲಾ ಮಾನವೀಯತೆಯನ್ನೇ ಮೆರೆದಿದೆ.

ಹೀಗೆ ಸಾಮಾಜಿಕ ಮತ್ತು ಆರ್ಥಿಕ ಹಿಂಸೆಗೆ ಒಳಗಾದ ದಲಿತ ಸಂಸ್ಕೃತಿಯು ತಾನು ಯಾವುದೇ ಸಂಸ್ಕೃತಿಯನ್ನು ಸಾಮಾಜಿಕವಾಗಿ ಅಪಮಾನಗೊಳಿಸದೆ, ಆರ್ಥಿಕವಾಗಿ ಹಿಂಸಿಸದೆ ಬಂದಿರುವುದು ಅದರ ಶ್ರೇಷ್ಠತೆಯನ್ನು ತೋರುತ್ತದೆ. ಆ ಯಾವುದೇ ಹಿಂಸೆಯನ್ನು ತಾನು ಮಾಡದೆ ಪಾವಿತ್ರ್ಯತೆಯನ್ನು ಚರಿತ್ರೆಯ ಉದ್ದಕ್ಕೂ ಉಳಿಸಿಕೊಂಡು ಬಂದಿದೆ. ಅಂತಹ ಶ್ರೇಷ್ಠ ಸಂಸ್ಕೃತಿಯು ಇವತ್ತು ಆತ್ಮಗೌರವದಿಂದ ಕಾಣಿಸಿಕೊಳ್ಳಬೇಕಾಗಿದೆ. ಅದಕ್ಕಾಗಿ ದಲಿತ ಸಾಹಿತ್ಯ ಮತ್ತು ಚಿಂತನೆಗಳು ಹೋರಾಟ ಮತ್ತು ಕೃತಿಗಳಿಗೆ ಹೊಸ ರೂಪವನ್ನು ನೀಡಬೇಕಾಗಿದೆ. ಈ ನಿಟ್ಟಿನಲ್ಲಿ ದಲಿತ ಸಂಸ್ಕೃತಿಗೆ ತನ್ನನ್ನು ಕುರಿತ ಕೀಳರಿಮೆಗೆ ಕಾರಣವಿಲ್ಲ ಮತ್ತು ಅದರಿಂದ ತಾನು ಪಾಠವನ್ನು ಹೇಳಬೇಕಾಗಿದೆ. ಅಂತಹ ಪಾಠಕ್ಕೆ ಅರ್ಹತೆ ಪಡೆಯುವ ಶೋಷಕ ಸಂಸ್ಕೃತಿಗಳು ಚರಿತ್ರೆಯಲ್ಲಿನ ತಮ್ಮ ತಪ್ಪುಗಳಿಗಾಗಿ ಪಾಪಪ್ರಜ್ಞೆಯನ್ನು ಬೆಳೆಸಿಕೊಳ್ಳಬೇಕಾಗಿದೆ. ಅಂತಹ ಪಾಪ ಅಥವಾ ಅಪರಾಧವನ್ನು ಮತ್ತೊಮ್ಮೆ ಮಾಡದ ದಿಟ್ಟತನವನ್ನು ತೋರಬೇಕಾಗಿದೆ. ಆ ಮೂಲಕ ಮಾನವರಾಗುವ ಶೋಷಕ ವರ್ಗದ ಮನಸ್ಸುಗಳು ಸರ್ವಸಮಾನತೆಯ ನಾಡ ಕಟ್ಟುವಿಕೆಗೆ ಮುಂದಾಗಬೇಕಾಗಿದೆ. (ಈ ಎರಡು ಚರಣಗಳ ವಿಚಾರಗಳು ಶ್ರೀ ಸುಬ್ಬು ಹೊಲೆಯಾರವರ ಕವನ ಸಂಕಲನಕ್ಕೆ ಋಣಿಯಾಗಿವೆ).

ದಲಿತರಿಗೆ 'ಅಕ್ಷರ'ವಿಲ್ಲ. ಅದನ್ನು ಅವರು ಮುಟ್ಟುವುದು ಅಕ್ಷಮ್ಯ ಅಪರಾಧ. ಇದು 'ಭವ್ಯ'ವೆಂದು ಜಾಹೀರಾತುಗೊಳ್ಳುತ್ತಿರುವ ಭಾರತೀಯ ಸಂಸ್ಕೃತಿಯಲ್ಲಿನ ದೊಡ್ಡ ತೂತು! ಆದ್ದರಿಂದ ದಲಿತರು ಅಕ್ಷರದ ಮೂಲಕವಾಗಿ ಅಭಿವ್ಯಕ್ತಿಗೊಳ್ಳುವುದಕ್ಕೆ ಸಾಧ್ಯವಾಗದೆ ನಿಸರ್ಗದ ಕೊಡುಗೆಯಾದ ನಾಲಗೆ ಅಥವಾ ಮಾತು – ಇದರ ಮೂಲಕ ಮಾತ್ರ ಅಭಿವ್ಯಕ್ತಿಗೊಳ್ಳುವುದಕ್ಕೆ ಸಾಧ್ಯವಾಯಿತು. ಆದ್ದರಿಂದ ದಲಿತರ ಪಾರಂಪರಿಕ ಸ್ಮೃತಿ ಮತ್ತು ಸಂವೇದನೆಗಳ ಅರಿಯುವಿಕೆಗಾಗಿ ಭ್ರಷ್ಟಗೊಂಡ 'ಅಕ್ಷರ'ಕ್ಕೆ ಎಳಸಬಾರದು; ಮಾತಿಗೆ ಮೊರೆ ಹೋಗಬೇಕು. ಆಗ ದಲಿತ ಲೋಕದೊಳಗಿನ ಪುರಾಣಗಳು ನಮ್ಮೊಂದಿಗೆ ಮಾತ ನಾಡುತ್ತವೆ. ಅವುಗಳ ಮೂಲಕವಾಗಿ ದಲಿತರಿಗೆ ಚರಿತ್ರೆಯಿಲ್ಲ ಎಂಬ ಅಪವಾದವನ್ನು ತಪ್ಪಿಸಬಹುದಾಗಿದೆ. ಈ ನಿಟ್ಟಿನಲ್ಲಿ ಚರಿತ್ರೆಯನ್ನು ಗಟ್ಟಿ ಮಾಡುವ ಕ್ರಿಯೆ ಸಮಕಾಲೀನತೆಯನ್ನು ಪೂರೈಸುತ್ತದೆಂದು ಆಶಿಸಬಹುದಾಗಿದೆ. ಅಂತಹ ಸಮಕಾಲೀನತೆಯಲ್ಲಿ ಮಾತ್ರ ಕೋಮುವಾದ ಮತ್ತು ನವಬಂಡವಾಳಶಾಹಿಯೆಂಬ ಶ್ರವಣಾಸುರನಿಗೆ ಚಮ್ಮಾಳಿಗೆಯನ್ನು ಇಕ್ಕಬಹುದಾಗಿದೆ.

ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ
ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ, ಜ್ಞಾನಭಾರತಿ, ಬೆಂಗಳೂರು - ೫೬೦ ೦೫೬



# ವಾಸ್ತು ಎಂಬ ಅವಾಸ್ತವಿಕ ಭೂತ!

**ಭಾ**ರತೀಯ ಜೀವನ ವಿಧಾನದಲ್ಲಿ ಪುರೋಹಿತರು ಬಿತ್ತಿದ ಮೌಢ್ಯದ ಕಳೆ, ವೈಜ್ಞಾನಿಕ ಯುಗದಲ್ಲಿರುವ ನಮ್ಮೆಲ್ಲರನ್ನೂ ಬೆಂಬಿಡದ ಭೂತವಾಗಿ ತಿಕ್ಕಿ-ಮುಕ್ಕಿ ಕಾಡುತ್ತಿದೆ. ಇತ್ತೀಚಿನ ದಿನಮಾನಗಳಲ್ಲಿ ಜೋತಿಷ್ಯ – ವಾಸ್ತು ಹೆಸರಿನ ಮೇಲೆ ನಡೆದಿರುವ ನಂಗಾನಾಚುವೇ ಇದಕ್ಕೊಂದು ಉತ್ತಮ ಉದಾಹರಣೆಯಾಗಿದೆ. ಅದೇನು ಕಾರಣವೋ ಇಷ್ಟುದಿನ ಕೆಲವರಿಗೆ ಮಾತ್ರ ತಲೆಕೆಡಿಸುತ್ತಿದ್ದ ವಾಸ್ತು ಇಂದು ಶ್ರೀಮಂತರ ಹಾಗೂ ಮಧ್ಯಮವರ್ಗದ ಜನಗಳ ಜಂಘಾ ಬಲವನ್ನೇ ನುಂಗಿ ಕುಂತಿದೆ. ಯಾವಾಗ ಜೋತಿಷ್ಯಶಾಸ್ತ್ರವೂ ಒಂದು ವಿಜ್ಞಾನ, ಅದನ್ನು ಪಠ್ಯ ಪುಸ್ತಕದಲ್ಲೂ ಅಳವಡಿಸಬೇಕು ಎಂಬ ಎತ್ತುಗಡೆ ಈ ದೇಶದಲ್ಲಿ ಮತ್ತೆ ಶುರುವಾಯಿತೋ ಅಂದೇ ಈ ರೋಗ ಕ್ರಿಮಿಗಳು ಮತ್ತಷ್ಟು ಚಿಗಿತುಕೊಂಡವು. ಈಗ ಇದು ರೆಕ್ಕೆ ಪುಕ್ಕವನ್ನು ಬೆಳೆಸಿಕೊಂಡು ನಮ್ಮೆಲ್ಲರ ದುರ್ಬಲ ಮನಸ್ಸುಗಳ ಮೇಲೆ ತನ್ನ ಧಾಳಿ ಶುರುವಿಟ್ಟುಕೊಂಡಿದೆ.

ಈಗ ನೀವು ಯಾವುದೇ ಹೊಸ ಮನೆ ಕಟ್ಟಿಸಬೇಕೆಂದಿದ್ದರೂ ಈ ವಾಸ್ತು ಪಂಡಿತರನ್ನು ಅವಶ್ಯವಾಗಿ ಭೇಟಿಯಾಗಲೇಬೇಕು ಎಂಬ ಪದ್ಧತಿಯೇ ಬೆಳೆಯುತ್ತಿದೆ. ಅ-ವಾಸ್ತುವಾಗಿರುವ ಮನೆಗಳಿಂದಲೇ ನಮಗೆ ಏನೆಲ್ಲ ಕಷ್ಟ-ನಷ್ಟಗಳು, ಜಡ್ಡು-ಜಾಪತ್ರೆಗಳು, ಆರ್ಥಿಕ ಏರು ಪೇರುಗಳು ಉಂಟಾಗುತ್ತವೆ! ಈ ಮನೆಯಲ್ಲಿ ಯಾರಾದರೂ ಸಕ್ಕರೆ ಕಾಯಿಲೆಗೆ ಒಳಗಾದರೆ, ರಕ್ತದೊತ್ತಡ ಹೆಚ್ಚಾಗುತ್ತಿದ್ದರೆ, ಮಕ್ಕಳಾಗದಿದ್ದರೆ, ಬುದ್ಧಿಭ್ರಮಣೆಗೆ ಒಳಗಾದರೆ, ವ್ಯಾಪಾರ-ವಹಿವಾಟು ಕುಂಠಿತವಾಗುತ್ತಿದ್ದರೆ – ನೀವು ಒಮ್ಮಿಂದೊಮ್ಮೆ ಮಿನಿಸ್ಟರ್, ಕ್ಯಾಬಿನೆಟ್ ಮಿನಿಸ್ಟರ್ ಆಗಬೇಕಾದರೆ, ಸಿ. ಎಂ. ಆಗಿದ್ದರೆ, ಈ ಖುರ್ಚಿ ಭದ್ರವಾಗಿ ಉಳಿಯಬೇಕಾದರೆ – ಒಟ್ಟಿನಲ್ಲಿ ಮನುಷ್ಯನ ಏನೆಲ್ಲ ಒಳಿತು ಕೆಡುಕುಗಳಿಗೂ ಈ ವಾಸ್ತುವೇ ಕಾರಣ ಎಂಬುದು ಈ ಅಳಲೆಕಾಯಿ ಪಂಡಿತರ ಲೆಕ್ಕಾಚಾರ. ವಾಸ್ತು ಪ್ರಕಾರ ಇಲ್ಲದ ಗುಡಿಗಳೂ (ಗರ್ಭಗುಡಿಯಲ್ಲಿ ಎಂಥ ಪವರ್‌ಫುಲ್ ದೇವರಿದ್ದರೂ) ಸಹ ಜನರನ್ನು ಆಕರ್ಷಿಸುವಲ್ಲಿ ವಿಫಲವಾಗುತ್ತವಂತೆ! ಹಾಗೂ ಆ ದೇವರುಗಳಲ್ಲಿಯ ಶಕ್ತಿಯೇ ಕುಂಠಿತವಾಗುತ್ತದಂತೆ. ಈ ವಾಸ್ತು ಪುರುಷ ನಿಜಕ್ಕೂ ದೇವರಿಗಿಂತಲೂ ಹೆಚ್ಚು ಬಲಾಢ್ಯನಂತೆ! ಹಾಗಾದರೆ ಈ ವಾಸ್ತು ಪುರುಷ ಯಾರು? ಎಂಬ ಜಿಜ್ಞಾಸೆಗೆ ತೊಡಗಿದರೆ ಕುತೂಹಲದ ಕತೆಯೊಂದು ನಮ್ಮೆದುರು ಬಿಚ್ಚಿಕೊಳ್ಳುತ್ತದೆ.

ಈ ವಾಸ್ತುಪುರುಷ ಎಂಬುದೊಂದು ಮಹಾಭೂತ. ಅಂಧಕಾಸುರ ಎಂಬ ಮಹಾ ರಾಕ್ಷಸನನ್ನು ವಧಿಸುವಾಗ ಶಿವನಂಥ ಶಿವನೇ ಕ್ಷಣ ಬೆವತು ಹೋದನಂತೆ. ಆ ಬೆವರಿನ ಹನಿಯಿಂದಲೇ ಭಯಂಕರ ಆಕೃತಿಯ ವಾಸ್ತು ಎಂಬ ಭೂತ ಹುಟ್ಟಿಕೊಂಡಿತಂತೆ! ಮುಂದಾಲೋಚನೆ ಎಂಬುದೇ ಇಲ್ಲದ ಶಿವ ಏನೆಲ್ಲವಕ್ಕೂ ತಥಾಸ್ತು ಎಂದುಬಿಟ್ಟು ಆನಂತರ ಫಜೀತಿ ಅನುಭವಿಸುವಂತೆ ಇಲ್ಲೂ ಒದ್ದಾಡಿ ಹೋಗುತ್ತಾನೆ. ಈ ವಾಸ್ತುವೆಂಬ ರಾಕ್ಷಸನಿಗೆ ತಪಸ್ಸಿನ ಫಲವಾಗಿ ವರವನ್ನೂ ದಯಪಾಲಿಸುತ್ತಾನೆ. ಶಿವನಿಂದ ವರ ಪಡೆದ ಈ ರಾಕ್ಷಸ, ಆ ಶಕ್ತಿಯನ್ನು ಎಲ್ಲೆಡೆ ಪ್ರಕಟಿಸಿ – ತನ್ನ ಅಗಾಧತೆಯನ್ನು ಮೆರೆಯತೊಡಗಿತಂತೆ. ಆಗ ಮೂರು ಲೋಕದ ಜನವೇ ತತ್ತರಗೊಂಡರಂತೆ. ಭೂಲೋಕದ ಜೀವಿಗಳನ್ನಂತೂ ಹೈರಾಣ ಮಾಡಿತಂತೆ. ಆಗ ದೇವಾನುದೇವತೆಗಳೆಲ್ಲ ಕೂಡಿ ಈ ವಾಸ್ತುವಿನ ಅಟಾಟೋಪ ಕೊನೆಗಾಣಿಸಲೇಬೇಕು ಎಂದು ನಿರ್ಧರಿಸಿಕೊಂಡರಂತೆ. ಎಂಥದೋ ಒಂದು ಐಡಿಯಾ ಮಾಡಿ ಕೊನೆಗೂ ಈ ವಾಸ್ತುವನ್ನು ಹಿಡಿದು ಬೋರಲಾಗಿ ಮಲಗಿಸಿಬಿಟ್ಟರು. ದೇವಾನು ದೇವತೆಗಳೆಲ್ಲ ವಾಸ್ತುವಿನ ಮೈಮೇಲೆ ಏರಿ ಕುಳಿತುಕೊಂಡರು. ಬ್ರಹ್ಮ ಮಾತ್ರ ಆ ವಾಸ್ತುವಿನ ಮಧ್ಯದಲ್ಲಿ, ಅದು ಇನ್ನು ಮೇಲೇಳದಂತೆ ಗಟ್ಟಿಮುಟ್ಟಾಗಿ ಕುಳಿತನಂತೆ. ಈ ವಿಕಾರವಾದ – ಅಗಾಧ ಶಕ್ತಿಯನ್ನು ಪಡೆದುಕೊಂಡ ರಾಕ್ಷಸನೇ ವಾಸ್ತುಪುರುಷನಾಗಿದ್ದಾನೆ.

ಈತ ಪ್ರತಿಯೊಂದು ಪ್ಲಾಟ್‌ನಲ್ಲೂ ಬೋರಲಾಗಿ ಮಲಗಿಕೊಂಡಿರುತ್ತಾನಂತೆ. ಆತನ ತಲೆಯು ಈಶಾನ್ಯ ದಿಕ್ಕಿನಲ್ಲೂ, ಬಲತೋಳು ಪೂರ್ವ ದಿಕ್ಕಿಗೂ, ಎಡ ತೋಳು ಉತ್ತರ ದಿಕ್ಕಿಗೂ, ಅವನ ಬಲ ಮೊಣಕಾಲು ಮೊಣಕೈಯು ಆಗ್ನೇಯ ದಿಕ್ಕಿಗೂ, ಎಡ ಮೊಣಕೈ, ಮೊಣಕಾಲು ವಾಯುವ್ಯ ದಿಕ್ಕಿಗೂ, ಬಲ ಮುಂಗಾಲು ದಕ್ಷಿಣ ದಿಕ್ಕಿಗೂ, ಎಡ ಮುಂಗಾಲು ಪಶ್ಚಿಮ ದಿಕ್ಕಿಗೂ, ಹಾಗೂ ಎರಡೂ ಪಾದಗಳು ನೈರುತ್ಯ ದಿಕ್ಕಿಗೂ ಚಾಚಿಕೊಂಡಿರುತ್ತವೆ ಎಂದು ಹೇಳಲಾಗುತ್ತದೆ. ವಾಸ್ತು ಎಂಬ ಈ ರಾಕ್ಷಸ ಮಲಗಿರುವ ತಲೆ ಅಥವಾ ದೃಷ್ಟಿಯ ಕಡೆ ಹಾಗೂ ಪಾದದ ಕಡೆ ಯಾರು ನಿರ್ಮಾಣ ಕಾರ್ಯ ಮಾಡುತ್ತಾರೋ ಅಂಥವರಿಗೆ ಮಾತ್ರವೇ ನೀನು ಇನ್ನು ಮುಂದೆ ತೊಂದರೆ ಕೊಡಬಹುದು ಎಂದು ದೇವತೆಗಳೆಲ್ಲ ಸೇರಿ ಹೊಸ ತಿದ್ದುಪಡಿಯ ಫರ್ಮಾನು ಹೊರಡಿಸಿದರಂತೆ. ಆ ದಿನದಿಂದ ಇವತ್ತಿನ ದಿನಗಳ ವರೆಗೂ ಈ ಆಜ್ಞೆಯನ್ನು ವಾಸ್ತು ಚಾಚು ತಪ್ಪದೆ ಪಾಲಿಸುತ್ತಿದೆಯಂತೆ. ತನ್ನ ಮುಖ, ಕಣ್ಣು ಹಾಗೂ ಕಾಲುಗಳಿರುವ ದಿಕ್ಕಿಗೆ ಎಂಥದೇ ಅಗಾಧ ಶಕ್ತಿಯುಳ್ಳವನೇ ಕಟ್ಟಡವನ್ನು ಕಟ್ಟಿದ್ದರೂ

> ವಾಸ್ತುವನ್ನು ನಂಬುವವರು ಬಹುತೇಕರು ದಿಢೀರನೆ ಶ್ರೀಮಂತರಾದವರು ಹಾಗೂ ಒಮ್ಮೆಲೇ ಅಧಿಕಾರದ ಅತ್ಯುನ್ನತದ ಪದವಿಗೆ ಏರಿದವರು. ಇವರ ಯೋಗ್ಯತೆಗಿಂತಲೂ ಮೀರಿದ ಅಧಿಕಾರ/ಹಣ ಸಂಗ್ರಹವಾಗತೊಡಗಿದೊಡನೆ ಅದೇನು ಕಾರಣವೋ ಇವರ ಮನಸ್ಸು ಒಳಗೊಳಗೇ ಪೊಳ್ಳಾಗತೊಡಗುತ್ತದೆ. ಮೇಲೆ ನೋಡಿದರೆ, ಗಟ್ಟಿಮುಟ್ಟಾಗಿ ಕಾಣುವ ಇವರು ಒಳಗೊಳಗೇ ಔಡಲದ ಗಿಡವಾಗಿರುತ್ತಾರೆ. ಪಾಪಪ್ರಜ್ಞೆಯಿಂದ ನರಳುತ್ತಿರುತ್ತಾರೆ. ಇಂಥ ಸಂದರ್ಭದಲ್ಲಿ ಯಾವುದೇ ಒಬ್ಬ ಪುಡಗೋಸಿ ಪುರೋಹಿತ ಹೇಳಿದ ಮಾತನ್ನು ಕೇಳಿ ತಮ್ಮ ಪಾಪವನ್ನು ತೊಳೆದುಕೊಳ್ಳಬೇಕೆಂಬ ಹಂಬಲದಲ್ಲಿರುತ್ತಾರೆ.
>
> ■
>
> ವಿಶ್ವಾರಾಧ್ಯ ಸತ್ಯಂಪೇಟೆ

# ಭವ್ಯ ಭಾರತ ನಮ್ಮೆಲ್ಲರ ನೆಲೆ
# ಸ್ವಾತಂತ್ರ್ಯೋತ್ಸವ ನಮ್ಮೆಲ್ಲರ ಸ್ಫೂರ್ತಿಯ ಸೆಲೆ

ಭಾರತದ ಸ್ವಾತಂತ್ರ್ಯೋತ್ಸವ ಎಂದರೆ ಸತ್ಯ, ಅಹಿಂಸೆ, ಸಹಿಷ್ಣುತೆಗಳಂತಹ ಹಲವು ಉದಾತ್ತ ತತ್ವಗಳತ್ತ ನಮ್ಮೆಲ್ಲರ ಗಮನ ಸೆಳೆಯುವುದರೊಂದಿಗೆ ಅವುಗಳನ್ನು ಪರಿಪಾಲಿಸುವಂತೆ ಸದಾ ಪ್ರೇರಣೆ ಒದಗಿಸುವ ಅತ್ಯಪೂರ್ವ ಅವಕಾಶ.

**ಸಮೃದ್ಧ ಕರ್ನಾಟಕ - ಸದೃಢ ಹೆಜ್ಜೆ**

* ಕೃಷಿ-ಕೃಷಿ ವಲಯಕ್ಕೆ ಉತ್ತೇಜನ ನೀಡಲು ೪೧೨ ಕೋಟಿ ರೂ.ಗಳ ಯೋಜನಾ ಅನುದಾನ ೮೪೦ ಕೋಟಿ ರೂ.ಗಳಿಗೆ ಹೆಚ್ಚಳ.
* ಕೃಷಿ ಉತ್ಪನ್ನಗಳಿಗೆ ಮಾರುಕಟ್ಟೆ ಬೆಂಬಲಕ್ಕಾಗಿ ೧೦೦ ಕೋಟಿ ರೂ.ಗಳ ಆವರ್ತ ನಿಧಿ.

**ಗ್ರಾಮೀಣಾಭಿವೃದ್ಧಿ**

* ಗ್ರಾಮೀಣ ಜನತೆಯ ಬದುಕಿಗೆ ಹೊಸ ಚೇತನ ನೀಡಲು ರೂ. ೬೯೦ ಕೋಟಿಗಳ ಜಲಾನಯನ ಯೋಜನೆ. ರೂ. ೬೭೦ ಕೋಟಿ ವೆಚ್ಚದಲ್ಲಿ ಕೆರೆ ನಿರ್ವಹಣಾ ಯೋಜನೆ ಮತ್ತು ರೂ. ೧೦೩೫ ಕೋಟಿ ವೆಚ್ಚದಲ್ಲಿ ಗ್ರಾಮೀಣ ನೀರು ಸರಬರಾಜು ಯೋಜನೆ ಅನುಷ್ಠಾನ.
* ಹಿಂದುಳಿದ ವರ್ಗಗಳ ಸ್ವಯಂ ಉದ್ಯೋಗಕ್ಕಾಗಿ ರೂ. ೨೦ ಕೋಟಿಯೊಂದಿಗೆ ಶ್ರಮಶಕ್ತಿ ಯೋಜನೆ.

**ಪ್ರಾಥಮಿಕ ಶಿಕ್ಷಣ**

* ಅಕ್ಷರ ದಾಸೋಹ ಸರ್ಕಾರಿ ಮತ್ತು ಅನುದಾನಿತ ಶಾಲೆಗಳಲ್ಲಿರುವ ೭ನೇ ತರಗತಿವರೆಗಿನ ಎಲ್ಲಾ ಮಕ್ಕಳಿಗೂ ವಿಸ್ತರಣೆ. ಹೆಚ್ಚುವರಿಯಾಗಿ ೨೫ ಲಕ್ಷ ಶಾಲಾ ಮಕ್ಕಳು ಫಲಾನುಭವಿಗಳು.

**ಆರೋಗ್ಯ**

* ಮುಂದಿನ ೫ ವರ್ಷಗಳಲ್ಲಿ ರೂ. ೭೬೫ ಕೋಟಿ ವೆಚ್ಚದಲ್ಲಿ ಆರೋಗ್ಯ ಮತ್ತು ಪೌಷ್ಟಿಕಾಂಶ ಯೋಜನೆಯ ಅನುಷ್ಠಾನ. ಸಾರ್ವಜನಿಕ ಆರೋಗ್ಯವರ್ಧನೆ ಮತ್ತು ಆರೋಗ್ಯ ರಕ್ಷಣೆಗೆ ಹೆಚ್ಚಿನ ಸೌಲಭ್ಯ.
* ಯಶಸ್ವಿನಿ ಯೋಜನೆಯ ಮುಂದುವರಿಕೆ ಎಲ್ಲಾ ರೈತರ ಆರೋಗ್ಯ ರಕ್ಷಣೆಗಾಗಿ ಸಂಜೀವಿನಿ ಆರೋಗ್ಯ ವಿಮೆ.

**ನೀರಾವರಿ**

* ಕೃಷ್ಣಾ ಮೇಲ್ದಂಡೆ ಯೋಜನೆಯಡಿ ವಿವಿಧ ಹಂತದಲ್ಲಿರುವ ಎಲ್ಲಾ ನೀರಾವರಿ ಕಾಮಗಾರಿಗಳು ಡಿಸೆಂಬರ್ ೨೦೦೫ರೊಳಗೆ ಪೂರ್ಣ.

**ಸಮಾಜ ಕಲ್ಯಾಣ**

* ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಸಣ್ಣ ರೈತರಿಗೆ ಮತ್ತಷ್ಟು ಪ್ರೋತ್ಸಾಹ ನೀಡಲು ಗಂಗಾ ಕಲ್ಯಾಣ ಕಾರ್ಯಕ್ರಮದಡಿ ರೂ. ೧೩ ಕೋಟಿಗಳ ಹೆಚ್ಚುವರಿ ಅನುದಾನ.
* ಸಮಾಜ ಕಲ್ಯಾಣ ಕಾರ್ಯಕ್ರಮಗಳಿಗೆ ಯೋಜನಾ ಅನುದಾನದಲ್ಲಿ ಗಮನಾರ್ಹ ಹೆಚ್ಚಳ. ರೂ. ೩೯೬ ಕೋಟಿಯಿಂದ ರೂ. ೪೩೫ ಕೋಟಿ ಏರಿಕೆ.

**ಕನ್ನಡ ಮತ್ತು ಸಂಸ್ಕೃತಿ**

* ಈ ನಾಡಿನ ನೆಲ, ಜಲ ಮತ್ತು ವಿಶಿಷ್ಟ ಸಂಸ್ಕೃತಿಯ ಪಾಲನೆ, ಪೋಷಣೆ ಮತ್ತು ಅಭಿವೃದ್ಧಿಗೆ ವಿಶೇಷ ಒತ್ತು. ಐತಿಹಾಸಿಕ ಸ್ಥಳಗಳಾದ ಮೈಸೂರು, ಶ್ರೀರಂಗಪಟ್ಟಣ, ಬೀದರ್, ಬಿಜಾಪುರ, ಗುಲ್ಬರ್ಗಾ ಮತ್ತು ಕಿತ್ತೂರು ಪಟ್ಟಣಗಳನ್ನು ಪರಂಪರೆ ಕೇಂದ್ರಗಳೆಂದು ಘೋಷಿಸಲಾಗುವುದು.
* ಕೂಡಲ ಸಂಗಮ ಮಾದರಿಯಲ್ಲೇ ಬಸವ ಕಲ್ಯಾಣದ ಅಭಿವೃದ್ಧಿಗೆ ಕ್ರಮ.

**ಪ್ರಾದೇಶಿಕ ಅಸಮಾನತೆ ನಿವಾರಣೆಯತ್ತ ದಿಟ್ಟ ಹೆಜ್ಜೆ**

* ಪ್ರಾದೇಶಿಕ ಅಸಮಾನತೆಯ ನಿವಾರಣೆಗಾಗಿ ಶ್ರೀ ನಂಜುಂಡಪ್ಪ ಸಮಿತಿ ಮಾಡಿರುವ ಶಿಫಾರಸ್ಸುಗಳು ಹಂತ ಹಂತವಾಗಿ ಜಾರಿ.
* ಉತ್ತರ ಕರ್ನಾಟಕದ ಅಭಿವೃದ್ಧಿಗೆ ರೂ. ೭,೧೭೦ ಕೋಟಿಗಳ ಬೃಹತ್ ಯೋಜನಾ ಅನುದಾನ. ಇದು ರಾಜ್ಯದ ಒಟ್ಟಾರೆ ಯೋಜನಾ ಗಾತ್ರದ ಶೇ. ೫೪ರಷ್ಟು.
* ಉತ್ತರ ಕರ್ನಾಟಕದ ತೀರ ಹಿಂದುಳಿದ ೩೭ ತಾಲ್ಲೂಕುಗಳ ಸಮಗ್ರ ಅಭಿವೃದ್ಧಿಗೆ ಆದ್ಯತೆ.
* ಉತ್ತರ ಕರ್ನಾಟಕವೂ ಸೇರಿದಂತೆ ರಾಜ್ಯದ ಹಿಂದುಳಿದ ಪ್ರದೇಶಗಳ ಅಭಿವೃದ್ಧಿಗಾಗಿ ಅವುಗಳಿಗೆ ವಿಶೇಷ ಸ್ಥಾನಮಾನ ನೀಡಲು ಸಂವಿಧಾನದ ೩೭೧ನೇ ವಿಧಿಗೆ ತಿದ್ದುಪಡಿ ತರಲು ಕೇಂದ್ರಕ್ಕೆ ಒತ್ತಾಯ.

ರಾಷ್ಟ್ರದ ಸಂಪದಭಿವೃದ್ಧಿಯಲ್ಲಿ ನಾವೆಲ್ಲರೂ ಭಾಗಿಗಳು  ಕರ್ನಾಟಕ ವಾರ್ತೆ

ಆತನನ್ನು ತೊಂದರೆಗೀಡುಮಾಡುವ ಸಂಪೂರ್ಣ ಅಧಿಕಾರ ಈ ಭೂತಕ್ಕಿದೆ. ಅಂದ ಮೇಲೆ ಕೇಳಬೇಕೇ? ಅದು ಅವರಿವರೆನ್ನದೆ ಎಂತೆಂಥವರನ್ನೂ ನುಂಗಿ ನೊಣೆಯುತ್ತ ಹೊರಟಿದೆ. ದೇವಾನು ದೇವತೆಗಳೆ ಇದಕ್ಕೆ ಕಾಲಕಸ ಅಂದ ಮೇಲೆ ಯಃಕಶ್ಚಿತ್ ಮನುಷ್ಯ ಜೀವಿ ಇದಕ್ಕೆ ಯಾವ ಲೆಕ್ಕ?

ಇಂಥ ಕಲ್ಪಿತ ಕತೆಯಲ್ಲಿ ಹುಟ್ಟಿದ ವಾಸ್ತುವಿನ-ವಾಸ್ತವವನ್ನೇ ಅರಿಯದ ಮೂಢ ಜನತೆಗೆಲ್ಲ ಇದನ್ನೊಂದು ವಿನ್ಯಾಸ ಶಾಸ್ತ್ರ ಎಂದು ಪುರೋಹಿತರೆಲ್ಲ ಕರೆದರೆ, ಎಲ್ಲರೂ ಕುಂಡೆ ಬಾಯಿ ಮುಚ್ಚಿಕೊಂಡು ತೆಪ್ಪಗೆ ಕುಳಿತಿದ್ದಾರೆ. ಸುಳ್ಳನ್ನು ಹತ್ತಾರು ಸಲ ಹೇಳುವುದರಿಂದ ಅದು ಸತ್ಯವೇ ಆಗುತ್ತದೆ ಎಂದು ಖಚಿತವಾಗಿ ತಿಳಿದುಕೊಂಡಿರುವ ಪುರೋಹಿತರು ಮಾತ್ರ ಇದನ್ನು ಎಂಥವರೂ ನಂಬುವಂತೆ ಹೇಳುತ್ತಲೇ ನಡೆದಿದ್ದಾರೆ. ದೇಶದ ಅತ್ಯುನ್ನತ ಪದವಿಗೆ ಏರಿದ ರಾಷ್ಟ್ರಪತಿ-ಪ್ರಧಾನಮಂತ್ರಿ ಹಾಗೂ ಕ್ಯಾಬಿನೆಟ್ ರ‍್ಯಾಂಕ್‌ನ ಹಲವಾರು ಜನರೇ ಈ ವಾಸ್ತು ಹೇಳುವವರ ಮಾತಿಗೆ ಬೆಚ್ಚಿಬಿದ್ದಿರುವಾಗ ಸಾಮಾನ್ಯ ಜನತೆಯ ಗತಿ ಏನಾಗಬೇಡ? ವಿಚಾರವೆಂದರೆ ಏನು? ಎಂಬುದನ್ನೇ ಅರಿಯದ ರಾಜಕಾರಣಿಗಳನ್ನೇ ಶ್ರೇಷ್ಠರು ಎಂದು ತಿಳಿದುಕೊಂಡಿರುವ ಈ ದೇಶದ ಜನತೆ ಅಕ್ಷರಶಃ ಹಳ್ಳದ ದಾರಿಯನ್ನೇ ಹುಡುಕಿಕೊಂಡು ಮುನ್ನಡೆದಿದ್ದಾರೆ.

ಸ್ವಾತಂತ್ರ್ಯದ ನಂತರ ಭಾರತ ಎದುರಿಸುವ ಸಮಸ್ಯೆಗಳೆಲ್ಲವಕ್ಕೂ, ಸಂಸತ್ತು ತತ್ತಿಯ ಆಕಾರವಾಗಿರುವುದೇ ಕಾರಣ ಎಂಬುದು ಈ ಮಾನ್ಯರ ಅಭಿಮತ. ಅಷ್ಟೇ ಏಕೆ? ಪ್ರಧಾನಿ ಗದ್ದುಗೆ ಏರಿ ಅನಂತರ ಕೆಲವು ಧೂರ್ತರ ಹಿತಾಸಕ್ತಿಗೆ ಬಲಿಯಾದ ಲಾಲಬಹಾದ್ದೂರ ಶಾಸ್ತ್ರಿ, ಇಂದಿರಾ ಗಾಂಧಿ ಮತ್ತು ರಾಜೀವ ಗಾಂಧಿಯವರ ಸಾವಿಗೂ ಅವಾಸ್ತುವಾಗಿರುವ ಸಂಸತ್ತೇ ಕಾರಣವಾಗಿದೆಯಂತೆ! ಹೀಗೆ ಏನೆಲ್ಲ ನೆವಗಳನ್ನು ಹೇಳಿ ನಮ್ಮ ದೇಶದ ಪ್ರಜಾತಂತ್ರದ ಗೌರವಾನ್ವಿತ ಕಟ್ಟಡವನ್ನೇ ಹಾಳುಮಾಡುವ ಹುನ್ನಾರ ಇವರದು. ಹೀಗೆ ಹೇಳಲು ಈ ಪುರೋಹಿತರಿಗೆ ಅದೆಷ್ಟು ಧಾರ್ಷ್ಟ್ಯ? ಇಂಥ ದೇಶದ್ರೋಹಿ ಮಾತುಗಳನ್ನಾಡಿಯೂ ದಕ್ಕಿಸಿಕೊಳ್ಳುವ ಛಾತಿ ಇವರಿಗೆ ದಯಪಾಲಿಸಿದ್ದಾದರೂ ಯಾರು ?!

ಸಾಮಾನ್ಯನಿಂದ/ಅಸಾಮಾನ್ಯ(?)ನ ಮನದ ಕವಾಟಗಳಲ್ಲಿ ಭೀತಿಯನ್ನು ಬಿತ್ತಿದ ಪುರೋಹಿತಶಾಹಿ ಈಗ ಎಲ್ಲರ ಜೇಬುಗಳನ್ನು ಲೂಟಿ ಮಾಡುತ್ತಾ ಮುನ್ನಡೆದಿದೆ. ಯಾವುದೇ ಒಂದು ಕಟ್ಟಡ ನಿರ್ಮಾಣ ಮಾಡಬೇಕಾದರೂ ಕಟ್ಟಡದ ರಚನೆಯನ್ನು ಹಾಕಿ ಕೊಡುವ ಇಂಜನಿಯರ್‌ಗೆ ನಾವುಗಳೆಲ್ಲ ವಾಸ್ತುಪ್ರಕಾರವೇ ಪ್ಲ್ಯಾನ್ ಹಾಕಿಕೊಡಿರಿ ಎಂದು ಸಲಹೆ ನೀಡುವಷ್ಟು ಮುಂದುವರಿದಿದ್ದೇವೆ. ನಮ್ಮ ಈ ದೌರ್ಬಲ್ಯವನ್ನು ಚೆನ್ನಾಗಿಯೇ ಮನಗಂಡಿರುವ ಇಂಜನೀಯರ್‌ಗಳೂ ಸಹ ತಮಗೆ ಇಷ್ಟವಾಗದಿದ್ದರೂ ಅನಿವಾರ್ಯವಾಗಿ ತಮ್ಮ ಕಕ್ಷಿದಾರರನ್ನು ಖುಷಿಪಡಿಸಲು ವಾಸ್ತುವನ್ನು ಮತ್ತಷ್ಟು ಜಗ್ಗ್ಯಾಡುತ್ತಿದ್ದಾರೆ, ಜಟಿಲಗೊಳಿಸುತ್ತಿದ್ದಾರೆ. ವಾಸ್ತು ಎಷ್ಟು ಸಂಕೀರ್ಣವಾಗುತ್ತ ಹೋಗುತ್ತಿದೆಯೋ, ಅದು ಜನತೆಯನ್ನು ಇನ್ನಷ್ಟು ಮತ್ತಷ್ಟು ಭೀತಿಯ ಪ್ರಪಾತಕ್ಕೆ ತಳ್ಳುತ್ತಿದೆ. ಆದರೆ ವಾಸ್ತು ಪ್ರಕಾರ ಪ್ಲ್ಯಾನ್ ಹಾಕಿಕೊಟ್ಟ ಇಂಜನಿಯರ್‌ಗಳು ಮಾತ್ರ ಕುಬೇರರಾಗುತ್ತ ಮುನ್ನಡೆದಿದ್ದಾರೆ. ಆರ್ಕಿಟೆಕ್ಟ್ ಇಂಜನಿಯರ್ ಎಂದು ತೂಗುಹಾಕಿರುವ ಬೋರ್ಡಿನ ಇಂಜನಿಯರ್‌ಗಳನ್ನು ಇಂದು ಯಾರೂ ಕೇಳುವುದಿಲ್ಲ. ಅದೇ ವಾಸ್ತುತಜ್ಞ ಆರ್ಕಿಟೆಕ್ಟ್ ಇಂಜನಿಯರ್ ಎಂಬ ಅರೆಬೆಂದ ವ್ಯಕ್ತಿಯ ಮನೆಮುಂದೆ ಜನ ಕ್ಯೂ ನಿಂತಿರುತ್ತಾರೆ.

ಈ ವಾಸ್ತುವನ್ನು ಖಗೋಳಶಾಸ್ತ್ರ ಎಂದು ಕರೆಯುವವರಿಗೆ ನನ್ನ ಕೆಲವು ಪ್ರಶ್ನೆಗಳಿವೆ :

ವಾಸ್ತುಬದ್ಧವಾಗಿಯೇ ಕಟ್ಟಿದ ಮನೆಗಳೆಲ್ಲ ಭೂಕಂಪದಿಂದ ಗುಜರಾತಿನಲ್ಲಿ ಯಾವ ಮುನ್ಸೂಚನೆಯನ್ನೂ ಕೊಡದೆ ಬಿದ್ದುಹೋದವು. ಆಗ ಸಹಸ್ರಾರು ಜನ ಬೀದಿ ಪಾಲಾದರು. ಸಾವು ನೋವುಗಳು ಸಂಭವಿಸಿದವು. ಮಕ್ಕಳು-ಮರಿಗಳು ಎಂಬ ಯಾವ ಕನಿಕರವೂ ಇಲ್ಲದೆ ಆ ಭೂಕಂಪ ಎಂಬ ರಾಕ್ಷಸ ನುಂಗಿ ಕುಂತಿತು. ಆಂಧ್ರ, ಒರಿಸ್ಸಾದಲ್ಲಿಯ ಚಂಡಮಾರುತಕ್ಕೆ ಲಕ್ಷಾಂತರ ಮನೆಗಳು ಕೊಚ್ಚಿಹೋದವು. ನಾಗರಿಕ ಸಮಾಜವೇ ತತ್ತರಗೊಂಡಿತು. ಆ ಜನಗಳ ಆಕ್ರಂದನ, ಮಾನಸಿಕ ಬರ್ಬರತೆ ಕಂಡು ಮಾನವ ಸಮಾಜವೇ ಕ್ಷಣ ತಲ್ಲಣಗೊಂಡಿತು. ಆಗ ನಿಮ್ಮ ಯಾವ ವಾಸ್ತು ಪುರುಷ ರಕ್ಷಣೆ ಮಾಡಲಿಲ್ಲವೇಕೆ? ಶುಭ ಮುಹೂರ್ತದಲ್ಲಿಯೇ ಕಟ್ಟಡ ಕೆಲಸ ಆರಂಭಿಸಿದ ಮನೆಗಳು ಉರುಳುರುಳಿ ಬಿದ್ದು

ತಿಂದು ಉಗುಳುವ




ಬೆಲೆ ರೂ. **1-50**

ಕೊಂದು ಓದುವ ಪತ್ರಿಕೆ



ಬೆಲೆ ರೂ. **1-00** ಮಾತ್ರ!

* ಚಿದಾನಂದ ತಗ್ಗಿಹಳ್ಳಿ

ಹೋದವೇಕೆ? ಈ ಭಯಾನಕತೆಗೆ ನಮ್ಮ ನಾಗರಿಕ ಸಮಾಜ ಈಡಾಗುತ್ತದೆ ಎಂದು ಮೊದಲೇ ಅರಿತಿರುವ (?) ಜೋತಿಷಿಗಳು ಹೇಳಿದ್ದರೆ ಸಾಕಷ್ಟು ಸಾವು-ನೋವುಗಳನ್ನು ತಪ್ಪಿಸಬಹುದಿತ್ತಲ್ಲವೆ? ಮುಂದೆ ನಡೆಯುವ ಅನಾಹುತಗಳು ಗೊತ್ತಿದ್ದೂ ತೆಪ್ಪಗಿರುವ ಪುರೋಹಿತರನ್ನು ಶಿಕ್ಷೆಗೆ ಗುರಿಪಡಿಸಬಾರದೇಕೆ?

ಮತ್ತೊಂದು ತಮಾಷೆಯೆಂದರೆ :

ಜೋತಿಷ್ಯವನ್ನು ಏನಾದರೂ ಶಾಂತಿ ಮಾಡಿ ಬದಲಾಯಿಸಬಹುದು. ಏಕೆಂದರೆ ಅದರ ನೆಲೆಗಟ್ಟು ಗ್ರಹಗಳು. ಆದರೆ ಈ ವಾಸ್ತುವನ್ನು ಮಾತ್ರ ಅದೇಕೋ ಬದಲಾಯಿಸಲು ಬಾರದಂತೆ. ದಕ್ಷಿಣೆ, ಯಂತ್ರ, ಮಂತ್ರ, ತಂತ್ರಕ್ಕೂ ಇದು ಬೆದರದಂತೆ. ಹೋಮ, ಹವನ, ಯಜ್ಞ-ಯಾಗಗಳಿಗೂ ಇದು ಜಗ್ಗದಂತೆ. ವಾಸ್ತು ದೋಷವಿರುವ ಮನೆಗಳನ್ನೆಲ್ಲ ಸರಿಪಡಿಸುವುದೆಂದರೆ ಇವರ ಮನೆಮುರುಕ ಕೆಲಸಕ್ಕೆ ಮತ್ತೆ ಅವಕಾಶ ನೀಡಬೇಕಂತೆ! ಅಥವಾ ದೋಷ ತುಂಬಿರುವ ಆ ಮನೆಯನ್ನೇ ಬಿಟ್ಟು ಬೇರೆಡೆಗೆ ಹೋಗಬೇಕಂತೆ. ಇಲ್ಲವೆ ಸಂಪೂರ್ಣ ಆ ಮನೆಯನ್ನೇ ಕೆಡವಿ ಮತ್ತೊಮ್ಮೆ ಕಟ್ಟಬೇಕಂತೆ. ಮನೆ ಕೆಡವಿ ಕಟ್ಟುವುದರಿಂದ ಇವರಿಗೆ ಸಿಗುವ ಲಾಭಾಂಶವೇ ಬೇರೆ. ಯಜ್ಞ-ಯಾಗಾದಿಗಳಿಂದ ಇವರಿಗೆ ಸಿಗುವ ಲಾಭವೇ ಬೇರೆ. ಇವರ ಕಣ್ಣಿರುವುದು ತಮ್ಮ ಗಳಿಕೆಯತ್ತಲೇ ವಿನಃ ಗ್ರಾಹಕನ ಜೇಬಿನ ಕಡೆಗೆ ಇಲ್ಲ ಎಂಬುದು ಸ್ಪಷ್ಟವಾಗುತ್ತದೆ. ಆದರೆ ಈ ವಾದಕ್ಕೆ ವಿರುದ್ಧವಾಗಿ ಚೀನ ದೇಶದ ಫೆಂಗ್‌ಶೂಯಿ ಎಂಬ ವಾಸ್ತುಶಾಸ್ತ್ರ ಮಾತ್ರ ನಿಮ್ಮ ಮನೆಯಲ್ಲಿಯ ವಸ್ತುಗಳನ್ನು ಅದಲು ಬದಲು ಮಾಡುವುದರಿಂದಲೂ ವಾಸ್ತುದೋಷವನ್ನು ಸರಿಪಡಿಸಬಹುದು ಎಂದು ಹೇಳುತ್ತದೆ. ಹಾಗಾದರೆ ಇವುಗಳಲ್ಲಿ ಯಾವುದು ಸರಿ? ಭಾರತೀಯ ವಾಸ್ತುಶಾಸ್ತ್ರವೋ? ಚೀನಾ ವಾಸ್ತುಶಾಸ್ತ್ರವೋ? ವಾಸ್ತುಶಾಸ್ತ್ರದಲ್ಲಿಯೇ ಇಷ್ಟೊಂದು ಗೊಂದಲವೇಕೆ?

ಭಾರತದಲ್ಲಿಯೇ ಹುಟ್ಟಿಕೊಂಡ ಈ ವಾಸ್ತುಶಾಸ್ತ್ರವನ್ನು ಈ ದೇಶದಲ್ಲಿಯೇ ಇರುವ ಮುಸ್ಲಿಮರು, ಕ್ರಿಶ್ಚಿಯನ್ನರು, ಬೌದ್ಧ ಧರ್ಮೀಯರು, ಜೈನರು ಮುಂತಾದವರು ಅನುಸರಿಸುವುದಿಲ್ಲವಲ್ಲ ಬರೀ ಹಿಂದೂಗಳು ಮಾತ್ರವೇ ಅನುಸರಿಸುತ್ತಾ ನಡೆದಿದ್ದಾರಲ್ಲ, ಯಾಕೆ? ದೇವಸ್ಥಾನಗಳನ್ನು ಕಟ್ಟುವವರು, ಕಟ್ಟಿಸುವವರು ವಾಸ್ತು ಪ್ರಕಾರವೆ ರಚಿಸಿರುತ್ತಾರೆ. ಹಾಗಿದ್ದ ಮೇಲೆ ನಮ್ಮ ದೇಶದ ಬಹುತೇಕ ಗುಡಿ-ಗುಂಡಾರಗಳು ಪಾಳು ಬಿದ್ದಿವೆ. ಕೆಲವು ಕಡೆ ಗುಡಿಗಳಲ್ಲಿ ದೀಪ ಹಚ್ಚುವವರೂ ದಿಕ್ಕಿಲ್ಲದೆ ದೇವರೊಬ್ಬನೆ ಕುಳಿತಿದ್ದಾನೆ. ಅಯೋಧ್ಯಾ, ಮಥುರಾ, ದ್ವಾರಕಾ, ಸೋಮನಾಥ, ವಿಜಯನಗರ, ಕಾಶಿ ಮುಂತಾದ ದೇವಸ್ಥಾನಗಳು ಮುಸ್ಲಿಂ ದಾಳಿಕೋರರಿಗೆ ಅದು ಹೇಗೆ ಒಳಗಾದವು? ಈ ವಾಸ್ತುವೆಂಬ ಭೂತಕ್ಕೆ ಬರೀ ಹಿಂದೂಗಳನ್ನು ಮಾತ್ರ ಹೆದರಿಸಬಹುದು ಎಂದು ದೇವಾನುದೇವತೆಗಳು ಆರ್ಡರ್ ಮಾಡಿರಬಹುದೇನು? ಹಾಗಾದರೆ ಆ ದೇವಾನುದೇವತೆಗಳು ಹಿಂದೂ ಜನಾಂಗದವರನ್ನು ಹೊರತುಪಡಿಸಿ ಬೇರೆಯವರಿಗೆ ಹೆದರಿಕೊಳ್ಳುತ್ತವೆಯೆ? ಅವಾಸ್ತುವಾಗಿಯೇ ಕಟ್ಟಿದ ಮೊಗಲರ ಅರಮನೆಗಳು, ಆದಿಲ್‌ಶಾಹಿಗಳು ಕಟ್ಟಿದ ಕೋಟೆಗಳು, ನಿಜಾಮರು, ಸುಲ್ತಾನರು ರಚಿಸಿದ ಭವ್ಯವಾದ ಸ್ಮಾರಕಗಳು ಇಂದಿಗೂ ಅಜರಾಮರವಾಗಿ ನಿಂತಿವೆಯಲ್ಲ! ಬ್ರಿಟಿಷರು ಕಟ್ಟಿದ ಹಲವಾರು ಬಂಗಲೆಗಳು ನಾವೆಲ್ಲ ಇಂದೂ ಬೆಕ್ಕಸ ಬೆರಗಾಗುವಂತೆ ಕಾಣುತ್ತಿವೆಯಲ್ಲ ಇದಕ್ಕೆಲ್ಲ ಏನು ಕಾರಣ? ಜಗತ್ತಿಗೆ ವಿಸ್ಮಯಕರವಾಗಿ ಕಾಣಿಸುತ್ತಿರುವ ಪೀಸಾ ಗೋಪುರ ಬಾಗಿ ನಿಂತಿದ್ದರೂ ಉರುಳಿ ಬಿದ್ದಿಲ್ಲವಲ್ಲ! ಇದನ್ನೇನು ವಾಸ್ತು ನೋಡಿ ರಚಿಸಿದ್ದರೆ? ಈಜಿಪ್ತಿನ ಪಿರಾಮಿಡ್ಡುಗಳು ಇಂದು ನಿನ್ನೆ ಕಟ್ಟಿಸಿದಷ್ಟೇ ವೈಭವೋಪೇತವಾಗಿ ಕಳೆಗಟ್ಟಿ ನಿಂತಿವೆಯಲ್ಲ! ಎಂದು ಮುಂತಾದ ಪ್ರಶ್ನೆಗಳನ್ನು ಕೇಳುತ್ತಾ ಹೋದಂತೆಲ್ಲ ಈ ವಾಸ್ತುವಿನ ವಾಸ್ತವತೆ ನಮ್ಮ ಗಮನಕ್ಕೆ ಬರುತ್ತದೆ. ಆದರೆ ಪ್ರಶ್ನೆ ಮಾಡಿಕೊಳ್ಳುವುದೇ ಶಾಂತಂ ಪಾಪಂ ಎಂದು ಗಲ್ಲ-ಗಲ್ಲ ಬಡಿದುಕೊಳ್ಳುವ ಜನಗಳು ಇರುವುದನ್ನು ಗಮನಿಸಿಯೇ ಪುರೋಹಿತರು ಕೊಬ್ಬಿಹೋಗಿದ್ದಾರೆ.

ಯಾವುದೇ ಒಂದು ನಿವೇಶನದಲ್ಲಿ ೮ ದಿಕ್ಕುಗಳು ಇರುತ್ತವೆ. ಆಯಾ ದಿಕ್ಕುಗಳಲ್ಲಿ ಮನೆಗೆ ಏನೇನು ಬೇಕೋ ಅದೆಲ್ಲ ಇರುವಂತೆ ವಾಸ್ತುವಿನಲ್ಲಿ ಹೇಳಲಾಗಿದೆಯಂತೆ. ಆದರೆ ಈಶಾನ್ಯ ದಿಕ್ಕಿನಲ್ಲಿಯೇ ಕಟ್ಟಡದ ಬಾಲ್ಕನಿ ಇರಬೇಕು. ಕಿಟಕಿ, ಬಾಗಿಲುಗಳು ಹೆಚ್ಚಾಗಿ ಇರಬೇಕು. ನೈರುತ್ಯಕ್ಕೆ ಕಡಿಮೆ ಇರಬೇಕು ಎಂದು ಹೇಳುತ್ತದೆ. ಮನೆಯಲ್ಲಿಯ ಬಾಗಿಲುಗಳಾಗಲಿ – ಕಿಟಕಿಗಳಾಗಲಿ ಸಮಸಂಖ್ಯೆಯಲ್ಲಿ ಇರಬೇಕು. ಬೆಸಸಂಖ್ಯೆಯಲ್ಲಿ ಎಂದಿಗೂ

ಇರಬಾರದು ಎಂದು ಹೆದರಿಸುತ್ತದೆ. ನೈರುತ್ಯ ದಿಕ್ಕಿಗೆ ಮಲಗುವ ಕೋಣೆ, ಆಗ್ನೇಯ ದಿಕ್ಕಿಗೆ ಅಡಿಗೆ ಮನೆ, ಈಶಾನ್ಯಕ್ಕೆ ಪೂಜಾ ಕೋಣೆ, ವಾಯುವ್ಯಕ್ಕೆ ಸ್ನಾನದ ಮನೆ ಇರಬೇಕು. ವರೆಂಡಾ, ಪೋರ್ಟಿಕೋಗಳು ಈಶಾನ್ಯಕ್ಕೆ ಇರಬೇಕು. ನೈರುತ್ಯಕ್ಕೆ ಇರಬಾರದು. ಆಗ್ನೇಯ ದಿಕ್ಕಿನಲ್ಲಿ ಅಡುಗೆ ಮನೆ ಇದ್ದರೆ ಪೂರ್ವದಿಂದ ಬರುವ ಸೂರ್ಯಕಿರಣಗಳು ನೇರವಾಗಿ ಮನೆಯೊಳಗೇ ಪ್ರವೇಶ ಪಡೆಯುತ್ತವಂತೆ. ಆದರೆ ನೈರುತ್ಯ ಮತ್ತು ದಕ್ಷಿಣದಿಂದ ಗಾಳಿ ಬೀಸುವಾಗ ಅಡುಗೆ ಮನೆಯ ಕೆಟ್ಟ ಗಾಳಿಯು ಈಶಾನ್ಯದ ಕಡೆಗೆ ಹಬ್ಬುತ್ತದೆ. ಆಗ ಅಡುಗೆ ಮನೆಯ ಕೆಟ್ಟ ಗಾಳಿ ಮನೆಯ ಎಲ್ಲೆಡೆ ಹರಡುತ್ತದಲ್ಲ!

ಈ ವಾಸ್ತುವನ್ನು ತಾರ್ಕಿಕ ವಿಶ್ಲೇಷಣೆಗೆ, ವೈಜ್ಞಾನಿಕ ಪರೀಕ್ಷೆಗೆ ಒಳಪಡಿಸಹೋದರೆ ಅದು ಎಲ್ಲಾ ಪ್ರದೇಶದಲ್ಲೂ, ಎಲ್ಲ ಕಾಲಕ್ಕೂ ಸರಿ ಎಂದು ಅನ್ನಿಸುವುದೇ ಇಲ್ಲ. ಅ-ವಾಸ್ತುವಾಗಿರುವ ಅಂಗಡಿ ಮುಂಗಟ್ಟುಗಳು, ಸರಕಾರವೇ ಕಟ್ಟಿಸಿದ ಬಂಗಲೆಗಳು, ಸರ್ಕೀಟ್ ಹೌಸ್‌ಗಳು, ಹೌಸಿಂಗ್ ಬೋರ್ಡ್ ಕಾಲೋನಿಗಳು, ಬಸ್ ನಿಲ್ದಾಣಗಳು, ಗುಡಿ ಗುಂಡಾರಗಳೇ ಮುಂತಾದವು ಇವತ್ತಿಗೂ ಭರ್ಜರಿಯಾಗಿಯೇ ಇವೆ. ಆದರೆ ವಾಸ್ತುವನ್ನು ಆಧರಿಸಿ ಕಟ್ಟಿಸಿದ ಮನೆಗಳು ನೋಡನೋಡುತ್ತಿದ್ದಂತೆ ಕುಸಿದುಬಿದ್ದಿವೆ. ಆ ಮನೆಯಲ್ಲಿ / ಆ ಅಂಗಡಿಯಲ್ಲಿ / ಬಂಗಲೆಯಲ್ಲಿ ವಾಸಿಸುವವರು ಪಾಪರ್ ಆಗಿದ್ದಾರೆ. ಈ ದೇಶದ ಪ್ರಧಾನಿಯಾಗಿದ್ದ ದೇವೇಗೌಡರು ಚಂಡಿಕಾ ಯಾಗ ಮಾಡಿದರು. ವಾಸ್ತುವಿನ ಪ್ರಕಾರ ತಮ್ಮ ಕಛೇರಿಯ ಪಾವಟಿಗೆಗಳನ್ನು ಒಂದರಿಂದ ಮೂರಕ್ಕೆ ಏರಿಸಿದರು. ಆಗಲೂ ಅಧಿಕಾರ ಸ್ಥಿರವಾಗಿ ನಿಲ್ಲಲಿಲ್ಲ. ಎನ್. ಟಿ. ಆರ್ ಎಂಬ ನೆರೆಯ ರಾಜ್ಯದ ಮುಖ್ಯಮಂತ್ರಿಯಂತೂ ತನ್ನ ಜೀವಿತದ ಕೊನೆಯ ದಿನಗಳಲ್ಲಿ ಈ ಅಡ್ಡ ಕಸುಬಿಗಳ ಮಾತು ಕೇಳಿ ಮಾಡಬಾರದ ಏನೆಲ್ಲವನ್ನು ಮಾಡಿ ಜನತೆಯ ನಗೆಪಾಟಲಿಗೆ ಒಳಗಾದರು. ವಾಸ್ತು ಪ್ರಕಾರವೇ ಅವರ ಮುಖ್ಯಮಂತ್ರಿ ಕಛೇರಿಯನ್ನು ಸಿದ್ಧಗೊಳಿಸಲಾಯಿತು. ಆದರೂ ಮುಖ್ಯಮಂತ್ರಿ ಖುರ್ಚಿ ಕುಸಿಯುತ್ತಾ ಹೋಯಿತು ?!

ವಾಸ್ತುಶಾಸ್ತ್ರದ ಪ್ರಕಾರವೇ ಎಲ್ಲವನ್ನು ಮಾಡಿ ಯಾರಾದರೂ ಉದ್ಧಾರವಾಗಿದ್ದಾರೋ, ಇಲ್ಲವೋ; ಆದರೆ ವಾಸ್ತು ಹೇಳಿ ಜನರ ತಲೆ ಕೆಡಿಸುವ ಈ ದೀಢಪಂಡಿತರಂತೂ ಬಹುತೇಕ ಉದ್ಧಾರವಾಗಿ ಹೋಗಿದ್ದಾರೆ. ಹಿಂದೆ ಬಾಜಾರದಲ್ಲಿ ತಿರುಗಾಡಿದರೆ ಯಾರು ಕ್ಯಾರೆ ? ಅನ್ನದಿದ್ದ ಇವರಿಗೆ ಈಗ ಏನೆಲ್ಲ ಗೌರವಗಳು ಲಭ್ಯವಾಗುತ್ತಿವೆ. ನೋಡು ನೋಡುತ್ತಲೇ ಇವರ ಗಳಿಕೆ ಹೆಚ್ಚಾಗಿದೆ. ಕಾರು, ಬಂಗ್ಲೆ, ವಗೈರೆಗಳನ್ನು ಖರೀದಿಸಿಟ್ಟುಕೊಂಡಿದ್ದಾರೆ. ಬ್ಯಾಂಕ್ ಬ್ಯಾಲೆನ್ಸ್‌ನ್ನು ಕಾಪಾಡಿಕೊಂಡು ಹೊರಟಿದ್ದಾರೆ. ತಮ್ಮ ಹೆಂಡಿರು-ಮಕ್ಕಳೊಂದಿಗೆ ಸುಖಿ ಜೀವನ ನಡೆಸಿದ್ದಾರೆ. ಸದಾ ತಮ್ಮೊಂದಿಗೆ ನಾಲ್ಕಾರು ಜನರನ್ನು ಇಟ್ಟುಕೊಂಡು, ಅವರ ಬೇಕು-ಬೇಡಗಳನ್ನು ಪೂರೈಸಿಕೊಡುತ್ತಾರೆ. ಈ ಭಟ್ಟಂಗಿಗಳ ಮೂಲಕ ತಮ್ಮ ಬಗ್ಗೆ ಪ್ರಚಾರ ಮಾಡಿಸಿಕೊಳ್ಳುತ್ತಾರೆ !

ಮತ್ತೊಂದು ಮಾತು :

ಈ ವಾಸ್ತುವನ್ನು ನಂಬುವವರು ಬಹುತೇಕರು ದಿಢೀರನೆ ಶ್ರೀಮಂತರಾದವರು ಹಾಗೂ ಒಮ್ಮೆಲೇ ಅಧಿಕಾರದ ಅತ್ಯುನ್ನತದ ಪದವಿಗೆ ಏರಿದವರು. ಇವರ ಯೋಗ್ಯತೆಗಿಂತಲೂ ಮೀರಿದ ಅಧಿಕಾರ/ಹಣ ಸಂಗ್ರಹವಾಗತೊಡಗಿದೊಡನೆ ಅದೇನು ಕಾರಣವೋ ಇವರ ಮನಸ್ಸು ಒಳಗೊಳಗೇ ಪೊಳ್ಳಾಗತೊಡಗುತ್ತದೆ. ಮೇಲೆ ನೋಡಿದರೆ, ಗಟ್ಟಿಮುಟ್ಟಾಗಿ ಕಾಣುವ ಇವರು ಒಳಗೊಳಗೇ ಔಡಲದ ಗಿಡವಾಗಿರುತ್ತಾರೆ. ಪಾಪ ಪ್ರಜ್ಞೆಯಿಂದ ನರಳುತ್ತಿರುತ್ತಾರೆ. ಇಂಥ ಸಂದರ್ಭದಲ್ಲಿ ಯಾವುದೇ ಒಬ್ಬ ಪುಡಗೋಸಿ ಪುರೋಹಿತ ಹೇಳಿದ ಮಾತನ್ನು ಕೇಳಿ ತಮ್ಮ ಪಾಪವನ್ನು ತೊಳೆದುಕೊಳ್ಳಬೇಕೆಂಬ ಹಂಬಲದಲ್ಲಿರುತ್ತಾರೆ. ಆಗ ಅವರ ಮಾತೇ ಬಹು ಅಮೂಲ್ಯ ಎಂದಾಗುತ್ತದೆ. ಅಚಾನಕ್ ಕಾಗೆ ಕುಳಿತುಕೊಳ್ಳುವುದಕ್ಕೂ ಟೊಂಗೆ ಮುರಿಯುವುದಕ್ಕೂ ಸಮನಾದಂತೆ ಎಂಬಂತೆ ವಾಸ್ತುವಿನ ಬಗ್ಗೆ ಪುರೋಹಿತ ಹೇಳಿದ್ದಕ್ಕೂ ಮನೆಯಲ್ಲಿ ಅವಘಡವೊಂದು ಘಟಿಸೋದಕ್ಕೂ ಸಮನಾಗಿಬಿಟ್ಟರೆ ಸಾಕು, ಥಂಡಾ ಹೊಡೆದುಬಿಡುತ್ತಾರೆ.

ದೇಶದ ಅಧಿಕಾರ ಪಡೆದಿರುವ ರಾಜಕಾರಣಿಗಳು ಹಾಗೂ ಶ್ರೀಮಂತರನ್ನೇ ಯಾವಾಗಲೂ ಅನುಕರಣೆ ಮಾಡುವ ಮಧ್ಯಮ ವರ್ಗದ ಜನ ಅವರನ್ನು ನೋಡನೋಡುತ್ತಲೇ ಈಗ ಹಳ್ಳಕ್ಕೆ ಬೀಳತೊಡಗಿದ್ದಾರೆ. ಇದು ಈ ದೇಶದ ಬೌದ್ಧಿಕ ಅಧಃಪತನದ ಸಂಕೇತ.

ವಿಶ್ವಾರಾಧ್ಯ ಸತ್ಯಂಪೇಟೆ
ಬಸವಮಾರ್ಗ ಪತ್ರಿಕೆ, ಶಹಾಪುರ - ೫೮೫ ೨೨೩, ಕಲಬುರ್ಗಿ ಜಿಲ್ಲೆ

## ಹಂಸೆಯ ಹೂವು



ಆ ಥೇಟ್ ಬೋದಿಲೆಯರ್‌ನ
ಕುಲದವನು;
ಕಾವ್ಯ, ವೈನ್, ಋಜುತ್ವ ತನ್ನ
ಆದರ್ಶ ಎಂದು ನಂಬಿದ್ದವನು !

ಇಂಥ ಅವನ ಮುಂದೆ
ಕೆಂಪು ಗುಲಾಬಿಯೊಂದಿತ್ತು
ಮೊದಲು ಆ ಹೂವನ್ನು
ತನ್ನ ನವಿಲುಗರಿಯಂತ
ಕೂದಲಿಗೆ ಆನಿಸಿಕೊಂಡ.

ನಂತರ ಪುಟ್ಟ –
ಮಗುವಿನಂತೆ
ಎದೆಗೆ ಒತ್ತಿಕೊಂಡ.

ಹೂವು ಮತ್ತಷ್ಟು
ಅರಳುತ್ತಿದ್ದನ್ನು ಕಂಡು
ಒಳಗೊಳಗೆ ನಕ್ಕ.

ಇದ್ದಕ್ಕಿದಂತೆ ಹೂವು
ಪಕಳೆಗಳನ್ನು ಕಳೆದುಕೊಂಡು
ಬೋಳಾಯಿತು –
ಆತನಂತೆ !

ಪಕಳೆ ಕೀಳುವುದು
ಆತನಿಗೆ –
ಹೂವಿಗೆ ತೋರುವ ಮುದ್ದಂತೆ.

ಅವನನ್ನು ಹುಚ್ಚ ಎಂದರು
ಭಂಗಿ ಕುಡಿದ ಸಂತನೆಂದರು
ಯಾವುದೂ ಆತನ ಕಿವಿಗೆ
ನಾಟುತ್ತಿಲ್ಲ;

ತನ್ನ ಪಾಡಿಗೆ
ಮುದ್ದು ಮಾಡಲಿಕ್ಕೆ
ಹೂವ ಹುಡುಕುತ್ತಾ ಹೋದ !

ಉಗಮ ಶ್ರೀನಿವಾಸ್
೫ನೇ ಮುಖ್ಯರಸ್ತೆ, ಕೆ. ಆರ್. ಬಡಾವಣೆ,
ತಿಪಟೂರು -೩, ತುಮಕೂರು ಜಿಲ್ಲೆ



ಪಿ. ಎಂ. ಎಸ್. ಮೂರ್ತಿ

# ಗೋಧ್ರಾ ಸುತ್ತಮುತ್ತ

**ಕ**ಳೆದ ೨೦೦೨ ಫೆಬ್ರವರಿ ೨೭ಕ್ಕೆ ಗುಜರಾತಿನಲ್ಲಿ ನಡೆದ ಗೋಧ್ರಾ ಘಟನೆಯ ನಂತರ ನಡೆದ ಹಿಂಸಾಚಾರಗಳ ಕುರಿತು ಪರ ಮತ್ತು ವಿರೋಧವಾದ ಸಮರ್ಥನೆಗಳು ಸಾಕಷ್ಟು ನಡೆದಿವೆ. ಆದರೆ ಗೋಧ್ರಾ ಘಟನೆಯು ಮುಸ್ಲಿಮರಿಂದಲೇ ನಡೆಯಿತು ಎಂಬ ಭಾವನೆಯನ್ನು ಜನಸಾಮಾನ್ಯರ ಮನಸ್ಸಿನಲ್ಲಿ ಕಲ್ಪಿಸುವಲ್ಲಿ ಸಂಘ ಪರಿವಾರದವರು ಸ್ವಲ್ಪಮಟ್ಟಿಗೆ ಯಶಸ್ವಿಯಾಗಿದ್ದಾರೆ ಎಂಬುದರಲ್ಲಿ ಸಂಶಯವಿಲ್ಲ. ಈ ನಿಟ್ಟಿನಲ್ಲಿ ಮೋದಿ ಸರಕಾರವು ಸುಮಾರು ೧೦೦ ಮಂದಿ ಮುಸ್ಲಿಮರನ್ನು ''ಪೋಟಾ'' ಕಾಯಿದೆಯ ಅನ್ವಯ ಸ್ಥಾನಬದ್ಧತೆಯಲ್ಲಿರಿಸಿದೆ. ಈ ಕೃತ್ಯವನ್ನು ಮುಸ್ಲಿಮರೇ ಕೈಗೊಂಡರು ಎಂಬುದಕ್ಕೆ ಓರ್ವ ಬಂಧಿತ ಮುಸ್ಲಿಂ ವ್ಯಕ್ತಿಯ ತಪ್ಪೊಪ್ಪಿಗೆಯೇ ಆಧಾರ. ಇಂತಹ ತಪ್ಪೊಪ್ಪಿಗೆಗಳಿಂದ ದೂರುಗಳು ಸಾಬೀತಾಗುವುದಿಲ್ಲ ಎಂದು ಇಂಡಿಯನ್ ಎವಿಡೆನ್ಸ್ ಆಕ್ಟ್ (ಸಾಕ್ಷಿ ನೀಡುವಿಕೆಯ ಕುರಿತಾದ ಕಾಯಿದೆ)ನಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಅದನ್ನು ಸಮರ್ಥಿಸಲು ಇತರ ಸ್ವತಂತ್ರ ಪುರಾವೆಗಳು ಅಗತ್ಯವೆಂದು ಇದೇ ಕಾಯಿದೆಯಲ್ಲಿ ಹೇಳಲಾಗಿದೆ. ಇತ್ತೀಚೆಗಿನ ಕೆಲವು ವಿಚಾರಣೆಗಳಿಂದ ತಿಳಿದುಬಂದ ಕೆಲವು ಸಂಗತಿಗಳು ಸಂಘ ಪರಿವಾರ ಕಲ್ಪಿಸಿರುವ ಭಾವನೆಗಳಿಗೆ ತದ್ವಿರುದ್ಧವಾಗಿ ಕಾಣಬರುತ್ತಿವೆ. ಪರಿಣಾಮವಾಗಿ, ಇತ್ತೀಚೆಗೆ ಕೇಂದ್ರದಲ್ಲಿ ಅಧಿಕಾರಕ್ಕೆ ಬಂದ ಹೊಸ ಸರಕಾರವು ಈ ಕುರಿತು ಸತ್ಯಾಂಶಗಳನ್ನು ನಿರ್ಧರಿಸಲು ರೈಲ್ವೆ ಖಾತೆಯ ಅಧಿಕಾರಿಗಳಿಂದ ಕೂಡಿದ ಆಯೋಗವೊಂದನ್ನು ನೇಮಿಸಿದೆ. ಈ ನಿರ್ಧಾರವನ್ನು ಸಂಘಪರಿವಾರದವರು ನಿಜಕ್ಕೂ ಸ್ವಾಗತಿಸಬೇಕಿತ್ತು. ಆದರೆ ಅವರ ಮುಖಂಡರು ಈ ನಿರ್ಧಾರವನ್ನು ಎಗ್ಗಿಲ್ಲದೆ ಟೀಕಿಸುತ್ತಿದ್ದಾರೆ. ಈ ದುರಂತದ ಹಿಂದಿರುವ ಸತ್ಯಾಂಶಗಳನ್ನು ನಿರ್ಧರಿಸಲು ವಿವಿಧ ದೃಷ್ಟಿಕೋನಗಳಿಂದ ವಿಶ್ಲೇಷಿಸಬೇಕಾಗಿದೆ. ಈ ಘಟನೆಯು ಪೂರ್ವಯೋಜಿತವಾಗಿತ್ತೋ ? ಇದ್ದರೆ ಯಾರಿಂದ ? ಅಥವಾ ಅದೊಂದು ಆಕಸ್ಮಿಕವೆ ?

ಈ ದುರಂತದಲ್ಲಿ ಮಡಿದವರ ವಾರಸುದಾರರಿಗೆ ೨ಲಕ್ಷ ರೂಪಾಯಿ ಪರಿಹಾರವನ್ನು ನೀಡುವುದಾಗಿ ಗುಜರಾತ್ ಸರಕಾರವೇ ಪ್ರಕಟಿಸಿತ್ತು. ಆದರೆ ಇದನ್ನು ಪಡೆಯಲು ಬಂದವರು ಕೇವಲ ಬೆರಳೆಣಿಕೆಯಷ್ಟು. ಅವರು ಯಾರ ವಾರಸುದಾರರು ಎಂದು ಪ್ರಕಟಿಸಲ್ಪಟ್ಟಿಲ್ಲ.

ಗೋಧ್ರಾ ಘಟನೆಯು ನಡೆದ ರಾತ್ರಿಯೇ ಮುಖ್ಯಮಂತ್ರಿಯವರು ರಾಜ್ಯದ ಕೆಲವು ಮುಖ್ಯ ಅಧಿಕಾರಿಗಳನ್ನು ಬರಮಾಡಿಕೊಂಡು ನಂತರದ ದಿವಸಗಳಲ್ಲಿ ಆಗಬಹುದಾದ ಗಲಭೆಗಳಲ್ಲಿ ಪೊಲೀಸರು ಕೂಡಲೇ ಮಧ್ಯಪ್ರವೇಶ ಮಾಡಬಾರದೆಂದು ನಿರ್ಧರಿಸಿದ್ದರು ಎಂದು ಅಂದೇ ಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಆದರೆ ಗೋಧ್ರಾ ಒಳಗೊಂಡ ಜಿಲ್ಲೆಯ ಹಿರಿಯ ಪೊಲೀಸ್ ಅಧಿಕಾರಿ ತಾನು ಕಾನೂನಿನಿಂದ ಅಧಿಕಾರವನ್ನು ಪಡೆದವ, ಮುಖ್ಯಮಂತ್ರಿ ಹೇಳಿದ್ದನ್ನೆಲ್ಲಾ ಒಪ್ಪಿ ಕಾಯಿದೆಗೆ ವಿರೋಧವಾಗಿ ತಾನು ಎಂದಿಗೂ ನಡೆಯಲಾರೆ ಎಂದು ಮಾರನೆ ದಿವಸ ಆತನ ವ್ಯಾಪ್ತಿಯಲ್ಲಿದ್ದ ಪ್ರದೇಶದಲ್ಲಿ ಗಲಭೆಗಳನ್ನು ಸಂಪೂರ್ಣವಾಗಿ ತಡೆಗಟ್ಟಿದ್ದ. ಇದಾದ ಎರಡೇ ದಿನಗಳಲ್ಲಿ ಆತನನ್ನು ಜನಸಾಂದ್ರತೆಯಿಲ್ಲದ ಜಿಲ್ಲೆಗೆ ವರ್ಗಾಯಿಸಲಾಯಿತು. ಬೆಸ್ಟ್ ಬೇಕರಿ ಕೇಸಿನಲ್ಲಿ ಎಲ್ಲಾ ಆಪಾದಿತರನ್ನು ಬಿಡುಗಡೆಯ ವಿರುದ್ಧವಾಗಿ ಮಾಡಲಾದ ಅಪೀಲಿನಲ್ಲಿ ತೀರ್ಪು ನೀಡುವಲ್ಲಿ ಸುಪ್ರೀಂಕೋರ್ಟ್ ಹೇಳಿದ ಮಾತುಗಳು ಬಹಳ ಮಾರ್ಮಿಕವಾದವುಗಳು. ಚಕ್ರವರ್ತಿ ನೀರೋ ಮಹಾ ಕ್ರೂರಿ. ಆತ ರೋಮ್ ನಗರಕ್ಕೆ ಬೆಂಕಿ ಹಚ್ಚಿಸಿ ಅದು ಉರಿಯುವುದನ್ನು ನೋಡಿ ಸಂತೋಷಪಟ್ಟುಕೊಂಡು ಪಿಟೀಲು ನುಡಿಸುತ್ತ ಕೂತಿದ್ದನಂತೆ. ಮೋದಿಯವರ ವರ್ತನೆಯು ಹಾಗೆಯೆ ಇತ್ತು. ಅಷ್ಟೇ ಅಲ್ಲ, ಆ ದಿನಗಳಲ್ಲಿ ಪೊಲೀಸರು, ನ್ಯಾಯಾಧೀಶರು ಮತ್ತು ಸರಕಾರದ ಅಂಗಗಳು ಇವರ್ಯಾರೂ ಕಟ್ಟು

ಗೋಧ್ರಾ ಘಟನೆಗೆ ಕಾರಣ ರಾದವರೆಂದು ಹೇಳಿ ಸುಮಾರು ೧೦೦ ಮಂದಿ ಮುಸ್ಲಿಮರನ್ನು ಬಂಧಿಸಿ ಅವರನ್ನು ಪೋಟಾ ಕಾಯಿದೆಗನುಸಾರವಾಗಿ ಸ್ಥಾನಬದ್ಧತೆಯಲ್ಲಿಡಲಾಗಿದೆ. ಅವರ ನಂತರದ ೧೧೨ ದಿವಸಗಳ ತನಕ ನಡೆದ ಹಿಂಸಾಚಾರ ಅತ್ಯಾಚಾರಗಳಿಗೆ ಬಂಧಿಸಲ್ಪಟ್ಟ ಪ್ರತಿಯೊಬ್ಬ ಆರೋಪಿಗೂ ಜಾಮೀನು ನೀಡಲಾಗಿದೆ. ಅವರ ವಿರೋಧವಾಗಿ ಸಾಕ್ಷಿ ನೀಡುವವರನ್ನು ಹೆದರಿಸಿ ಬೆದರಿಸಿ ತಮ್ಮ ವಿರುದ್ಧವಾಗಿ ಅವರು ಸಾಕ್ಷಿ ಹೇಳದಂತೆ ಮಾಡಲು ಈ ಜಾಮೀನು ನೀಡಲಾದದ್ದು ಎಂಬುದರಲ್ಲಿ ಸಂಶಯವಿಲ್ಲ. ಕಾರಣ ಬೆಸ್ಟ್ ಬೇಕರಿ ಕೇಸಿನಲ್ಲಿ ಈ ಪ್ರಕ್ರಿಯೆ ಫಲಿತಾಂಶಗಳು ಕಂಡುಬಂದದ್ದನ್ನು ಸುಪ್ರೀಂಕೋರ್ಟ್‌ನ ನ್ಯಾಯಾಧೀಶರು ಗುರುತಿಸಿದ್ದಾರೆ. ಖಂಡಿಸಿದ್ದಾರೆ.

ಕರ್ತವ್ಯಗಳನ್ನು ಪಾಲಿಸಲಿಲ್ಲ ಎಂದು ಸ್ಪಷ್ಟವಾಗಿ ಹೇಳಲಾಗಿದೆ.

ಗೋಧ್ರಾ ದುರಂತದ ಸುದ್ದಿ ಮೋದಿಯವರಿಗೆ ತಲಪಿದೊಡನೆ ಅವರೂ ಅವರ ಸಂಗಾತಿಗಳೂ ಗೋಧ್ರಕ್ಕೆ ಧಾವಿಸಿ ಬಂದರು. ಪೊಲೀಸರ ವಿಧಿವಿಜ್ಞಾನಿಗಳ ತನಿಖೆ ನಡೆಯುವ ಮುಂಚೆ ಯಾರೂ ಈ ಗಾಡಿಗಳೊಳಗೆ ಪ್ರವೇಶಿಸಬಾರದು ಎಂದು ಅಲ್ಲಿದ್ದ ಪೊಲೀಸು ಅಧಿಕಾರಿಗಳ ಸೂಚನೆಯನ್ನು ನಿರ್ಲಕ್ಷಿಸಿ ಎಲ್ಲರೂ ಒಳಗೆ ನುಗ್ಗಿದರು. ಸ್ವಲ್ಪ ಸಮಯದ ಬಳಿಕ ಹೊರಬಂದರು. ನಂತರ ಕೆಲವೇ ಸಮಯದಲ್ಲಿ ೬ ಮತ್ತು ೭ನೇ ಬೋಗಿಗಳನ್ನು ಬೇರ್ಪಡಿಸಿ ಬೇರೆ ಕಂಬಿಗಳ ಮೇಲೆ ನಿಲ್ಲಿಸಲಾಯಿತು. ಈ ಕುರಿತು ಪೊಲೀಸು ತನ್ನ ಮತ್ತು ವಿಧಿವಿಜ್ಞಾನಗಳ ತನಿಖೆ (ಫೊರೆನ್ಸಿಕ್ ಎಕ್ಸ್‌ಪರ್ಟ್ಸ್) ನಡೆಯುವ ಮುನ್ನ ಈ ಕ್ರಮವನ್ನು ಕೈಗೊಳ್ಳಲು ಯಾರು ಆಜ್ಞೆ ಮಾಡಿದರು ಎಂಬುದು ಇನ್ನೂ ಪತ್ತೆ ಹಚ್ಚಲಾಗಿಲ್ಲ.

ಈ ಕೇಸಿನಲ್ಲಿ ಕಾಯಿದೆ ಅನ್ವಯವಾಗಿ : (೧) ಶವಗಳ ಫೋಟೋ ತೆಗೆಯಬೇಕಿತ್ತು ಮತ್ತು ಅವುಗಳನ್ನು ವಿಧಿ ವಿಜ್ಞಾನಗಳ ಕಾರ್ಯಾಲಯಕ್ಕೆ ಕಳುಹಿಸಿ ನಂತರ ವೈದ್ಯರ ಪರೀಕ್ಷೆಗೆ ಕಳುಹಿಸಬೇಕಿತ್ತು. (೨) ಕೂಡಲೇ ರೈಲ್ವೆ ಪೊಲೀಸರು ಅಲ್ಲಿದ್ದ ಜನರನ್ನು ವಿಚಾರಿಸಿ ಪ್ರಥಮ ಮಾಹಿತಿಯನ್ನು ಸ್ಟೇಶನ್ ಡೈರಿಯಲ್ಲಿ ದಾಖಲು ಮಾಡಬೇಕಿತ್ತು (ಇದನ್ನು ಮಾಡಿದ್ದು ಮಾರನೆ ದಿವಸ). ಹಾಗೆಯೇ ಸಂಜೆ ಪಂಚನಾಮವನ್ನು ಮಾಡಬೇಕಿತ್ತು. ಇದನ್ನು ಬರೆದದ್ದು ೨ ತಿಂಗಳು ಕಳೆದ ಮೇಲೆ. ಎರಡು ಸಾರಿ ರೈಲು ನಿಲ್ಲಿಸಲು ಚೈನು ಎಳೆದವರು ಯಾರು ಮತ್ತು ಯಾವ ಬೋಗಿಯಿಂದ ಎಂಬುದನ್ನು ಗುರುತು ಮಾಡಬೇಕಿತ್ತು. ಈ ಕೇಸಿನಲ್ಲಿ ಹೀಗೆ ಆಗಬೇಕಾದ ಯಾವ ಪ್ರಕ್ರಿಯೆಗಳೂ ನಡೆದಿಲ್ಲ. ಇವಕ್ಕೆಲ್ಲಾ ಕಾರಣವಾದರೂ ಏನು ?

ಈ ಘಟನೆಗಳ ಕುರಿತು ವಿಚಾರಣೆ ನಡೆಸಲು ರಾಜ್ಯ ಸರಕಾರವು ನೇಮಿಸಿದ ನಾನಾವತಿ ಆಯೋಗದ ವಿಚಾರಣೆಯು ಬಹಳ ಕುಂಠಿತಗೊಂಡಿದೆ. ಸರಕಾರ ಮತ್ತು ಅದರ ಅಧಿಕಾರಿಗಳು ಸರಿಯಾಗಿ ಸಹಕಾರ ನೀಡದಿರುವುದು ಈ ಕಾಲಹರಣಕ್ಕೆ ಕಾರಣ ಎಂಬುದರಲ್ಲಿ ಅನುಮಾನವಿಲ್ಲ. ಇತ್ತೀಚೆಗೆ ರೈಲ್ವೆ ಪೊಲೀಸಿನ ಡೆಪ್ಯುಟಿ ಸುಪರಿಂಟೆಂಡೆಂಟರ ಸಾಕ್ಷಿ ವಿಚಾರಣೆ ಈ ಆಯೋಗದ ಮುಂದೆ ನಡೆಯಿತು. ಅವರು ತಮ್ಮ ಸಾಕ್ಷಿಯಲ್ಲಿ ''(೧) ಸತ್ತವರ ಹಾಗೂ ಬೆಂಕಿಯಿಂದ ತೀರಾ ಗಾಯ ಹೊಂದಿದವರ ದೇಹಗಳು ಅವರ ಎದೆಗಳ ಮೇಲ್ಭಾಗದ ಅಂಗಗಳು ಮಾತ್ರ ಈ ಸುಡುವಿಕೆಗೆ ಬಲಿಯಾಗಿದ್ದವು – ಬೋಗಿಯ ನೆಲದಲ್ಲಿ ಉಂಟಾದ ಬೆಂಕಿಯಿಂದ ಈ ಘಟನೆ ನಡೆದಿಲ್ಲ (ಇದು ಪೊಲೀಸರ ಪ್ರಥಮ ಮಾಹಿತಿಯ ಬರವಣಿಗೆಗೆ ವಿರೋಧವಾಗಿತ್ತು). (೨) ಬೆಂಕಿಯು ಮೊದಲು ಕಾಣಿಸಿಕೊಂಡದ್ದು ಬೋಗಿಯ ೭೨ನೇ ಸೀಟಿನಿಂದ. ಆದರೆ ಆ ಕುರಿತು ತಾನು ವಿವರವಾದ ತನಿಖೆಗೆ ಹೊರಡಲಿಲ್ಲ. (೩) ಗುಜರಾತಿನ ವಿಧಿ ವಿಜ್ಞಾನಿಗಳು (ಅಂದರೆ ಬೆಂಕಿ ಹಿಡಿಯಲು ಕಾರಣವೇನು) ಮಾರ್ಚ್ ತಿಂಗಳು ೧೭ಕ್ಕೆ (ಬರೇ ೧೮ ದಿನಗಳೊಳಗೆ) ಪೊಲೀಸ್ ಇಲಾಖೆಗೆ ಒಪ್ಪಿಸಿದ್ದರೂ ಅದರ ವರದಿಯನ್ನು ಈ ತನಕ ಏಕೆ ಬಹಿರಂಗ ಪಡಿಸಲಿಲ್ಲ ಎಂದು ನಾನು ಹೇಳಲಾರೆ. (೪) ಈ ಗಾಡಿಗಳಲ್ಲಿ ಹಣ್ಣು-ಹಂಪಲು ಮಾರುವವರಿಗೂ ಕರಸೇವಕರಿಗೂ ಜಗಳವಾಗಿತ್ತು. ಮತ್ತು ಈ ಜಗಳವು ತನ್ನ ಕುರಿತು ತಮಾಷೆ ಮಾಡಿದ ಕರಸೇವಕರ ಕೃತ್ಯಗಳಿಂದ ನಡೆಯಿತು ಎಂದು ಒಬ್ಬ ಹುಡುಗಿಯು ನೀಡಿದ ಆರೋಪ ಪತ್ರಿಕೆಯನ್ನು ಚಾರ್ಜ್‌ಶೀಟ್‌ನಲ್ಲಿ ಏಕೆ ಸೇರಿಸಲಿಲ್ಲ ಎಂದು ನನಗೆ ಹೇಳಲು ಬರುವುದಿಲ್ಲ. (೫) ಈ ಕುರಿತು ಆಪಾದನೆಯ ಪಟ್ಟಿಯನ್ನು ನ್ಯಾಯಾಸ್ಥಾನಕ್ಕೆ ಸಮರ್ಪಿಸಲು ತಡವಾದದ್ದು ಏಕೆ ಎಂದು ನನಗೆ ತಿಳಿದಿಲ್ಲ'' ಎಂದು ಮುಂತಾಗಿ ಸಾಕ್ಷಿ ನೀಡಿರುವ ಕಾರಣ ಪೊಲೀಸರ ವಿಚಾರಣೆಯು ಪ್ರಾರಂಭದಿಂದಲೇ ತಪ್ಪು ದಾರಿಯಲ್ಲಿ ನಡೆದಿದೆ ಎಂಬುದು ವೇದ್ಯವಾಗುತ್ತದೆ.

ಗೋಧ್ರಾ ಘಟನೆಗೆ ಕಾರಣರಾದವರೆಂದು ಹೇಳಿ ಸುಮಾರು ೧೦೦ ಮಂದಿ ಮುಸ್ಲಿಮರನ್ನು ಬಂಧಿಸಿ ಅವರನ್ನು ಪೋಟಾ ಕಾಯಿದೆಗನುಸಾರವಾಗಿ ಸ್ಥಾನಬದ್ಧತೆಯಲ್ಲಿಡಲಾಗಿದೆ. ಅವರ ನಂತರದ ೧೧೨ ದಿವಸಗಳ ತನಕ ನಡೆದ ಹಿಂಸಾಚಾರ ಅತ್ಯಾಚಾರಗಳಿಗೆ ಬಂಧಿಸಲ್ಪಟ್ಟ ಪ್ರತಿಯೊಬ್ಬ ಆರೋಪಿಗೂ ಜಾಮೀನು ನೀಡಲಾಗಿದೆ. ಅವರ ವಿರೋಧವಾಗಿ ಸಾಕ್ಷಿ ನೀಡುವವರನ್ನು ಹೆದರಿಸಿ ಬೆದರಿಸಿ ತಮ್ಮ ವಿರುದ್ಧವಾಗಿ ಅವರು ಸಾಕ್ಷಿ ಹೇಳದಂತೆ ಮಾಡಲು ಈ ಜಾಮೀನು ನೀಡಲಾದದ್ದು ಎಂಬುದರಲ್ಲಿ ಸಂಶಯವಿಲ್ಲ. ಕಾರಣ ಬೆಸ್ಟ್ ಬೇಕರಿ ಕೇಸಿನಲ್ಲಿ ಈ ಪ್ರಕ್ರಿಯೆ ಫಲಿತಾಂಶಗಳು ಕಂಡುಬಂದದ್ದನ್ನು ಸುಪ್ರೀಂಕೋರ್ಟ್‌ನ ನ್ಯಾಯಾಧೀಶರು ಗುರುತಿಸಿದ್ದಾರೆ, ಖಂಡಿಸಿದ್ದಾರೆ.

ಈ ಬೋಗಿಯಿಂದ ಸುಮಾರು ೫೫೦ ಕೆ.ಜಿ.ಯಷ್ಟು ಸುಟ್ಟ ವಸ್ತುಗಳನ್ನು ಸಂಗ್ರಹಿಸಿ ಅವುಗಳನ್ನು ಪ್ರಯೋಗಾಲಯದ ಪರೀಕ್ಷೆಗೊಳಪಡಿಸಿ ನೋಡಿದಾಗ, ಅವುಗಳಲ್ಲಿ ಪೆಟ್ರೋಲಿಯಂ ಎಣ್ಣೆಗಳ ಅಂಶವೇ ಇರಲಿಲ್ಲ ಎಂಬುದು ಗಮನಾರ್ಹ ವಿಚಾರ. ಹಾಗೆಯೇ ಬೆಂಕಿ ೭೨ನೇ ಸೀಟಿನಿಂದ ಶುರುವಾಯಿತು. ಕಪ್ಪು ಹೊಗೆ ಮತ್ತು ರಬ್ಬರು ಕರಟಿದ ವಾಸನೆ ಬರುತ್ತಿತ್ತು ಎಂದು ಆಯೋಗ ನೀಡಿದ ಸಾಕ್ಷಿ. ಮೋದಿ ಸರಕಾರದ, ಅದರ ಪೊಲೀಸು ಇಲಾಖೆಯ ಆಪಾದನೆಯ ಪಟ್ಟಿಗೆ ವಿರುದ್ಧವಾಗಿತ್ತು ಎಂಬುದು. ಈ ಬೆಂಕಿ ರೈಲುಗಾಡಿಗಳ ಮಧ್ಯವಿರುವ ವೆಸ್ಟಿಬ್ಯೂಲ್‌ಗಳ ರಬ್ಬರಿಗೆ ಬೆಂಕಿ ಹಿಡಿದು ಅಲ್ಲಿಂದ ಬೋಗಿಯೊಳಗೆ ಜ್ವಾಲೆ ಹರಡಿರಬಹುದು ಎಂಬ ಊಹೆಗೆ ಎಡೆಮಾಡಿಕೊಡುತ್ತದೆ. ಇದಕ್ಕೆ ಸಮರ್ಥನೀಯವೆಂಬಂತೆ ಪೊಲೀಸು ಸುಪರಿಂಟೆಂಡೆಂಟರು ತನ್ನ ಹೇಳಿಕೆಯನ್ನು ಅಲ್ಲಿ ನೆರೆದಿದ್ದ ಜನರನ್ನು ವಿಚಾರಣೆಗೈದಾಗ ಅವರಲ್ಲಿ ಯಾರೊಬ್ಬರೂ ತಾವು ಬೋಗಿಯೊಳಗೆ ಎಣ್ಣೆಯನ್ನು ಒಯ್ದದ್ದನ್ನು ನೋಡಿಲ್ಲ, ಹಾಗೆಯೇ ಹೊರಗಿನಿಂದ ಎಣ್ಣೆಯ ಬಕೇಟನ್ನು ಒಳಗೆ ಎಸೆದದ್ದನ್ನು ನೋಡಿಲ್ಲ, ಎಂದರು ಎಂದು ಹೇಳಿದ್ದು ಮೋದಿ ಸರಕಾರದ ಮೇಲೆ ಇನ್ನಷ್ಟು ಸಂಶಯಕ್ಕೆ ಎಡೆಮಾಡಿಕೊಡುತ್ತದೆ.

ಹೀಗೆ ಸರಕಾರವು ಈ ಕೇಸಿನಲ್ಲಿಯೂ ಮೋದಿತ್ವವನ್ನೇ ಸೃಷ್ಟಿಸಲು ಹೊರಟದ್ದಲ್ಲದೆ ಸತ್ಯಾಂಶವನ್ನು ಕಂಡುಹಿಡಿಯಲು ಎಳ್ಳಷ್ಟಾದರೂ ಪ್ರಾಮಾಣಿಕ ಪ್ರಯತ್ನ ನಡೆಸಿಲ್ಲ ಎಂಬುದು ಈ ಹಿನ್ನೆಲೆಯಲ್ಲಿ ಸ್ಪಷ್ಟವಾಗುತ್ತದೆ. ಇಂತಹ ಸಂಶಯಾತ್ಮಕ ಪರಿಸ್ಥಿತಿಯಲ್ಲಿ ಇಂದಿನ ಸರಕಾರವು ಇದರ ಶೋಧನೆಗಾಗಿ ಕೈಗೊಂಡ ಶ್ರಮವನ್ನು ಹಲವು ಪಕ್ಷಗಳು, ಪತ್ರಿಕೆಗಳು, ಗಣ್ಯವ್ಯಕ್ತಿಗಳು ಸ್ವಾಗತಿಸಿದ್ದಾರೆ. ಮೇಲೆ ಹೇಳಿದ ಎರಡು ದೃಷ್ಟಿಕೋನದ ಪ್ರಶ್ನೆಗಳಿಗೆ ಈತನಕದ ವಿಚಾರಣೆಗಳಲ್ಲಿ ಸಮಂಜಸ ಹಾಗೂ ನ್ಯಾಯವಾದ ಉತ್ತರ ದೊರಕಿಲ್ಲ.

ಸಂಘ ಪರಿವಾರದವರು ಏನೇ ಹೇಳಲಿ, ಇದು ರಾಜಕೀಯ ದ್ವೇಷವಲ್ಲ, ನ್ಯಾಯ ನೀತಿಯ ಹರಣವಲ್ಲ. ಮುಸ್ಲಿಮರನ್ನು ಸಂತೈಸುವ ಯತ್ನವೂ ಅಲ್ಲ. ಈಗ ಪ್ರಾರಂಭವಾಗಲಿರುವ ಗೋಧ್ರಾ ತನಿಖೆ ಸತ್ಯಾನ್ವೇಷಣೆಯ ಒಂದು ಪ್ರಾಮಾಣಿಕ ಪ್ರಯತ್ನ ಮಾತ್ರ.

ಪಿ. ಎಂ. ಎನ್. ಮೂರ್ತಿ
೪-೨, ೨೩೭/೨೪, ಭಾರತಿನಗರ, ಬಿಜೈ, ಮಂಗಳೂರು - ೫೭೫ ೦೦೪

# ಸಿಡಿಮದ್ದು ಹೃದ್ರೋಗಕ್ಕೆ ಮದ್ದು

**ಜಿ.ಟಿ.ಎನ್. (ಗ್ಲಿಸರಲ್ ಟ್ರೈನೈಟ್ರೇಟ್) ಒಂದು ಪ್ರಬಲ ಸ್ಫೋಟಕ ವಸ್ತು. ಬೆಟ್ಟ ಗುಡ್ಡಗಳಲ್ಲಿ ಕಲ್ಲು ಸಿಡಿಸಲು ಉಪಯೋಗವಾಗುತ್ತಿದ್ದ ಇದು ಯುದ್ಧದಲ್ಲಿ ಸಿಡಿಮದ್ದಾಗಿಯೂ ಬಳಕೆಗೆ ಬಂತು. ಇದು ಹೃದ್ರೋಗಕ್ಕೂ ಪರಿಣಾಮಕಾರಿ ಮದ್ದಾಗಿ ಬಳಕೆಗೆ ಬಂದದ್ದು ಒಂದು ಅದ್ಭುತ ವೈದ್ಯಕೀಯ ಶೋಧನೆ.**

**ಡಾ॥ ಸರ್ವೋತ್ತಮ ಅಂಬೇಕರ್**

'ಅಂಜಿನ ಪೆಕ್ಟೋರಿಸ್' ಅಥವಾ 'ಎದೆಸೆರೆ ಬಿಗಿತ' ಎನ್ನುವುದು ಜನರಲ್ಲಿ, ವಿಶೇಷತಃ ಗಂಡಸರಲ್ಲಿ, ಕೆಲವು ವಯಸ್ಸಿನ ಅನಂತರ ಹೃದಯದಲ್ಲಿ ಕಾಣಬರುವ ಒಂದು ಸ್ಥಿತಿ. ಅದರ ಲಕ್ಷಣ ಅಂದರೆ ಮೊಲೆಯ ಕೆಳಭಾಗದ ಮೂಳೆಯಲ್ಲಿ ಅಸಾಧ್ಯ ನೋವು ಕಾಣಿಸಿಕೊಳ್ಳುವುದು. ಈ ನೋವು ಕೆಲವು ಸಲ ಎಡಭುಜ ಮತ್ತು ಎಡತೋಳಿನಗುಂಟ ಹರಡುತ್ತದೆ. ಇದರೊಂದಿಗೆ ಉಸಿರುಗಟ್ಟುವ ಅನುಭವ ಆಗುವುದೂ ಉಂಟು. ಚುರುಕಿನ ಶ್ರಮ, ಭಾವೋದ್ರೇಕ, ಧೂಮಪಾನ ಮತ್ತು ಚಳಿ-ಗಾಳಿಗಳಿಗೆ ಮೈಯೊಡ್ಡುವುದು - ಇವು ಹೃದಯದ ಇಂಥ ಸ್ಥಿತಿಯನ್ನು ಪ್ರಚೋದಿಸುತ್ತವೆ. ಇದು ಅನೇಕ ವೇಳೆ ಪ್ರಾಣಾಪಾಯದ ಅಂಚಿಗೂ ಒಯ್ಯಬಹುದು. ಇದಕ್ಕೆ ಕಾರೋನರಿ ಹೃದ್ರೋಗ ಅನ್ನುತ್ತಾರೆ.

ಹೃದಯವನ್ನು ತಲುಪುವ ಧಮನಿಗಳ ಒಳವ್ಯಾಸ ಕಡಿಮೆಯಾಗಿ ಧಮನಿ ಅಥವಾ ಅದರ ಶಾಖೆಗಳಿಂದ ರಕ್ತ ಸರಬರಾಜು ಆಗುವ ನಯ ಸ್ನಾಯುಗಳಿಗೆ ಆಕ್ಸಿಜನ್‌ನ ತೀವ್ರ ಕೊರತೆಯೇ ಈ ನೋವಿಗೆ ಕಾರಣ. ನೀರಿನ ಪೈಪಿನಲ್ಲಿ ಕ್ಷಾರಗಳು ಅಂಟಿಕೊಂಡು ಪೈಪಿನ ಒಳ ವ್ಯಾಸ ಕಡಿಮೆಯಾಗುವಂತೆ ವಯಸ್ಸಾದಂತೆಲ್ಲಾ ರಕ್ತನಾಳಗಳೊಳಗೆ ಕೊಲೆಸ್ಟೆರಾಲ್ ಎಂಬ ಜಿಡ್ಡು ವಸ್ತು ಶೇಖರವಾಗುತ್ತ ದೇಹದ ಧಮನಿಗಳ ಒಳವ್ಯಾಸ ಕಿರಿದಾಗುತ್ತದೆ. ಈ ರೀತಿ ಶೇಖರಗೊಂಡ ಪೆಡಸಣೆಗೆ 'ಧಮನಿ ಪೆಡಸಣೆ' ಅಥವಾ 'ಅಥೆರೊಸ್ಕೆಲೋರಿಡಿಕ್ ಫಲಕ'ಎಂದು ಕರೆಯುತ್ತಾರೆ. ಇದು ಧಮನಿಗಳಗುಂಟ ಇರುವ ನಯ ಸ್ನಾಯುಗಳ ಪ್ರಸರಣ ಅಥವಾ ಸಡಿಲಿಕೆಯನ್ನು ತಡೆಗಟ್ಟುತ್ತದೆ. ಧಮನಿಗಳಲ್ಲಿ ರಕ್ತದ ಹರಿವು ಕಡಿಮೆಯಾಗುವುದರಿಂದ ತ್ಯಾಜ್ಯ ವಸ್ತುಗಳು ಹೃದಯದ ನಯ ಸ್ನಾಯುಗಳಲ್ಲಿ ಸಂಗ್ರಹವಾಗಿ 'ಅಂಜಿನಾ ನೋವಿಗೆ' ಕಾರಣವಾಗುತ್ತದೆ.

ಅಂಜಿನಾ ನೋವಿನಿಂದ ಬಳಲುವ ರೋಗಿಯು ವಿಶ್ರಾಂತಿ ತೆಗೆದುಕೊಂಡು ಕ್ರಮೇಣ ನೋವನ್ನು ಕಡಿಮೆ ಮಾಡಿಕೊಳ್ಳಬಹುದು. ಔಷಧ ಸೇವನೆಯಿಂದಲೂ ತತ್‌ಕ್ಷಣ ಕಡಿಮೆ ಮಾಡಿಕೊಳ್ಳುವ ಸಾಧ್ಯತೆಯಿದೆ. ಕಾರೋನರಿ ಹೃದಯ ರೋಗಿಗಳು ತಮ್ಮ ಜೇಬಿನಲ್ಲಿ ಯಾವಾಗಲೂ ಒಂದು ಮಾತ್ರೆಯನ್ನು ಇಟ್ಟುಕೊಂಡಿರುವುದು ನಿಮಗೆ ತಿಳಿದಿರಬಹುದು. ಎದೆನೋವು ಕಂಡ ತತ್‌ಕ್ಷಣ ಆ ಮಾತ್ರೆಯನ್ನು ನಾಲಿಗೆಯ ಕೆಳಗೆ ಇಟ್ಟುಕೊಳ್ಳುತ್ತಾರೆ. ಕೂಡಲೇ ಅವರಿಗೆ ಪರಿಹಾರ ದೊರೆಯುತ್ತದೆ. ಇದಕ್ಕೆ ಕಾರಣ ಗೊತ್ತೆ? ಈ ಮಾತ್ರೆ ಬೇರೇನೂ ಅಲ್ಲ. ಅದು ಒಂದು ಸಾವಯವ ನೈಟ್ರೇಟು. ಇಂಥ ಔಷಧಗಳಲ್ಲಿ ಪ್ರಮುಖವಾದದ್ದು ಗ್ಲಿಸರಿಲ್ ಟ್ರೈನೈಟ್ರೇಟ್ (GTN). ಜಿ.ಟಿ.ಎನ್. ಸ್ವತಃ ಪ್ರಬಲ ಸ್ಫೋಟಕವಸ್ತು, ಡೈನಮೈಟಿನ ಒಂದು ಘಟಕ.

ಜಿ.ಟಿ.ಎನ್, ಅಂಜಿನಾ ನೋವು ನಿವಾರಕ ಎಂದು ೧೮೭೯ರ ಹಿಂದೆಯೇ ಫ್ರಾನ್ಸಿನ ವಿಲಿಯಮ್ ಮುರ್ರೆಲ್ ವರ್ಣಿಸಿದ್ದ. ಆದರೆ ೧೯೮೭ರವರೆಗೆ ಅದರ ಸಫಲತೆಗೆ ಕಾರಣ ಯಾವುದು ಅನ್ನುವುದು ತಿಳಿದಿರಲಿಲ್ಲ. ದುರ್ವಾಸನೆಯ ಪ್ರದೂಷಕವಾಯು ಎಂದೇ ಪ್ರಸಿದ್ಧವಾಗಿರುವ ನೈಟ್ರಿಕ್ ಆಕ್ಸೈಡ್ (NO) ಅನ್ನು ಜೀವರಾಸಾಯನಿಕ ಕ್ರಿಯೆಯಲ್ಲಿ ಅತ್ಯಂತ ಮಹತ್ವದ ಪಾತ್ರ ವಹಿಸುವ ವಾಯು ಎಂದು ವಿಜ್ಞಾನಿಗಳು ೧೯೮೦ರ ದಶಕದಲ್ಲಿ ಗುರುತಿಸಿದರು. ನೈಟ್ರಿಕ್ ಆಕ್ಸೈಡ್ ಹೃದಯ ಆರೋಗ್ಯ ಮೊದಲು ಮಾಡಿಕೊಂಡು ಪುಂ-ಉದ್ರೇಕದವರೆಗೆ ಧಮನಿಗಳ ನಯ ಸ್ನಾಯುಗಳನ್ನು ಸಡಿಲಪಡಿಸಿ ಅನೇಕ ಜೈವಿಕ ಕ್ರಿಯೆಗಳಲ್ಲಿ ಭಾಗವಹಿಸುತ್ತದೆ ಎಂದು ಕಂಡುಕೊಂಡರು. ನೈಟ್ರಿಕ್ ಆಕ್ಸೈಡ್ ಬಗೆಗಿನ ಈ ಸಂಶೋಧನೆಗೆ ೧೯೯೮ರ ಔಷಧಶಾಸ್ತ್ರಕ್ಕೆ ಮೀಸಲಾದ ನೊಬೆಲ್ ಪಾರಿತೋಷಕ ದೊರಕಿತು. ಅಂಜಿನಾ ನೋವುಂಟಾದಾಗ ಜಿಟಿಎನ್ ಸೇವನೆಯಿಂದ ಅದರ ನೈಟ್ರೋಪುಂಜ ಚಯಾಪಚಯ ಕ್ರಿಯೆಯಲ್ಲಿ ಧಮನಿಗಳ ಗೋಡೆಗಳ ಗುಂಟ ನೈಟ್ರಿಕ್ ಆಕ್ಸೈಡ್ ಆಗಿ ಮಾರ್ಪಾಟುಗೊಳ್ಳುತ್ತದೆ. ಇದರಿಂದ ನಯ ಸ್ನಾಯುಗಳು ಸಡಿಲಗೊಂಡು ಧಮನಿಗಳ ಒಳವ್ಯಾಸ ಹೆಚ್ಚಿ ಅಧಿಕ ರಕ್ತ ಹರಿದು ನೋವು ನಿವಾರಣೆಯಾಗುತ್ತದೆ.

ಗ್ಲಿಸರಿಲ್ ಟ್ರೈನೈಟ್ರೇಟನ್ನು (GTN) ಮೊದಲು ನೈಟ್ರೊಗ್ಲಿಸರಿನ್ ಎಂದು ಕರೆಯುತ್ತಿದ್ದರು. ಇದನ್ನು ಮೊಟ್ಟಮೊದಲು ಇಟಲಿಯ ರಸಾಯನ ವಿಜ್ಞಾನಿ ಅಸ್ಕಾನಿಯೊ ಸೊಬ್ರೆರೊ ಎಂಬಾತ ತಯಾರಿಸಿದ. ಗ್ಲಿಸರಾಲನ್ನು ಸಲ್ಫೂರಿಕ್ ಮತ್ತು ನೈಟ್ರಿಕ್ ಆಮ್ಲಗಳೊಂದಿಗೆ ವರ್ತಿಸುವುದರಿಂದ ತಯಾರಿಸಿದ. ಇದೊಂದು ತಿಳಿಹಳದಿ ಬಣ್ಣದ, ಜ್ವಲನಶೀಲ, ಜೇನು ತುಪ್ಪದಂತೆ ದಟ್ಟವಾದ ದ್ರವ. ಅದು ಅತ್ಯಂತ ಪ್ರಬಲ ಸ್ಫೋಟಕ ವಸ್ತು. ಘರ್ಷಣೆಯಿಂದಲೂ, ಅಜಾಗರೂಕತೆಯಿಂದ ಎತ್ತಾಡಿದರೂ ಸ್ಫೋಟಗೊಳ್ಳುತ್ತಿತ್ತು. ಗಿರಿಗಳನ್ನು ಸ್ಫೋಟ ಗೊಳಿಸಿ ರಸ್ತೆ ಮಾಡುವಾಗ ಅಜಾಗರೂಕತೆಯಿಂದಾಗಿ ಅನೇಕರು ಸಾವನ್ನಪ್ಪಿದರು. ಇಂಥ ಸ್ಫೋಟಕ ವಸ್ತುವಿನ ತಯಾರಿಕೆಯ ಬಗ್ಗೆ ನಮಗೆ ತಿಳಿಸಲು ಸೊಬ್ರೆರೊ ಬದುಕಿ ಉಳಿದದ್ದೇ ಒಂದು ಪವಾಡ.

ಅದೇ ವೇಳೆಗೆ ನೈಟ್ರೋ ಸೆಲುಲೋಜು ಎನ್ನುವ ಅಪಾಯಕರ ಸ್ಫೋಟಕ ವಸ್ತುವೊಂದನ್ನು ಸುರಕ್ಷಿತವಾಗಿ ನಿರ್ವಹಿಸಲು ಬರುವಂತೆ ಪಳಗಿಸಲಾಗಿತ್ತು. ನೈಟ್ರೊ ಸೆಲುಲೋಜಿಗಿಂತ ಅಧಿಕ ಸ್ಫೋಟಕಶಕ್ತಿಯುಳ್ಳ ಜಿಟಿಎನ್‌ಅನ್ನು ಸುರಕ್ಷಿತವಾಗಿ ನಿರ್ವಹಿಸಬಲ್ಲ ಸ್ಫೋಟಕವಸ್ತುವನ್ನಾಗಿ ಪಳಗಿಸಿದರೆ ಮಾರುಕಟ್ಟೆಯಲ್ಲಿ ಅಧಿಕ ಹಣ ಗಳಿಸಬಹುದು ಎಂದು ಸ್ವೀಡನ್ನಿನ ಉದ್ಯೋಗಪತಿ ಇಮ್ಯಾನ್ಯುಅಲ್ ನೊಬೆಲ್ ಜಿಟಿಎನ್‌ಅನ್ನು ಪಳಗಿಸುವ ಕಾರ್ಯದಲ್ಲಿ ತತ್ಪರನಾದ. ಈ ಕಾರ್ಯದಲ್ಲಿ ತೊಡಗಿಕೊಂಡಿದ್ದಾಗ ಜಿಟಿಎನ್ ಸ್ಫೋಟಗೊಂಡು ಆತನ ಕಿರಿಯ ಮಗ ಎಮಿಲ್ ಮತ್ತು ಅನೇಕ ಕಾರ್ಮಿಕರು ಅಸು ನೀಗಿದರು. ಆದರೆ ಆತನ ಮೂರನೇ ಮಗ ಆಲ್ಫ್ರೆಡ್ ನೊಬೆಲ್ ಜಿ.ಟಿ.ಎನ್‌ಅನ್ನು ಪಳಗಿಸುವಲ್ಲಿ ಯಶಸ್ವಿಯಾದ. ಕೀಸಲ್‌ಗರ್ ಎಂಬ ಮಣ್ಣಿನಲ್ಲಿ ಜಿ.ಟಿ.ಎನ್ ಅನ್ನು ಹೀರಿಸುವುದರ ಮೂಲಕ ಅದನ್ನು ಪಳಗಿಸಿದ. ಸ್ಪಂಜ್ ನೀರನ್ನು ಹೀರಿಕೊಳ್ಳುವಂತೆ ಕೀಸಲ್‌ಗರ್ ಮಣ್ಣು ಗಣನೀಯ ಪ್ರಮಾಣದಲ್ಲಿ ಜಿ.ಟಿ.ಎನ್ ಅನ್ನು ಹೀರಿಕೊಳ್ಳುತ್ತಿತ್ತು. ಈ ರೀತಿ GTN ಉಳ್ಳ ಮೆತ್ತಗಿನ ಕೀಸಲ್‌ಗರ್ ಮಣ್ಣನ್ನು ಕಡ್ಡಿಗಳನ್ನಾಗಿ ಅಚ್ಚುಹಾಕ ಬಹುದಾಗಿತ್ತು. ಈ ಕಡ್ಡಿಗಳು ನಿರ್ವಹಿಸಲು ಸುರಕ್ಷಿತವಾಗಿದ್ದವು ಮತ್ತು ಸ್ಫೋಟಕ ಗುಣ ಪಡೆದವು ಆಗಿದ್ದವು. ಈ ಸುರಕ್ಷಿತ ಸ್ಫೋಟಕ ವಸ್ತುವಿಗೆ 'ಡೈನಮೈಟ್' ಎಂದು ಹೆಸರಿಟ್ಟ. ಇದನ್ನು ಮಾರುಕಟ್ಟೆಗೆ ತಂದು ಅಪಾರ ಶ್ರೀಮಂತನಾದ.

**ಕೌತುಕದ ಸಂಗತಿಗಳು**

ರಸ್ತೆ, ಕಾಲುವೆ ಮುಂತಾದವುಗಳ ರಚನೆಯಲ್ಲಿ ಸ್ಫೋಟಕ ವಸ್ತುವಾಗಿ ಬಳಸ ಲಾಗುತ್ತಿದ್ದ ಮತ್ತು ನೊಬೆಲ್‌ಗೆ ಅಪಾರ ಸಂಪತ್ತು ತಂದುಕೊಟ್ಟ ಜಿ.ಟಿ.ಎನ್, ಆತನ ಜೀವವನ್ನೂ ಉಳಿಸಿತ್ತು. ತನ್ನ ಕೊನೆಯ ದಿನಗಳಲ್ಲಿ ಆತ ಅಂಜಿನಾ ನೋವಿನಿಂದ ಬಳಲಿದ. ಆಗ ಜಿ.ಟಿ.ಎನ್‌ನಿಂದ ಚಿಕಿತ್ಸೆ ಪಡೆದು ಗುಣಮುಖನಾದ.

ಮತ್ತೊಂದು ಕುತೂಹಲಕಾರಿ ಘಟನೆ ಎಂದರೆ, ಮೊದಲನೇ ಮಹಾಯುದ್ಧದ ಸಮಯದಲ್ಲಿ GTNಅನ್ನು ಯುದ್ಧ ಸಾಮಗ್ರಿಯಾಗಿ ಪೆಟ್ಟಿಗೆಯಲ್ಲಿ ತುಂಬುವ ಕೆಲಸಕ್ಕೆ ಅನೇಕ ಹೆಂಗಸರನ್ನು ನಿಯಮಿಸಲಾಗುತ್ತಿತ್ತು. ಅವರಲ್ಲಿ ಕೆಲವರು ತೀವ್ರ ತಲೆನೋವಿಗೆ ತುತ್ತಾಗುತ್ತಿದ್ದರು. ಚರ್ಮದ ಸಂಪರ್ಕದಿಂದಾಗಿ ಜಿ.ಟಿ.ಎನ್ ದೇಹದಲ್ಲಿ ಸೇರಿಕೊಂಡು ರಕ್ತದ ಒತ್ತಡವನ್ನು ಕಡಿಮೆ ಮಾಡುವುದೇ (ಧಮನಿಗಳ ಒಳ ವ್ಯಾಸ ಅಧಿಕವಾಗು ವುದರಿಂದ) ಇದಕ್ಕೆ ಕಾರಣ ಎಂದು ಅನಂತರ ತಿಳಿದುಬಂತು. ಆಶ್ಚರ್ಯವೆಂದರೆ ವಾರದ ಮೊದಲಲ್ಲಿ ತೀವ್ರವಾಗಿರುತ್ತಿದ್ದ ತಲೆನೋವು ಕ್ರಮೇಣ ಕಡಿಮೆಯಾಗುತ್ತ ವಾರಾಂತ್ಯದಲ್ಲಿ ಇರುತ್ತಿರಲಿಲ್ಲ. ಆದರೆ ಸೋಮವಾರ ಕೆಲಸ ಪ್ರಾರಂಭ ಮಾಡಿದಂತೆ ತಲೆನೋವು ಮತ್ತೆ ಕಾಣಿಸುತ್ತಿತ್ತು. ಆದ್ದರಿಂದ ಅದಕ್ಕೆ ''ಸೋಮವಾರ ಬೆಳಗಿನ ತಲೆನೋವು'' ಎಂಬ ಹೆಸರು ಬಂದಿತು. ಅದರಿಂದ ಪಾರಾಗಲು ಕಾರ್ಮಿಕರು ತಮ್ಮ ಹ್ಯಾಟಿನಲ್ಲಿ ಸದಾ ಸ್ವಲ್ಪ ಜಿ.ಟಿ.ಎನ್ ಇಟ್ಟುಕೊಳ್ಳುತ್ತಿದ್ದರು. ಏಕೆ ಹೀಗಾಗುತ್ತಿತ್ತು ಎನ್ನುವುದಕ್ಕೆ ವಿಜ್ಞಾನಿಗಳು ಈಗ ಕಾರಣವನ್ನು ಕಂಡುಕೊಂಡಿದ್ದಾರೆ. ವಾರದ ಮೊದಲಿಂದ ಜಿ.ಟಿ.ಎನ್ ಸಂಪರ್ಕವಾಗುತ್ತ ಹೋದಂತೆ ಕಾರ್ಮಿಕರಲ್ಲಿ ಅದನ್ನು ಸಹಿಸುವ

ಶಕ್ತಿ ಬೆಳೆಯುತ್ತ ಹೋಗುತ್ತಿತ್ತು. ವಾರಾಂತ್ಯದ ರಜಾದಿನಗಳಲ್ಲಿ ಜಿ.ಟಿ.ಎನ್ ಸಂಪರ್ಕ ತಪ್ಪಿ ಹೋಗಿ ಆ ಸಹನಶಕ್ತಿ ಇಲ್ಲದಂತಾಗುತ್ತಿತ್ತು. ಹ್ಯಾಟಿನಲ್ಲಿ ಜಿ.ಟಿ.ಎನ್ ಇಟ್ಟುಕೊಳ್ಳುವುದರಿಂದ ಅದರ ಸಂಪರ್ಕವು ಚರ್ಮದೊಡನೆ ವಾರವಿಡೀ ಇರುತ್ತಿದ್ದುದರಿಂದ ಸಹನ ಶಕ್ತಿ ಉಳಿದುಕೊಂಡು ತಲೆನೋವು ಇಲ್ಲದಂತಾಗುತ್ತಿತ್ತು.

ಅಂಜಿನಾ ನೋವಿಗೆ ಕನೈಟ್ರಿಕ್ ಆಕ್ಸೈಡ್ ಆಧಾರಿತ ಔಷಧದ ಚಿಕಿತ್ಸೆ ೧೯ನೇ ಶತಮಾನಕ್ಕಿಂತ ಮೊದಲೇ ರೂಢಿಯಲ್ಲಿತ್ತೆ ಎನ್ನುವುದಕ್ಕೆ ಏನಾದರೂ ಸಾಕ್ಷ್ಯಾಧಾರಗಳು ಬಹುಶಃ ಇದ್ದಿರಬಹುದು ಎಂದು ಈಗ ತಿಳಿದುಬಂದಿದೆ. ಮಧ್ಯ ಏಷ್ಯಾದ ದುನ್ ಹಾಂಗ ಎಂಬ ಊರಿನಲ್ಲಿದ್ದ ಗೋಡೆಗಳಿಂದ ಮುಚ್ಚಲ್ಪಟ್ಟಿದ್ದ ಗುಹೆಯಲ್ಲಿ ಸರ್ ಆರೆಲ್ ಸ್ಟೈನ್ ಎಂಬ ಬ್ರಿಟಿಷ್ ಪರಿಶೋಧಕ ೧೯೦೧ರಲ್ಲಿ ಬೆರಗು ಗೊಳಿಸುವ ಹಸ್ತಪ್ರತಿಗಳ ಕಂತೆಗಳನ್ನು ಪಡೆದಿದ್ದ. ಸುಮಾರು ಕ್ರಿ.ಶ.೧೦೦೦ದಲ್ಲಿ ಮುಸಲ್ಮಾನರು ಚೀನಾದ ಮೇಲೆ ದಾಳಿ ಮಾಡಿದ ಸಂದರ್ಭದಲ್ಲಿ ಬೌದ್ಧ ಜನ ಆ ಕಂತೆಗಳನ್ನು ಅಲ್ಲಿ ಅವಿತಿಸಿಟ್ಟಿರಬಹುದು ಎಂದು ನಂಬಲಾಗಿದೆ. ಅವುಗಳಲ್ಲಿ ಧಾರ್ಮಿಕ ಹಾಗೂ ವೈದ್ಯಕೀಯ ಶಾಸ್ತ್ರಕ್ಕೆ ಸಂಬಂಧಪಟ್ಟ ಹಸ್ತಪ್ರತಿಗಳೂ ಇವೆ. ಅವುಗಳ ಪೈಕಿ ಒಂದು ಹಸ್ತಪ್ರತಿಯಲ್ಲಿ ಅಂಜಿನಾ ನೋವಿಗೆ ಸಂಬಂಧವಿರಬಹುದಾದ ಸಂಗತಿ ವರ್ಣಿಸಲಾಗಿದೆ. ಅಂಥ ರೋಗಿ ನೈಟರ್‌ಅನ್ನು (ಪೊಟ್ಯಾಸಿಯಂ ನೈಟ್ರೇಟ ($KNO_3$)ನಾಲಿಗೆ ಕೆಳಗೆ ಇಟ್ಟುಕೊಂಡು ಲಾಲಾರಸವನ್ನು ಸಾವಕಾಶವಾಗಿ ನುಂಗಬೇಕು ಎಂದು ಹೇಳಿ ಇದರಿಂದ ನೋವು ಖಚಿತವಾಗಿ ಕಡಿಮೆಯಾಗುತ್ತದೆ ಎಂದು ತಿಳಿಸಲಾಗಿದೆ. ಮದ್ದುಗುಂಡುಗಳಲ್ಲಿನ ನೈಟರ್ ಬಳಕೆ ಚೀನೀಯರಿಗೆ ಆಗಲೇ ತಿಳಿದಿತ್ತು.

ನಾಲಿಗೆಯ ಕೆಳಗೆ ನೈಟ್ರೇಟ್ ರಿಡಕ್ಟೇಜ್ ಎಂಬ ಕಿಣ್ವವುಳ್ಳ ಬೆಕ್ಟೀರಿಯಾಗಳು ಇರುತ್ತವೆಂದು ಇತ್ತೀಚಿನ ಪರಿಶೋಧನೆಗಳಿಂದ ತಿಳಿದುಬಂದಿದೆ. ಈ ಬ್ಯಾಕ್ಟೀರಿಯಾಗಳು ನೈಟ್ರೇಟನ್ನು ನೈಟ್ರೈಟ್ ಆಗಿ ಮಾರ್ಪಡಿಸುತ್ತವೆ. ಆರೋಗ್ಯವಂತ ಅಂಗಾಂಶಗಳಿಗಿಂತ ಅಂಜಿನಾ ಸ್ಥಿತಿಯಲ್ಲಿರುವ ಅಂಗಾಂಶಗಳು ಅಧಿಕ ಆಮ್ಲೀಯವಾಗಿರುತ್ತವೆ. ಈ ಆಮ್ಲೀಯ ಪರಿಸ್ಥಿತಿಯಲ್ಲಿ ನೈಟ್ರೈಟ್‌ನಿಂದ ನೈಟ್ರಿಕ್ ಆಕ್ಸೈಡ್ ಬರುವುದುಂಟು. ಇದು ರಕ್ತನಾಳಗಳ ಒಳ ವ್ಯಾಸ ಹೆಚ್ಚಿಸುತ್ತದೆ. ಹೀಗಾಗಿ ಪಾಶ್ಚಾತ್ಯ ದೇಶಗಳಿಗಿಂತ ಅನೇಕ ಶತಮಾನಗಳ ಮೊದಲೇ ಚೀನಾದಲ್ಲಿ ನೈಟ್ರಿಕ್ ಆಕ್ಸೈಡ್ ಚಿಕಿತ್ಸೆಗಾಗಿ ಬಳಕೆಯಾಗುತ್ತಿತ್ತು ಎಂದು ಹೇಳಬಹುದು.

**ನೈಟ್ರಿಕ್ ಆಕ್ಸೈಡ್‌ನ ಕಾರ್ಯವೈಖರಿ**

ದೇಹದಲ್ಲಿ ಚಕ್ರೀಯ ಗ್ವಾನೋಸೀನ ಮೋನೊಫಾಸ್ಫೇಟ್ ಎಂಬ (CGMP) ಸಂಯುಕ್ತ ಇರುತ್ತದೆ. ಅದು ನಯ ಸ್ನಾಯುಗಳನ್ನು ಸಡಿಲಗೊಳಿಸಿ ರಕ್ತನಾಳಗಳ ಒಳ ವ್ಯಾಸವನ್ನು ಮೃದುವಾಗಿ ಹಿಗ್ಗಿಸಿ ರಕ್ತದ ಹರಿವನ್ನು ಸುಗಮಗೊಳಿಸುತ್ತಿರುತ್ತದೆ. ಅದೇ ಸಮಯ ದೇಹದಲ್ಲಿರುವ ಫಾಸ್ಫೇಟ್ ಡೈ ಎಸ್ಟರೇಜ್‌ದಂತಹ ಕಿಣ್ವಗಳು ಸಿಜಿಎಂಪಿ ಯನ್ನು ಜಲೀಕರಿಸಿ ಗ್ವಾನೋಸೀನ ಟ್ರೈಫಾಸ್ಫೇಟ (GTP) ಎಂಬ ಅಚಕ್ರೀಯ ಸಂಯುಕ್ತವನ್ನಾಗಿಸುತ್ತವೆ. ಹೀಗಾಗಿ CGMP ಪ್ರಮಾಣ ಕಡಿಮೆ ಆಗುತ್ತದೆ. ಅದರಿಂದ ರಕ್ತನಾಳಗಳ ಒಳವ್ಯಾಸ ಕಡಿಮೆ ಆಗುತ್ತದೆ. ಆದರೆ GTNದ ಚಯಾಪಚಯದಿಂದ ಉಂಟಾದ ನೈಟ್ರಿಕ್ ಆಕ್ಸೈಡ್ ಹಾಗೆ ಆಗಲು ಬಿಡುವುದಿಲ್ಲ. ನೈಟ್ರಿಕ್ ಆಕ್ಸೈಡ್ ಅಚಕ್ರೀಯ ಗ್ವಾನೋಸೀನ ಟ್ರೈಫಾಸ್ಫೇಟ್‌ಅನ್ನು ಪುನಃ ಚಕ್ರೀಯ Cyclic Guanosine Mono Phosphate ಆಗಿ ಪರಿವರ್ತಿಸುತ್ತದೆ.

ಈ ರೀತಿ Glyceryl Tri Nitrate ದಲ್ಲಿ ಆಕ್ಸಿಜನ್ ಮತ್ತು ನೈಟ್ರೋಜನ್ ಇವೆರಡೂ ಇರುವ ಪುಂಜ ಇರುವುದರಿಂದಲೇ ರಕ್ತನಾಳಗಳ ಒಳವ್ಯಾಸ ಹೆಚ್ಚುವು ದರಿಂದ ಈ ತರಹದ ಪುಂಜಗಳಿರುವ ಬೇರೆ ಸಂಯುಕ್ತಗಳೂ ಈ ಕಾರ್ಯವನ್ನು ನಿರ್ವಹಿಸಬಹುದು ಎಂದು ತರ್ಕಿಸಿ ವಿಜ್ಞಾನಿಗಳು ಇಂಥ ಹೊಸ ಔಷಧಗಳಿಗಾಗಿ ಹುಡುಕುತ್ತಲಿದ್ದಾರೆ. ಜೈವಿಕ ಕ್ರಿಯೆಯಲ್ಲಿ ನೈಟ್ರಿಕ್ ಆಕ್ಸೈಡ್ ಮಹತ್ವದ ಪಾತ್ರ ವಹಿಸುತ್ತದೆ ಎಂಬ ಸಂಶೋಧನೆ ಕಳೆದ ೧೨ ವರ್ಷಗಳಲ್ಲಿ ಮಾನವನ ಶರೀರ ಶಾಸ್ತ್ರವನ್ನು ಆಳವಾಗಿ ಅರಿತುಕೊಳ್ಳಲು ಸಹಾಯಕಾರಿ ಆಗಿದೆ. ಆದರೆ ಈವರೆಗೆ ಯಾವ ಉತ್ತಮತರ ಔಷಧವನ್ನೂ ಕಂಡುಹಿಡಿಯಲಾಗಿಲ್ಲ. ನೈಟ್ರಿಕ್ ಆಕ್ಸೈಡ್ ಬಿಡುಗಡೆ ಮಾಡಬಲ್ಲ ಸಂಯುಕ್ತಗಳನ್ನು ಗುರುತಿಸಲಾಗಿದೆ. ಆದರೆ ವಿಶಿಷ್ಟ ಅಂಗಾಂಶಗಳ ಮೇಲೆ ಮಾತ್ರ ನೈಟ್ರಿಕ್ ಆಕ್ಸೈಡ್ ಬಿಡುಗಡೆ ಮಾಡಬಲ್ಲ ಸಂಯುಕ್ತ ದೊರಕಿಲ್ಲ. ಹುಡುಕಾಟವೇನೋ ಮುಂದುವರೆದಿದೆ.

**ಡಾ॥ ಸರ್ವೋತ್ತಮ ಅಂಬೇಕರ್**
೫೧, ಅನುಶ್ರೀ, ೩ನೇ ಅಡ್ಡರಸ್ತೆ, ಜಯನಗರ, ಧಾರವಾಡ - ೫೮೦ ೦೦೧

# ಕಾಲದೊಡೆಯನ ಎದೆ ಪುಟದಿ

೧

ಕಾಲದೊಡೆಯನೆದೆ ಪುಟದಿ
ಕೊರೆದು ಶಾಸನ
'ಹಸಿವು' ನೋವ ಚರಿತೆ
ಉರ್ವಿ ತುಂಬಾ ಕಾವ್ಯ !

೨

ಕವಿ ಕಾವ್ಯಕೆ ಸಂಭಾವನೆ
ಅಕಾಡಮಿ ಕೊಠಡಿಯಲಿ
ಮುಲುಕಿ
ಬಡವನ ವೇದನೆ !

೩

ಪಲ್ಲಕ್ಕಿಗೆ ಹೆಗಲಾಗಿ
ಪ್ರವಚನಕೆ ಮಿಗಿಲಾಗಿ
ಲಾಬಿಸಾಗರ ಭೋರ್ಗರೆದು
ಬೀಸಣಿಕೆಯಾಗಿ ಬೆವರು
ಸಂವಿಧಾನವಾಯಿತು
ಕೋವಿ ಉಗ್ರವಾದಕೆ !

೪

ಕಾಲದೊಡೆಯನೆದೆ ಪುಟದಿ
ಕೊರಳನದುಮಿ
ನುಂಗಿದವು
ಕವಿತೆಯ ಪದಗಳಾಗಿ ಬಿಕ್ಕಿದವು !



ಟಿ. ಎಸ್. ರಾಜೇಂದ್ರ ಪ್ರಸಾದ್, ಹೊಸದುರ್ಗ
ಸಾರ್ವಜನಿಕ ಆಸ್ಪತ್ರೆ, ಹೊಸದುರ್ಗ - ೫೭೭ ೫೨೭, ಚಿತ್ರದುರ್ಗ ಜಿಲ್ಲೆ



# ವೆನಿಜುವೇಲ ಅಮೆರಿಕಾದ ಅಧಿನಾಯಕತ್ವಕ್ಕೆ ದೊಡ್ಡ ಸವಾಲು

**ಸೀಯಾರ್ಕೆ**




ದಕ್ಷಿಣ ಅಮೆರಿಕ ಖಂಡದ ಉತ್ತರದ ತುದಿಯಲ್ಲಿ ಕೆರೆಬಿಯನ್ ಸಮುದ್ರದ ತೀರದಲ್ಲಿರುವ ಪುಟ್ಟ ದೇಶ ವೆನಿಜುವೇಲ ಈಗ ಅಮೆರಿಕದ ಆಡಳಿತಕ್ಕೆ ದೊಡ್ಡ ಕಂಟಕವಾಗಿಬಿಟ್ಟಿದೆ. ಪ್ರಪಂಚದಲ್ಲಿ ದೊಡ್ಡ ಪ್ರಮಾಣದಲ್ಲಿ ತೈಲ ರಫ್ತು ಮಾಡುತ್ತಿರುವ ದೇಶಗಳ ಪೈಕಿ ಐದನೆ ಸ್ಥಾನ ಪಡೆದಿರುವ ಲ್ಯಾಟಿನ್ ಅಮೆರಿಕದ ಈ ರಾಷ್ಟ್ರ ಕೈಬಿಟ್ಟು ಹೋಗುತ್ತಿರುವ ಭೀತಿ ಜಾರ್ಜ್‌ಬುಷ್ ಪಟಾಲಂಅನ್ನು ಆವರಿಸಿಕೊಂಡಿದೆ. ಕೆರಿಬಿಯನ್‌ನಲ್ಲಿ ಇನ್ನೊಂದು ಕ್ಯೂಬಾದ ಭೂತದ ಉದ್ಭವ ಅವರನ್ನು ಕಾಡುತ್ತಿದೆ. ಅಷ್ಟೇ ಅಲ್ಲ, ವೆನಿಜುವೇಲ ರೂಪಿಸಿರುವ ಪರ್ಯಾಯ ಆರ್ಥಿಕ ವ್ಯವಸ್ಥೆಯ ಮಾದರಿ ಇಡೀ ಲ್ಯಾಟಿನ್ ಅಮೆರಿಕದಲ್ಲಿ ಹರಡಿ, ಈ ಪ್ರದೇಶ ತಮ್ಮ ಕಪಿಮುಷ್ಟಿಯಿಂದ ಜಾರಿಹೋಗುವ ಭಯದಿಂದ ಅವರು ತತ್ತರಿಸುತ್ತಿದ್ದಾರೆ. ವೆನಿಜುವೇಲದ ಅಧ್ಯಕ್ಷ ಹ್ಯೂಗೋ ಶವೇಜ್ ಇತ್ತೀಚೆಗೆ ಜರುಗಿದ ಜನಮತ ಗಣನೆಯಲ್ಲಿ ಅತ್ಯಧಿಕ ಜನಾದರಣೆ ಪಡೆದುಕೊಂಡು ಅಧಿಕಾರದಲ್ಲಿ ಮುಂದುವರಿಯುತ್ತಿರುವುದು ಈ ತಲೆನೋವಿಗೆ ಕಾರಣ.

ಅಪಾರವಾದ ತೈಲಸಂಪತ್ತನ್ನು ಹೊಂದಿದ್ದರೂ, ಸುಮಾರು ಎರಡೂವರೆ ಕೋಟಿ ಜನಸಂಖ್ಯೆಯ ವೆನಿಜುವೇಲ ಬಡರಾಷ್ಟ್ರ. ಶೇ. ೮೦ರಷ್ಟು ಜನ ಬಡತನದಲ್ಲಿ ಜೀವಿಸುತ್ತಿದ್ದಾರೆ. ೧೯೨೦ರಲ್ಲೇ ಈ ದೇಶದಲ್ಲಿ ತೈಲ ಪತ್ತೆಯಾಯಿತಾದರೂ ಕಿಂಚಿತ್ತೂ ಅಭಿವೃದ್ಧಿ ಹೊಂದಿಲ್ಲ. ತೈಲೋತ್ಪಾದನೆಯ ಲಾಭವನ್ನೆಲ್ಲ ನುಂಗುತ್ತಿರುವವರು ಅಮೆರಿಕದ ಬಹುರಾಷ್ಟ್ರೀಯ ಕಂಪೆನಿಗಳವರು ಮತ್ತು ಅವರ ಬೆಂಬಲಿಗರಾದ ಸ್ಥಳೀಯ ಶ್ರೀಮಂತರು. ಅಮೆರಿಕ ಕೃಪಾಪೋಷಿತ ಸರ್ವಾಧಿಕಾರಿ ಆಡಳಿತೆಯಲ್ಲೇ ಹೆಚ್ಚು ಕಾಲ ಇದ್ದ ವೆನಿಜುವೇಲದಲ್ಲಿ ಪ್ರಜಾಪ್ರಭುತ್ವ ವ್ಯವಸ್ಥೆ ಸ್ಥಾಪನೆಗೊಂಡಿದ್ದು ಕಳೆದ ಶತಮಾನದ ಮಧ್ಯದಲ್ಲಿ. ಆದರೂ ಸರಕಾರದ ಆಡಳಿತ ಇದ್ದದ್ದು ಶ್ರೀಮಂತರ ಕೈಯಲ್ಲೆ. ಕಳೆದ ನಲವತ್ತು ವರ್ಷಗಳಲ್ಲಿ ದೇಶದ ಎರಡು ಬಲಪಂಥೀಯ ಪಕ್ಷಗಳು ಸರದಿಯ ಮೇಲೆ ಅಧಿಕಾರ ಹಂಚಿಕೊಂಡು, ಅಮೆರಿಕದ ಕಂಪೆನಿಗಳ ಜೊತೆ ಶಾಮೀಲಾಗಿ ತೈಲೋತ್ಪನ್ನದ ಲಾಭವನ್ನು ತಿಂದು ತೇಗುತ್ತಿದ್ದವು. ಅದಕ್ಕೆ ಕಡಿವಾಣ ಬಿದ್ದದ್ದು ೧೯೯೮ರಲ್ಲಿ ಸಮಾಜವಾದಿ ವಿಚಾರ ಧಾರೆಯನ್ನು ಹೊಂದಿದ್ದು, ಜನಪರ ಹೋರಾಟಗಳಲ್ಲಿ ತೊಡಗಿಕೊಂಡಿದ್ದ ಹ್ಯೂಗೋ ಶವೇಜ್ ಚುನಾವಣೆಯಲ್ಲಿ ಬಹುಮತ ಗಳಿಸಿ ಅಧಿಕಾರದ ಚುಕ್ಕಾಣಿ ಹಿಡಿದಾಗ. ವಾಷಿಂಗ್ಟನ್ ಲ್ಯಾಟಿನ್ ಅಮೆರಿಕದ ದೇಶಗಳ ಮೇಲೆ ಹೊರಿಸಿರುವ ಆರ್ಥಿಕ ನೀತಿಗಳಿಗೆ ಪ್ರತಿಯಾಗಿ ಅಧ್ಯಕ್ಷ ಶವೇಜ್ ನಾಡಿನ ಆರ್ಥಿಕಾಭಿವೃದ್ಧಿಗಾಗಿ, ಸಾಮಾಜಿಕ ಸುಧಾರಣೆಗಳಿಗಾಗಿ ಅನುಸರಿಸಿದ ಪರ್ಯಾಯ ನೀತಿ ಅಮೆರಿಕದ ಸಾಮ್ರಾಜ್ಯಶಾಹಿಗಳನ್ನು, ಸ್ಥಳೀಯ ಶ್ರೀಮಂತ ವರ್ಗವನ್ನು ಅಧೀರರನ್ನಾಗಿಸಿತು. ಹಾಗಾಗಿ ಶವೇಜ್ ಆಡಳಿತವನ್ನು ಅಂತ್ಯಗೊಳಿಸಲು ಅವರು ಷಡ್ಯಂತ್ರವನ್ನು ರೂಪಿಸತೊಡಗಿದರು. ಆದರೆ ಅವೆಲ್ಲ ಇಂದು ಮಣ್ಣುಗೂಡಿವೆ.

ಸಾಮಾನ್ಯ ಟ್ರೇಡ್ ಯೂನಿಯನ್ ನಾಯಕನಾಗಿದ್ದ ಹ್ಯೂಗೋ ಶವೇಜ್ ಅಂತಾರಾಷ್ಟ್ರೀಯ ಗಮನ ಸೆಳೆದಿದ್ದು ೧೯೯೨ರಲ್ಲಿ. ಭ್ರಷ್ಟ ಕಾರ್ಲೋಸ್ ಅಂಡ್ರೆಸ್ ಪೆರೇನ ಸರಕಾರವನ್ನು ಉರುಳಿಸಲು ಜರುಗಿದ ಮಿಲಿಟರಿ ರಾಜ್ಯ ಕ್ರಾಂತಿಯಲ್ಲಿ ಅವನು ಪ್ರಮುಖ ಪಾತ್ರ ವಹಿಸಿದ್ದ. ಆಗ ಬಂಧನಕ್ಕೊಳಗಾಗಿ ಎರಡು ವರ್ಷ ಕಾರಾಗೃಹದಲ್ಲಿದ್ದು ಬಿಡುಗಡೆಯಾದ. ಆನಂತರ ೧೯೯೮ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ಅಧ್ಯಕ್ಷನಾಗಿ ಆಯ್ಕೆಗೊಂಡ. ಆಗಿನಿಂದ ಅವನನ್ನು ಅಧಿಕಾರದಿಂದ ಪದಚ್ಯುತಗೊಳಿಸಲು ಅಮೆರಿಕದ ಡಾಲರಿನ ಬೆಂಬಲದಿಂದ ಬಲಪಂಥೀಯ ವಿರೋಧ ಪಕ್ಷಗಳು ಸತತವಾದ ಪ್ರಯತ್ನಗಳನ್ನು ನಡೆಸಿವೆ. ೨೦೦೦ದ ವರ್ಷದಲ್ಲಿ ಸಂವಿಧಾನದಲ್ಲಿ ನೀಡಿರುವ ಚುನಾಯಿತ ಪ್ರತಿನಿಧಿಯನ್ನು ವಾಪಾಸು ಕರೆಸಿಕೊಳ್ಳುವ ಹಕ್ಕನ್ನು ಚಲಾಯಿಸಿ ಸರಕಾರವನ್ನು ಪದಚ್ಯುತಗೊಳಿಸಲು ಪ್ರಯತ್ನಿಸಲಾಯಿತು. ಈ ವಾಪಾಸು ಕರೆಸಿಕೊಳ್ಳುವ ಹಕ್ಕನ್ನು ಸಂವಿಧಾನದತ್ತವಾಗಿ ನೀಡಿದ್ದೂ ಸಹ ಶವೇಜ್ ಸರಕಾರವೇ. ಆದರೆ ವಿರೋಧ ಪಕ್ಷಗಳ ಈ ತಂತ್ರ ಫಲಿಸಲಿಲ್ಲ. ೨೦೦೨ರ ಏಪ್ರಿಲ್‌ನಲ್ಲಿ ಬಲಪಂಥೀಯ ಪ್ರತಿಗಾಮಿಗಳು ಬುಷ್ ಆಡಳಿತದ ಬೆಂಬಲದಿಂದ ರಾಜ್ಯಕ್ರಾಂತಿ ನಡೆಸಿ ಅಧ್ಯಕ್ಷ ಶವೇಜ್‌ರನ್ನು ಬಂಧಿಸಿ ಮಿಲಿಟರಿ ಅಧಿಕಾರಿಗಳು ಮತ್ತು ಉದ್ದಿಮೆದಾರರನ್ನೊಳಗೊಂಡ ಸರಕಾರವೊಂದನ್ನು ಸ್ಥಾಪಿಸಿದರು. ಅವರ ಈ ಕ್ರಮದ ವಿರುದ್ಧವಾಗಿ ಬಡಜನರು, ಕಾರ್ಮಿಕರು ಬಂಡೆದ್ದರು. ದೇಶಾದ್ಯಂತ ಈ ಧೂರ್ತರ ವಿರುದ್ಧ ಪ್ರತಿಭಟನೆ ಬಿರುಗಾಳಿಯಂತೆ ಹಬ್ಬಿತು. ಇದರಿಂದ ಅಧೀರರಾದ ಬಲಪಂಥೀಯರು ಹಿಂದೆ ಸರಿದು ಶವೇಜ್‌ನನ್ನು ಮತ್ತೆ ಅಧಿಕಾರದಲ್ಲಿರಿಸಿತು. ಚಿಲಿಯಲ್ಲಿ ಅಲೆಂಡೆ ಸರಕಾರವನ್ನು ಉರುಳಿಸಿ ರಕ್ತದ ಕೋಡಿ ಹರಿದ ಉದಾಹರಣೆ ನೆನಪಿಗೆ ತರುವಂಥದ್ದೇ ಈ ಪ್ರಕರಣವೂ ಕೂಡ. ಜನಾಂದೋಲನ ಪ್ರಬಲವಾಗಿದ್ದುದರಿಂದ ಚಿಲಿ ದುರಂತ ಮರುಕಳಿಸಲಿಲ್ಲ ಅಷ್ಟೆ.

ಈ ಪ್ರಯತ್ನ ವಿಫಲಗೊಂಡ ಮೇಲೂ ಅಮೆರಿಕದ ಬಹುರಾಷ್ಟ್ರೀಯ ಕಂಪನಿಗಳು ಮತ್ತು ಪ್ರತಿಗಾಮಿಗಳು ಸುಮ್ಮನೆ ಕೂಡಲಿಲ್ಲ. ೨೦೦೨ರ ಡಿಸೆಂಬರ್‌ನಲ್ಲಿ ವೆನಿಜುವೇಲದ ತೈಲೋದ್ಯಮವನ್ನು ಸ್ಥಗಿತಗೊಳಿಸಲು ಪ್ರಭುತ್ವ ಒಡೆತನದಲ್ಲಿದ್ದ ತೈಲೋದ್ಯಮ ಸಂಸ್ಥೆಯಲ್ಲಿ ಮುಷ್ಕರವನ್ನು ಪ್ರಚೋದಿಸಲಾಯಿತು. ವೆನಿಜುವೇಲದ ಶವೇಜ್ ಸರಕಾರ ಉರುಳಿಸಲು ೪ ಮಿಲಿಯ ಡಾಲರುಗಳನ್ನು ಮೀಸಲಾಗಿರಿಸಿರುವ ಬುಷ್ ಆಡಳಿತ ಮುಷ್ಕರಕ್ಕೆ ಬೆಂಬಲ ನೀಡಲು ಒಂದು ಮಿಲಿಯ ಡಾಲರ್ ಸುರಿಯಿತು. ಎರಡು ತಿಂಗಳ ಕಾಲ ನಡೆದ ಈ ಮುಷ್ಕರವನ್ನು ಶವೇಜ್ ಸರಕಾರ ಯಶಸ್ವಿಯಾಗಿ ಎದುರಿಸಿತು. ಸ್ವಾಯತ್ತ ಸಂಸ್ಥೆಯಾಗಿ ನಡೆಯುತ್ತಿದ್ದ ತೈಲೋದ್ಯಮವನ್ನು ಸರಕಾರದ ಸುಪರ್ದಿಗೆ ತೆಗೆದುಕೊಂಡು ಸರಕಾರವನ್ನು ವಿರೋಧಿಸುತ್ತಿದ್ದವರನ್ನು ಕೆಲಸದಿಂದ ಹೊರ ಹಾಕಿತು. ಅಮೆರಿಕ ಮತ್ತು ಪಶ್ಚಿಮ ರಾಷ್ಟ್ರಗಳು ವೆನಿಜುವೇಲದ ತೈಲೋದ್ಯಮದ ಕಥೆ ಮುಗಿಯಿತೆಂದು ಭಾವಿಸಿದ್ದರು. ಆದರೆ ಕಾರ್ಮಿಕರ ಸಹಕಾರದಿಂದ ತೈಲೋದ್ಯಮ ಚೇತರಿಸಿಕೊಂಡಿದ್ದಲ್ಲದೆ, ಉತ್ಪಾದನೆಯನ್ನು ಮತ್ತಷ್ಟು ಹೆಚ್ಚಿಸಿತು. ಬಲಪಂಥೀಯರಿಗೆ ಮತ್ತೊಮ್ಮೆ ಮುಖಭಂಗವಾಯಿತು. ಆದರೂ ಅವರು ತಮ್ಮ ಪ್ರಯತ್ನಗಳನ್ನು ಕೈಬಿಡಲಿಲ್ಲ. ಕ್ಯೂಬಾದ ನಾಯಕ ಫಿಡೆಲ್ ಕ್ಯಾಸ್ಟ್ರೋ ಜೊತೆ ವೆನಿಜುವೇಲದ ಅಧ್ಯಕ್ಷ ಶವೇಜ್‌ರ ಮೈತ್ರಿ

೫೨ನೇ ಪುಟಕ್ಕೆ



# ಸ್ತ್ರೀಪರ ಕಾಳಜಿಯಿದ್ದ ಅಪರೂಪದ ಜೀವ ವಿಜ್ಞಾನಿ

# ಮಾರ್ಗರೇಟ್ ಡೇಹಾಫ್

**ಜೀವವಿಜ್ಞಾನಿಗಳಲ್ಲಿ ಮಾರ್ಗರೇಟ್ ಡೇಹಾಫ್‌ರಷ್ಟೇ ತೀಕ್ಷ್ಣಮತಿಗಳಾದ, ಅವರಷ್ಟೇ ಅಥವಾ ಅವರಿಗಿಂತಲೂ ಮಿಗಿಲಾದ ಖ್ಯಾತಿ ಗಳಿಸಿದ ಮಹಿಳಾ ವಿಜ್ಞಾನಿಗಳಿರಬಹುದು. ಆದರೆ, ಮಹಿಳೆಯರ ಏಳಿಗೆಗಾಗಿ ಮಾರ್ಗರೇಟ್ ಡೇಹಾಫ್‌ರಲ್ಲಿದ್ದ ಕಳಕಳಿ ಎಲ್ಲ ಮಹಿಳಾ ವಿಜ್ಞಾನಿಗಳಲ್ಲಿ ಕಂಡುಬರುವುದಿಲ್ಲ. ಪುರುಷರೇ ತುಂಬಿರುವ ವಿಜ್ಞಾನ ಪ್ರಪಂಚದಲ್ಲಿ ಮಹಿಳೆಯರು ಎದುರಿಸಬೇಕಾಗುವ ಸಮಸ್ಯೆಗಳ ಬಗ್ಗೆ ವಿಶೇಷವಾಗಿ ಚಿಂತಿಸಿ, ಅವುಗಳ ನಿವಾರಣೆಗೆ ಡೇಹಾಫ್ ಸತತ ಶ್ರಮಿಸಿದರು. ಮಹಿಳೆಯರು ವಿಜ್ಞಾನ ಕ್ಷೇತ್ರವನ್ನು ಆಯ್ಕೆಮಾಡಿಕೊಳ್ಳುವಂತೆ, ಅಲ್ಲಿ ಪುರುಷರಿಗೆ ಸಮಸಮವಾಗಿ ಸಂಶೋಧನೆ ನಡೆಸುವಂತೆ ಸತತ ಬೆಂಬಲ ಕೊಟ್ಟರು. ಆದ್ದರಿಂದಲೇ, ಬಹು ಪ್ರತಿಭಾನ್ವಿತ ಯುವ ಮಹಿಳಾ ವಿಜ್ಞಾನಿಗಳಿಗೆ ಇವರ ಹೆಸರಿನಲ್ಲಿ ಪಾರಿತೋಷಕವೊಂದನ್ನು ನೀಡಲಾಗುತ್ತಿದೆ.**

**ಪ್ರೊ || ಎಂ.ಆರ್.ಎನ್. ಮೂರ್ತಿ**

**ಈ**ಗ ಕೆಲವಾರಗಳ ಹಿಂದಷ್ಟೇ ಕೊನೆಯುಸಿರೆಳೆದ ಫ್ರಾನ್ಸಿಸ್ ಕ್ರಿಕ್ ಇಪ್ಪತ್ತನೆಯ ಶತಮಾನದ ಅತಿ ಪ್ರಮುಖ ಜೀವಶಾಸ್ತ್ರ ಸಂಶೋಧಕ ಎನ್ನುವುದು ನಿರ್ವಿವಾದಿತ. ಈತ ೧೯೫೩ರಲ್ಲಿ ಎಲ್ಲ ಜೀವಕೋಶಗಳಲ್ಲೂ ಇರುವ ಅನುವಂಶೀಯ ಮಾಹಿತಿಯ ಆಗರವಾದ ಡೀಆಕ್ಸಿರೈಬೋನ್ಯೂಕ್ಲಿಯಿಕ್ ಆಮ್ಲದ ಅಣುರಚನೆಯ ಮಾದರಿಯನ್ನು ಪ್ರತಿಪಾದಿಸಿದ. ಈ ಸಂಶೋಧನೆಯ ನಂತರ ಜೀವಶಾಸ್ತ್ರದ ಎಲ್ಲ ಶಾಖೆಗಳಲ್ಲೂ ಹೊಸ, ಹೊಸ ಸಂಶೋಧನೆಗಳು ಪ್ರಾರಂಭವಾದವು. ಈ ಸಂಶೋಧನೆಗಳಿಗೆ ಬೇಕಾಗಿದ್ದ ತಳಹದಿಯನ್ನು ಡೀಆಕ್ಸೀ ರೈಬೋನ್ಯೂಕ್ಲಿಯಿಕ್ ಆಮ್ಲದ ಅಣುರಚನೆ ಒದಗಿಸಿತು. ಇನ್ನೂ ಶೈಶವಾವಸ್ಥೆಯಲ್ಲೇ ಉಳಿದಿದ್ದ ಜೀವಶಾಸ್ತ್ರ, ರಸಾಯನಶಾಸ್ತ್ರಕ್ಕೆ ಸರಿಸಾಟಿಯಾಗಿ ನಿಲ್ಲುವ ಧೈರ್ಯತಾಳಿತು. ಜೀವಶಾಸ್ತ್ರಕ್ಕೆ ಸಂಬಂಧಿಸಿದ ವೈಜ್ಞಾನಿಕ ಮಾಹಿತಿಗಳು ಪ್ರವಾಹೋಪಾದಿಯಲ್ಲಿ ಪ್ರಯೋಗಾಲಯಗಳಿಂದ ಹೊರಬರಲಾರಂಭಿಸಿದವು. ಈ ಸಮಯದಲ್ಲೇ, ಜೀವಶಾಸ್ತ್ರಕ್ಕೆ ಕಾಲಿರಿಸಿದ ಮಾರ್ಗರೇಟ್ ಡೇಹಾಫ್ ಎನ್ನುವ ಮಹಿಳಾ ವಿಜ್ಞಾನಿ ಈ ಹೊಸ ಮಾಹಿತಿಯನ್ನು ಹೇಗೆ ಬಳಸಬಹುದು ಮತ್ತು ಅದು ಸಾರ್ವಜನಿಕರಿಗೆ ಲಭಿಸುವಂತೆ ಹೇಗೆ ವ್ಯವಸ್ಥೆ ಮಾಡಬಹುದೆಂಬುದನ್ನು ಯೋಚಿಸಲು ತೊಡಗಿದರು. ಜೀವಶಾಸ್ತ್ರದ ಮಾಹಿತಿಯನ್ನು ಆಗ ತಾನೇ ಲಭ್ಯವಾಗುತ್ತಿದ್ದ ಕಂಪ್ಯೂಟರ್‌ಗಳಲ್ಲಿ ಶೇಖರಿಸುವ, ಬಳಸುವ ವಿಧಾನಗಳನ್ನು ಬಳಕೆಗೆ ತರುವತ್ತ ತಮ್ಮ ಮೇಧಾಶಕ್ತಿಯನ್ನು ವ್ಯಯಿಸಲಾರಂಭಿಸಿದರು. ಅವರ ಪರಿಶ್ರಮದಿಂದಲೇ ಇಂದು 'ಬಯೋ ಇಂಫರ್ಮ್ಯಾಟಿಕ್ಸ್' ಎಂಬ ಹೆಸರಿನಿಂದ ಬಹಳ ಪ್ರಚಾರ ಗಳಿಸುತ್ತಿರುವ ವಿಭಾಗ ಜನಿಸಿತು ಎಂದು ಧಾರಾಳವಾಗಿ ಹೇಳಬಹುದು. ಇಂದು 'ಬಯೋ ಇಂಫರ್ಮ್ಯಾಟಿಕ್ಸ್' ತಂತ್ರಗಳನ್ನು ಜೀವಶಾಸ್ತ್ರದ ಎಲ್ಲ ಶಾಖೆಗಳಲ್ಲೂ ಬಳಸುತ್ತಾರೆ. ಅನುವಂಶೀಯತೆ, ಜೀವವಿಕಾಸ ಮುಂತಾದ ಅನೇಕ ಶಾಖೆಗಳಲ್ಲಿ 'ಬಯೋ ಇಂಫರ್ಮ್ಯಾಟಿಕ್ಸ್' ಹೊಸ ಬೆಳಕನ್ನು ಚೆಲ್ಲುತ್ತಲಿದೆ.

ಮಾರ್ಗರೇಟ್ ಡೇಹಾಫ್ ಹುಟ್ಟಿದ್ದು ಅಮೆರಿಕಾದ ಪೆನ್ಸಿಲ್ವೇನಿಯಾ ಪ್ರಾಂತ್ಯದಲ್ಲಿ. ಇಲ್ಲಿ ಪ್ರಾರಂಭಿಸಿದ ವಿದ್ಯಾಭ್ಯಾಸವನ್ನು ನ್ಯೂಯಾರ್ಕಿನಲ್ಲಿ ವಿದ್ಯಾರ್ಥಿ ವೇತನದೊಟ್ಟಿಗೆ ಮುನ್ನಡೆಸಿದರು. ಎಲ್ಲ ಹಂತಗಳಲ್ಲೂ ಪ್ರಥಮ ಸ್ಥಾನ ಗಳಿಸಿದರು. ನಂತರ ಡೇಹಾಫ್ ಶಿಕಾಗೋ ವಿಶ್ವವಿದ್ಯಾಲಯದಿಂದ ೧೯೪೮ರಲ್ಲಿ ಡಾಕ್ಟರೇಟ್ ಪದವಿ ಪಡೆದರು. ಅವರು ಡಾಕ್ಟರೇಟ್ ಪದವಿಗಾಗಿ 'ಕ್ವಾಂಟಂಕೆಮಿಸ್ಟ್ರಿ' ವಿಭಾಗದ ಕೆಲವು ಸಮಸ್ಯೆಗಳ ಬಗ್ಗೆ ಸಂಶೋಧನೆ ನಡೆಸಿದರು. ಈ ವಿಭಾಗದಲ್ಲಿ ಪರಮಾಣುಗಳಲ್ಲಿರುವ ಎಲೆಕ್ಟ್ರಾನ್ ಕಣಗಳಿಗೂ, ಪರಮಾಣುವಿನ ರಾಸಾಯನಿಕ ಗುಣಗಳಿಗೂ ಇರುವ ಸಂಬಂಧಗಳನ್ನು 'ಕ್ವಾಂಟಂ ಸಿದ್ಧಾಂತ'ದ ಆಧಾರದ ಮೇಲೆ ಅಭ್ಯಸಿಸುತ್ತಾರೆ. ಡಾಕ್ಟರೇಟ್ ಪದವಿ ಪಡೆದ ನಂತರ ವಾತಾವರಣದಲ್ಲಿರುವ ಅನಿಲಗಳ ಪ್ರಮಾಣದಲ್ಲಾಗುವ ಏರಿಳಿತಗಳನ್ನು ಸಂಶೋಧಿಸಿದರು. ೧೯೫೦ರ ದಶಕದಲ್ಲಿ ಕಾಣಿಸಿಕೊಳ್ಳಲಾರಂಭಿಸಿದ್ದ ಕಂಪ್ಯೂಟರುಗಳನ್ನು ಬಳಸುವುದರಲ್ಲಿ ವಿಶೇಷ ಪರಿಣತಿ ಪಡೆದರು. ಗಣಿತ, ರಸಾಯನಶಾಸ್ತ್ರ, ಜೀವಶಾಸ್ತ್ರದ ಆಳ ಪರಿಚಯವಾಯಿತು. ಆ ವೇಳೆಗೆ ಜೀವಶಾಸ್ತ್ರ ತ್ವರಿತಗತಿಯಲ್ಲಿ ಬದಲಾಗುತ್ತಿತ್ತು. ಹೊಸ ಮಾಹಿತಿ ನಿರಂತರ ಹೊರಬರುತ್ತಿತ್ತು. ಇದನ್ನೆಲ್ಲಾ ಸಮರ್ಪಕವಾಗಿ ಬಳಸಿಕೊಳ್ಳುವ ಮಾರ್ಗಗಳ ಅನ್ವೇಷಣೆ ಅಗತ್ಯವಾಗಿ ಆಗಬೇಕಾಗಿತ್ತು. ಮಾರ್ಗರೇಟ್ ಡೇಹಾಫ್ ಇದಕ್ಕಾಗಿ ಟೊಂಕಕಟ್ಟಿ ನಿಂತರು. ಅವರ ಕಾಣಿಕೆಯ ಪ್ರಾಮುಖ್ಯತೆ ತಿಳಿಯಬೇಕಾದರೆ, ಜೀವಶಾಸ್ತ್ರದಲ್ಲಾದ ಹೊಸ ಸಂಶೋಧನೆಗಳ ಸ್ಥೂಲ ಪರಿಚಯ ಅಗತ್ಯವಾಗುತ್ತದೆ.

ಪ್ರೋಟೀನುಗಳು ಜೀವಕೋಶಗಳಲ್ಲಿ ನಡೆಯುವ ರಾಸಾಯನಿಕ ಕ್ರಿಯೆಗಳ ವೇಗವನ್ನು ಲಕ್ಷಾಂತರ ಪಟ್ಟು ಹೆಚ್ಚಿಸುತ್ತವೆ. ಈ ಅಣುಗಳ ಸಹಾಯವಿಲ್ಲದೆ ಜೀವಕೋಶಗಳು ಹೊರ ವಾತಾವರಣದಲ್ಲಾಗುವ ಬದಲಾವಣೆಗಳಿಗೆ ಶೀಘ್ರವಾಗಿ ಹೊಂದಿಕೊಳ್ಳಲಾರವು. ನಾವು ಅವಸರದಲ್ಲಿ ಕೆಲಸ ಮಾಡುವಾಗ ಬೇಕಾಗುವ ಶಕ್ತಿಯ ಬುಗ್ಗೆಯನ್ನು ಪ್ರೋಟೀನುಗಳೇ ಬಹು ಸಮರ್ಥವಾಗಿ ಉತ್ಪಾದಿಸುತ್ತವೆ. ರಾಸಾಯನಿಕ ಕ್ರಿಯೆಗಳಲ್ಲದೇ, ಪ್ರೋಟೀನುಗಳು ನಮ್ಮನ್ನು ರೋಗರಹಿತರನ್ನಾಗಿ ಇರಿಸುವುದರಲ್ಲೂ ಬಹು ಪ್ರಮುಖ ಪಾತ್ರ ವಹಿಸುತ್ತವೆ. ನಮ್ಮ ದೇಹದಲ್ಲಿ ಸುಮಾರು ೪೦,೦೦೦ ಬೇರೆ ಬೇರೆ ಪ್ರೋಟೀನುಗಳಿವೆಯೆಂದು ಇಂದಿನ ಅಂದಾಜು. ಈ ಎಲ್ಲ ಪ್ರೋಟೀನುಗಳಿಗೂ ತಮ್ಮದೇ ಆದ ರಚನೆಗಳಿದ್ದು, ಅವು ನಿರ್ದಿಷ್ಟ ಕೆಲಸಗಳನ್ನು ನಿರ್ವಹಿಸುತ್ತವೆ. ಸಮಾಜಕ್ಕೆ ಅನೇಕ ಬಗೆಯ ಕರಕುಶಲಕರ್ಮಿಗಳ ಅಗತ್ಯವಿರುವಂತೆ, ನಮ್ಮ ದೇಹಕ್ಕೂ ಅನೇಕ ಬಗೆಯಲ್ಲಿ ವರ್ತಿಸುವ ಅಣುಗಳು ಬೇಕಾಗುತ್ತವೆ. ಇಂತಹ ಬಗೆಬಗೆಯ ಅಗತ್ಯಗಳನ್ನು ಪೂರೈಸುವುದರಲ್ಲಿ ಪ್ರೋಟೀನುಗಳದ್ದು ಸಿಂಹಪಾಲು. ಪ್ರೋಟೀನುಗಳು ಅಮೈನೋ ಆಮ್ಲಗಳೆಂಬ ಸರಳ ಅಣುಗಳ ಮಾಲೆಗಳು. ಎಲ್ಲ ಜೀವಕೋಶಗಳಲ್ಲಿ ಸಹಜವಾಗಿ ೨೦ ಬಗೆಯ ಅಮೈನೋ ಆಮ್ಲಗಳಿರುತ್ತವೆ. ಪ್ರತಿ ಪ್ರೋಟೀನಿನ ಅಣುವಿನಲ್ಲೂ ಅದಕ್ಕೇ ನಿರ್ದಿಷ್ಟವಾದ ಅಮೈನೋ ಆಮ್ಲಗಳ ಸರಣಿಯಿದೆ. ಉದಾಹರಣೆಗೆ, ನಮ್ಮ ದೇಹದ ಎಲ್ಲ ಸ್ನಾಯುಗಳಿಗೂ ಆಕ್ಸಿಜನ್ (ಆಮ್ಲಜನಕ) ಪೂರೈಸುವ ಪ್ರೋಟೀನ್, ಹಿಮೋಗ್ಲಾಬಿನ್. ನಮ್ಮ ರಕ್ತದಲ್ಲಿ ಒಟ್ಟು ೫,೦೦೦ ಕೋಟಿ ಕೋಟಿ (೫೦೦೦,೦೦೦೦೦೦೦,೦೦೦೦೦೦೦) ಹಿಮೋಗ್ಲಾಬಿನ್ನಿನ ಅಣುಗಳಿರುತ್ತವೆ. ಎಲ್ಲ ಹಿಮೋಗ್ಲಾಬಿನ್ ಅಣುಗಳಲ್ಲೂ ಅಮೈನೋ ಆಮ್ಲಗಳು ಅದೇ

ಸರಣಿಯಲ್ಲಿ ಇರುತ್ತವೆ. ಇದೇ ರೀತಿ, ನಮ್ಮ ಜಠರದಿಂದ ಒಸರುವ ರಸದಲ್ಲಿರುವ, ಪಚನ ಕ್ರಿಯೆಗೆ ನೆರವಾಗುವ ಬಿಲಿಯಗಟ್ಟಲೆ ಟ್ರಿಪ್ಸಿನ್ ಪ್ರೋಟೀನ್ ಅಣುಗಳಲ್ಲಿ ಅದರದೇ ಆದ ಅಮೈನೋ ಆಮ್ಲಗಳ ಸರಣಿಯಿರುತ್ತದೆ. ಆದರೆ, ಈ ಸರಣಿ ಹಿಮೋಗ್ಲಾಬಿನ್ನಿನ ಸರಣಿಗಿಂತ ಅತ್ಯಂತ ಭಿನ್ನ. ಪ್ರೋಟೀನಿನ ಗುಣಗಳು ಅವುಗಳಲ್ಲಿರುವ ಅಮೈನೋ ಆಮ್ಲಗಳ ಸರಣಿಯನ್ನು ಅನುಸರಿಸುತ್ತವೆ. ಆದ್ದರಿಂದಲೇ, ಹಿಮೋಗ್ಲಾಬಿನ್ ಮತ್ತು ಟ್ರಿಪ್ಸಿನ್ನಿನ ಗುಣಗಳು ಭಿನ್ನ. ೧೯೬೦ರ ದಶಕದಲ್ಲಿ ಪ್ರೋಟೀನ್ ಅಣುಗಳಲ್ಲಿರುವ ಅಮೈನೋ ಆಮ್ಲಗಳ ಸರಣಿಯನ್ನು ಗೊತ್ತುಮಾಡುವ ವಿಧಾನ ಬಳಕೆಗೆ ಬಂದಿತು. ದೇಹ ಸಕ್ಕರೆಯನ್ನು ಬಳಸಿಕೊಳ್ಳುವುದಕ್ಕೆ ನೆರವಾಗುವ ಇನ್ಸುಲಿನ್ನಿನಲ್ಲಿರುವ ಸರಣಿಯನ್ನು ಇಂಗ್ಲೆಂಡಿನ ಫ್ರೆಡ್ ಸಾಂಗರ್ ಎಂಬ ವಿಜ್ಞಾನಿ ಗೊತ್ತುಪಡಿಸಿದರು. ನಂತರ ಅನೇಕ ಪ್ರೋಟೀನುಗಳ ಅಮೈನೋ ಆಮ್ಲಗಳ ಸರಣಿ ಒಂದರ ಬೆನ್ನಲ್ಲಿ ಇನ್ನೊಂದು ತಿಳಿದುಬರತೊಡಗಿದವು.

ನಾವು ಪ್ರಾಣಿಗಳನ್ನೂ, ಸಸ್ಯಗಳನ್ನೂ ಅವುಗಳ ಮೇಲ್ಮೈ ಲಕ್ಷಣಗಳಿಂದ ಗುರುತಿಸುತ್ತೇವೆ. ಹಾಗೆಯೇ, ಅಮೈನೋ ಆಮ್ಲಗಳ ಸರಣಿಗಳನ್ನು ಬಳಸಿ ಪ್ರೋಟೀನ್ ಅಣುಗಳ ವರ್ಗೀಕರಣ, ಅವುಗಳ ರಚನೆ ಹಾಗೂ ಕ್ರಿಯೆಗಳನ್ನು ವಿಶ್ಲೇಷಿಸುವುದು ಹೇಗೆಂಬ ಸಮಸ್ಯೆ ಎದುರಾಯಿತು. ಜೊತೆಗೇ, ಪ್ರೋಟೀನ್ ಅಣುಗಳಲ್ಲಿರುವ ಅಮೈನೋ ಆಮ್ಲಗಳ ಸರಣಿಗಳನ್ನು ಸಂಗ್ರಹಿಸುವ ಬಗೆ ಹೇಗೆ, ಅವುಗಳು ಎಲ್ಲ ಜೀವವಿಜ್ಞಾನಿಗಳಿಗೂ ದೊರಕುವಂತೆ ವ್ಯವಸ್ಥೆ ಹೇಗೆ ಮಾಡಬಹುದು ಎನ್ನುವ ಸಮಸ್ಯೆಗಳು ಎದುರಾದವು.

ಈ ಸಮಯಕ್ಕೆ ಸರಿಯಾಗಿ ಮಾರ್ಗರೇಟ್ ಡೇಹಾಫ್ ಜೀವರಸಾಯನ ಶಾಸ್ತ್ರಕ್ಕೆ ಕಾಲಿರಿಸಿದರು. ಅವರು ಕಂಪ್ಯೂಟರುಗಳನ್ನು ಬಳಸಿದ ವಿಜ್ಞಾನಿಗಳಲ್ಲಿ ಮೊದಲಿಗರೊಬ್ಬರಾಗಿದ್ದಾರೆ. ಆದ್ದರಿಂದ ಪ್ರೋಟೀನುಗಳಲ್ಲಿರುವ ಅಮೈನೋ ಆಮ್ಲಗಳ ಸರಣಿಗಳನ್ನು ಕಂಪ್ಯೂಟರುಗಳಲ್ಲಿ ಸಂಗ್ರಹಿಸುವುದನ್ನೂ, ಅದನ್ನು ಹೊಸ ಸಂಶೋಧನೆಗೆ ಬಳಸುವುದನ್ನೂ ಬಳಕೆಗೆ ತಂದರು. ಅವರು ಪ್ರಾರಂಭಿಸಿದ ಇಂತಹ ಮಾಹಿತಿ ಸಂಗ್ರಹಗಳಿಗೆ ಕಂಪ್ಯೂಟರ್ ಮಾಹಿತಿ ಬ್ಯಾಂಕುಗಳೆನ್ನುತ್ತಾರೆ. ನಾವು ಬ್ಯಾಂಕುಗಳಲ್ಲಿ ಹಣವಿರಿಸುವಂತೆ, ವಿಜ್ಞಾನಿಗಳು ತಾವು ನಿರ್ಧರಿಸಿದ ಪ್ರೋಟೀನ್ ಅಮೈನೋ ಆಮ್ಲಗಳ ಸರಣಿಗಳನ್ನು ಕಂಪ್ಯೂಟರ್ ಬ್ಯಾಂಕುಗಳ ಸಂಗ್ರಹಕ್ಕೆ ಸೇರಿಸುತ್ತಾರೆ. ಈ ಮಾಹಿತಿಯ ಪ್ರತಿಗಳನ್ನು ಇತರ ವಿಜ್ಞಾನಿಗಳು ಪಡೆದುಕೊಳ್ಳುತ್ತಾರೆ. ಇಂತಹ ಬ್ಯಾಂಕುಗಳನ್ನು ನಡೆಸಲು ಹಣ ಬೇಕಾಗುತ್ತದೆ. ಬ್ಯಾಂಕುಗಳು ಕಂಪ್ಯೂಟರುಗಳನ್ನು ಖರೀದಿಸಬೇಕಾಗುತ್ತದೆ. ಬ್ಯಾಂಕಿಗೆ ಕಳುಹಿಸುವ ಮಾಹಿತಿ ಸ್ವೀಕರಿಸಿ, ಅವುಗಳನ್ನು ವರ್ಗೀಕರಿಸಿ, ಅಗತ್ಯವಿರುವ ವಿಜ್ಞಾನಿಗಳಿಗೆ ರವಾನಿಸಲು ಸಿಬ್ಬಂದಿ ಬೇಕು. ಈ ಸಿಬ್ಬಂದಿಗೆ ಸಂಬಳ, ಸವಲತ್ತು ಕೊಡಬೇಕಾಗುತ್ತದೆ. ಇದಕ್ಕೆಲ್ಲಾ ಹಣ ಬೇಕಲ್ಲವೆ ? ಸರ್ಕಾರ ಈ ಹಣವನ್ನು ಕೊಡುವಂತೆ ಅದನ್ನು ಯಾರಾದರೂ ಒಲಿಸಬೇಕು. ಈ ಕೆಲಸದಲ್ಲಿ ಮಾರ್ಗರೇಟ್ ಡೇಹಾಫ್ ವಿಶೇಷ ಮುಂದಾಳುತನ, ಮುತ್ಸದ್ದಿತನ ತೋರಿದರು. ಇವರ ಪರಿಶ್ರಮದಿಂದಾಗಿ ಅಮೆರಿಕಾದ ಸರಕಾರ ಮೊದಲ ಬ್ಯಾಂಕ್ ಸ್ಥಾಪನೆಗೆ ಹಣ ಒದಗಿಸಿತು. ಇಂದು ಮಾರ್ಗರೇಟ್ ಡೇಹಾಫ್ ಸ್ಥಾಪಿಸಿದ ಬ್ಯಾಂಕ್ ದೊಡ್ಡದಾಗಿ ಬೆಳೆದಿದೆ. ಹಿಂದೆಲ್ಲಾ ಈ ಬ್ಯಾಂಕುಗಳಿಂದ ಮಾಹಿತಿಯನ್ನು ತರಿಸಿಕೊಳ್ಳಲು ಕಂಪ್ಯೂಟರ್ ಟೇಪುಗಳನ್ನು ಬಳಸಲಾಗುತ್ತಿತ್ತು. ಇವನ್ನು ಅಂಚೆಯ ಮೂಲಕ ಪಡೆಯಬೇಕಿತ್ತು. ಈಗ ಇಂಟರ್‌ನೆಟ್ ಮೂಲಕ ಮಾಹಿತಿಯನ್ನು ಕ್ಷಣಮಾತ್ರದಲ್ಲಿ ಪಡೆಯಬಹುದು. ಇಂಟರ್‌ನೆಟ್ ಸೌಲಭ್ಯ ಪ್ರಪಂಚದ ಮೂಲೆ ಮೂಲೆಗಳಲ್ಲೂ ಲಭ್ಯವಿದೆ. ಆದ್ದರಿಂದ ಜೀವಶಾಸ್ತ್ರದ ಮಾಹಿತಿ ಎಲ್ಲ ವಿಜ್ಞಾನಿಗಳಿಗೂ ಪುಕ್ಕಟೆಯಾಗಿ ಇಲ್ಲಿಯವರೆಗೆ ದೊರೆಯುತ್ತಲಿದೆ. ಎಲ್ಲ ವಿಜ್ಞಾನಿಗಳಿಗೂ ಪುಕ್ಕಟೆಯಾಗಿ ಮಾಹಿತಿ ದೊರೆಯುತ್ತಿರುವುದಕ್ಕೆ ಮಾರ್ಗರೇಟ್ ಡೇಹಾಫ್ ಕಾರಣರೆಂದರೆ ಉತ್ಪ್ರೇಕ್ಷೆಯಲ್ಲ.

ಪ್ರೋಟೀನ್ ಅಣುಗಳ ಅಮೈನೋ ಆಮ್ಲಗಳ ಸರಣಿಗಳಲ್ಲಿ ಜೀವವಿಕಾಸದ ಮಾಹಿತಿ ಅಡಗಿದೆ ಎನ್ನುವುದನ್ನು ಕಂಡುಕೊಂಡ ಮೊದಲ ವಿಜ್ಞಾನಿಗಳಲ್ಲಿ ಮಾರ್ಗರೇಟ್ ಡೇಹಾಫ್ ಕೂಡ ಸೇರುತ್ತಾರೆ. ನಮ್ಮ ದೇಹದಲ್ಲಿರುವ ಪ್ರೋಟೀನ್ ಅಣುಗಳನ್ನು ಹೋಲುವ, ಅವು ಮಾಡುವ ಕ್ರಿಯೆಗಳನ್ನೇ ನಿರ್ವಹಿಸುವ ಅಣುಗಳು ಇತರ ಜೀವಿಗಳಲ್ಲೂ ಕಂಡುಬರುತ್ತವೆ. ಉದಾಹರಣೆಗೆ, ಬೆನ್ನೆಲುಬುಳ್ಳ ಎಲ್ಲ ಪ್ರಾಣಿಗಳಲ್ಲೂ (vertibrates) ಆಕ್ಸಿಜನ್ ಹೊತ್ತು ಸಾಗಿಸುವ ಹಿಮೋಗ್ಲಾಬಿನ್ ಅಣುಗಳಿವೆ. ಬೇರೆ ಬೇರೆ ಜೀವಜಾತಿಗಳಲ್ಲಿರುವ ಹಿಮೋಗ್ಲಾಬಿನ್ ಅಣುಗಳ ಅಮೈನೋ ಆಮ್ಲಗಳ ಸರಣಿಗಳಲ್ಲಿ ಸಣ್ಣ ಸಣ್ಣ ವ್ಯತ್ಯಾಸಗಳಿರುತ್ತವೆ. ಜೀವಿವಿಕಾಸದ ಹಾದಿಯಲ್ಲಿ, ಇಂತಹ ವ್ಯತ್ಯಾಸಗಳು ಬಹು ನಿಧಾನವಾಗಿ ಕಾಣಿಸಿಕೊಂಡಿವೆ. ಹಿಮೋಗ್ಲಾಬಿನ್ ಅಣುವಿನಲ್ಲಿ ಸುಮಾರು ೧೩೦ ಅಮೈನೋ ಆಮ್ಲಗಳಿವೆ. ವಿಕಾಸದ ಹಾದಿಯಲ್ಲಿ ನಮಗೆ ಬಹು ಸಮೀಪ ಎನ್ನಿಸುವ ಚಿಂಪಾಂಜಿ ಅಥವಾ ಗೊರಿಲ್ಲ ಹಿಮೋಗ್ಲಾಬಿನ್ನುಗಳ ಅಮೈನೋ ಆಮ್ಲಗಳ ಸರಣಿಯನ್ನು ನಮ್ಮ ಹಿಮೋಗ್ಲಾಬಿನ್ನಿನಲ್ಲಿರುವ ಸರಣಿಗೆ ಹೋಲಿಸಿದರೆ ಒಂದೆರಡು ವ್ಯತ್ಯಾಸಗಳು ಮಾತ್ರ ಕಂಡುಬರುತ್ತವೆ. ಜೀವವಿಕಾಸದ ಹಾದಿಯಲ್ಲಿ ನಮ್ಮಿಂದ ಇನ್ನೂ ದೂರವಿರುವ ಕುದುರೆ ಅಥವಾ ಕತ್ತೆಗಳ ಹಿಮೋಗ್ಲಾಬಿನ್ ಸರಣಿಗೂ, ನಮ್ಮ ಹಿಮೋಗ್ಲಾಬಿನ್ ಸರಣಿಗೂ ಇನ್ನೂ ಹೆಚ್ಚು ವ್ಯತ್ಯಾಸಗಳಿರುತ್ತವೆ. ನಾಯಿಗಳ ಹಿಮೋಗ್ಲಾಬಿನ್ ಮತ್ತು ತೋಳಗಳ ಹಿಮೋಗ್ಲಾಬಿನ್ ಅಮೈನೋ ಆಮ್ಲಗಳ ಸರಣಿಗಳಲ್ಲಿ ಕೆಲವೇ ವ್ಯತ್ಯಾಸಗಳಿದ್ದು ಈ ಎರಡು ಪ್ರಾಣಿ ಜಾತಿಯೂ ಹತ್ತಿರದ ನಂಟು ಹೊಂದಿವೆ ಎಂದು ತೋರಿಸುತ್ತವೆ. ಆದ್ದರಿಂದ, ಹಿಮೋಗ್ಲಾಬಿನ್ ಅಮೈನೋ ಆಮ್ಲಗಳ ಸರಣಿಯ ತುಲನಾತ್ಮಕ ಪರೀಕ್ಷೆಯಿಂದ, ಬೆನ್ನೆಲುಬುಳ್ಳ ಪ್ರಾಣಿಗಳ (vertibrates) ವಿಕಾಸದ ಹಾದಿ ತಿಳಿಯಬಹುದು. ಈ ರೀತಿಯ ತುಲನಾತ್ಮಕ ಪರಿಶೀಲನೆಗೆ ಸೂಕ್ತ ತಂತ್ರಗಳನ್ನು ರೂಪಿಸುವುದರಲ್ಲಿ ಮಾರ್ಗರೇಟ್ ಡೇಹಾಫ್ ಬಹು ಮುಖ್ಯ ಪಾತ್ರ ವಹಿಸಿದರು. ತಮ್ಮ ಅಪೂರ್ವ ಪ್ರತಿಭೆಯಿಂದಾಗಿ ಸಹಜವಾಗಿಯೇ ಅನೇಕ ಗೌರವಗಳು ಮಾರ್ಗರೇಟ್ ಡೇಹಾಫ್‌ರನ್ನು ಅರಸಿಬಂದವು. ಇವರು ಅಮೆರಿಕಾದ ಬಯೋಫಿಸಿಕಲ್ ಸೊಸೈಟಿಯ (Biophysical society) ಅಧ್ಯಕ್ಷರಾಗಿ ಅನೇಕ ವರ್ಷ ಸೇವೆ ಸಲ್ಲಿಸಿದರು.

ಜೀವವಿಜ್ಞಾನಿಗಳಲ್ಲಿ ಮಾರ್ಗರೇಟ್ ಡೇಹಾಫ್‌ರಷ್ಟೇ ತೀಕ್ಷ್ಣಮತಿಗಳಾದ, ಅವರಷ್ಟೇ ಅಥವಾ ಅವರಿಗಿಂತಲೂ ಮಿಗಿಲಾದ ಖ್ಯಾತಿ ಗಳಿಸಿದ ಮಹಿಳಾ ವಿಜ್ಞಾನಿಗಳಿರಬಹುದು. ಆದರೆ, ಮಹಿಳೆಯರ ಏಳಿಗೆಗಾಗಿ ಮಾರ್ಗರೇಟ್ ಡೇಹಾಫ್‌ರಲ್ಲಿದ್ದ ಕಳಕಳಿ ಎಲ್ಲ ಮಹಿಳಾ ವಿಜ್ಞಾನಿಗಳಲ್ಲಿ ಕಂಡುಬರುವುದಿಲ್ಲ. ಪುರುಷರೇ ತುಂಬಿರುವ ವಿಜ್ಞಾನ ಪ್ರಪಂಚದಲ್ಲಿ ಮಹಿಳೆಯರು ಎದುರಿಸಬೇಕಾಗುವ ಸಮಸ್ಯೆಗಳ ಬಗ್ಗೆ ವಿಶೇಷವಾಗಿ ಚಿಂತಿಸಿ, ಅವುಗಳ ನಿವಾರಣೆಗೆ ಡೇಹಾಫ್ ಸತತ ಶ್ರಮಿಸಿದರು. ಮಹಿಳೆಯರು ವಿಜ್ಞಾನ ಕ್ಷೇತ್ರವನ್ನು ಆಯ್ಕೆ ಮಾಡಿಕೊಳ್ಳುವಂತೆ, ಅಲ್ಲಿ ಪುರುಷರಿಗೆ ಸಮಸಮವಾಗಿ ಸಂಶೋಧನೆ ನಡೆಸುವಂತೆ ಸತತ ಬೆಂಬಲ ಕೊಟ್ಟರು. ಆದ್ದರಿಂದಲೇ, ಬಹು ಪ್ರತಿಭಾನ್ವಿತ ಯುವ ಮಹಿಳಾ ವಿಜ್ಞಾನಿ ಗಳಿಗೆ ಇವರ ಹೆಸರಿನಲ್ಲಿ ಪಾರಿತೋಷಕವೊಂದನ್ನು ನೀಡಲಾಗುತ್ತಿದೆ. ಇಲ್ಲಿಯವರೆಗೆ ಈ ಪಾರಿತೋಷಕವನ್ನು ೩೦ ಮಹಿಳಾ ವಿಜ್ಞಾನಿಗಳು ಪಡೆದಿದ್ದಾರೆ. ಇಂತಹ ಅಪರೂಪದ ಪ್ರತಿಭಾವಂತ ಮಹಿಳೆ ೧೯೮೩ರಲ್ಲಿ ಕೊನೆಯುಸಿರೆಳೆದರು. ಬೆಂಗಳೂರಿನಲ್ಲಿ ಅನೇಕ ಬಯೋಇಂಫರ್ಮಾಟಿಕ್ಸ್ ಕಂಪನಿಗಳು ಪ್ರಾರಂಭವಾಗುತ್ತಿರುವ ಈ ಸಮಯದಲ್ಲಿ ಡೇಹಾಫ್‌ರನ್ನು ನೆನೆಸಿಕೊಳ್ಳುವುದು ಪ್ರಸ್ತುತವೆನಿಸುತ್ತದೆ. ಇಂದು ವಿಜ್ಞಾನಕ್ಕೆ ಕಾಲಿಡುತ್ತಿರುವ ಹೆಣ್ಣು ಮಕ್ಕಳಿಗೆ ಮಾರ್ಗರೇಟ್ ಡೇಹಾಫ್ ಆದರ್ಶಪ್ರಾಯರು ಎನ್ನುವುದರಲ್ಲಿ ಸಂದೇಹವಿಲ್ಲ.

ಪ್ರೊ || ಎಂ. ಆರ್. ಎನ್. ಮೂರ್ತಿ
ಮಾಲಿಕ್ಯುಲರ್ ಬಯೋಫಿಸಿಕ್ಸ್ ಯೂನಿಟ್, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸಯನ್ಸ್, ಬೆಂಗಳೂರು




ಕಳೆದ ವರ್ಷ ನಮ್ಮನ್ನಗಲಿದ ಹಿರಿಯ ವಿಜ್ಞಾನಿ, ವಿಜ್ಞಾನ ಪ್ರಚಾರಕ, ಸ್ವಾತಂತ್ರ್ಯ ಹೋರಾಟಗಾರ ಹಾಗೂ 'ಹೊಸತು' ಸಮಾಲೋಚಕ ಮಂಡಳಿ ಸದಸ್ಯರೂ ಆಗಿದ್ದ ಪ್ರೊ|| ಎಂ. ಎ. ಸೇತುರಾವ್ ಮತ್ತು ಅವರ ಬಾಳಸಂಗಾತಿ ಸ್ವಾತಂತ್ರ್ಯ ಹೋರಾಟಗಾರ್ತಿ ದಿವಂಗತ ಕುಂತಳ ಸೇತುರಾವ್ ಅವರ ಸವಿನೆನಪಿನಲ್ಲಿ ಸ್ಥಾಪಿಸಿರುವ ವಾರ್ಷಿಕ ಚಟುವಟಿಕೆಗಳ ಸರಣಿಯ ಉದ್ಘಾಟನಾ ಕಾರ್ಯಕ್ರಮ ಕಳೆದ ಜೂನ್ ೨೯, ೨೦೦೪ರಂದು ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್ ಸಭಾಂಗಣದಲ್ಲಿ ಜರುಗಿತು.

ಶ್ರೀ ನಿಟ್ಟೂರು ಶ್ರೀನಿವಾಸರಾವ್, ಪ್ರೊ|| ಜಿ. ಆರ್. ಲಕ್ಷ್ಮಣರಾವ್, ಡಾ|| ಎಚ್. ನರಸಿಂಹಯ್ಯ, ಪ್ರೊ|| ಕೆ. ಶ್ರೀನಿವಾಸನ್, ಪ್ರೊ|| ಅಮೂಲ್ಯ ರೆಡ್ಡಿ , ಪ್ರೊ|| ಬಿ. ಟಿ. ಪಾರ್ಥಸಾರಥಿ, ಡಾ|| ಜಿ. ರಾಮಕೃಷ್ಣ , ಶ್ರೀ ವಿ. ಎಸ್. ಕೃಷ್ಣ ಅಯ್ಯರ್, ಶ್ರೀ ಎಚ್. ಎಸ್. ದೊರೆಸ್ವಾಮಿ, ಶ್ರೀ ಆರ್. ಎಸ್. ರಾಜಾರಾಮ್ ಮುಂತಾದ ಗಣ್ಯರು ಹಾಗೂ ಸೇತುರಾವ್ ಮತ್ತು ಕುಂತಳರಾವ್ ಅವರ ಓರಗೆಯವರು, ಬಂಧುಮಿತ್ರರು ಉಪಸ್ಥಿತರಿದ್ದರು.




ಚಕ್ರ ಉರುಳಿತು
ಸುಖದ ಹಗಲು ಕಳೆದು
ಕಷ್ಟದ ಕತ್ತಲು ಕವಿಯಿತು
ಭಕ್ತನಿಗೆ ಥಕ್ಕನೆ ದೇವನ ನೆನಪಾಯಿತು
ಕೈಮುಗಿದ –

"ನೀನು ಸರ್ವಶಕ್ತಿ ಸಂಪನ್ನ
ನಾನು ಕೇವಲ ದೀನ
ಪ್ರಾರ್ಥಿಸುತ್ತೇನೆ, ಪೂಜಿಸುತ್ತೇನೆ
ಇದೋ, ಅಡಿಗಳಿಗೆರಗಿದ್ದೇನೆ
ನೀನು ನನ್ನವನಾಗು
ಬಂದ ಬವಣೆಗಳ ನೀಗು."
ದೇವ ಏನೂ ಮಾಡಲಿಲ್ಲ
ಮಾತಾಡಲೂ ಇಲ್ಲ
ನೋವುಗಳು ನೀಗಲಿಲ್ಲ
ಬವಣೆಗಳು ಬಗೆಹರಿಯಲಿಲ್ಲ
ಎಲ್ಲಿ ಏನಾಯಿತು
ಏಕೆ ಹೀಗಾಯಿತು
ಪ್ರಶ್ನೆಗಳಿಗೆ ಉತ್ತರ ಸಿಗಲೇ ಇಲ್ಲ

ಭಕ್ತ ಶಿರಬಾಗಿದ, ಗೋಗರೆದ
ಪರಿಪರಿಯಾಗಿ ಬಿನ್ನವಿಸಿದ
ತಪ್ಪೊಪ್ಪಿಕೊಂಡ –

"ಪ್ರಾರ್ಥನೆಯಲಿ ತಪ್ಪಿರಬಹುದು
ಪೂಜೆಯಲಿ ಎಡವಿರಬಹುದು
ಮುಗ್ಧ ನಾನು
ಎಲ್ಲ ಬಲ್ಲವ ನೀನು
ತಪ್ಪುಗಳ ಕ್ಷಮಿಸು, ಕೊರತೆಗಳ ಮನ್ನಿಸು
ತೊಡೆದುಬಿಡು ಇನ್ನಾದರೂ ಸುಖದ ಹಾದಿಯ ತೊಡರು"
ದೇವ ಮಿಡಿಯಲಿಲ್ಲ
ಪಡಿನುಡಿಯಲೂ ಇಲ್ಲ
ಪರಿಪರಿಯಾಗಿರಿಸಿದ್ದ ಮೊರೆಗೆ
ಇನಿತೂ ಸ್ಪಂದಿಸದಿದ್ದ ಕಂಡು
ಭಕ್ತ ತೀರ್ಮಾನಕ್ಕೆ ಬಂದ –

"ಎಲ್ಲವೂ ನಿನ್ನದೆ ಮಾಯೆ
ಸಕಲವೂ ನಿನ್ನದೇ ಲೀಲೆ
ಹೀಗೆಯೇ ಆಗಬೇಕೆಂದು
ನೀ ನಿರ್ಧರಿಸಿದ ಮೇಲೆ
ನನ್ನದೇನಿದೆ ಹೇಳು"
ದೇವ ಮಣಿಯಲಿಲ್ಲ
ಮುನಿಯಲೂ ಇಲ್ಲ
ಬರಿದೆ ನಕ್ಕ.

ಶ್ರೀನಿವಾಸ ಕಾರ್ಕಳ
'ನೆಲೆ', ಭಜನಾಮಂದಿರ ರಸ್ತೆ, ಬಿಜೈ, ಮಂಗಳೂರು - ೫೭೫ ೦೦೪

೪೯ನೇ ಪುಟದಿಂದ

ಸಂಬಂಧಗಳು, ಕ್ಯೂಬಾದ ಸಮಾಜವಾದಿ ಅಭಿವೃದ್ಧಿ ಮಾದರಿಯ ಬಗ್ಗೆ ಇರುವ ಮೆಚ್ಚುಗೆ, ವೆನಿಜುವೇಲದ ಅಭಿವೃದ್ಧಿಗೆ ಅವರು ಹಾಕಿಕೊಂಡಿರುವ ಕಾರ್ಯಕ್ರಮ ಅಮೆರಿಕದ ಬುಷ್ ಆಡಳಿತೆಯನ್ನು, ಸ್ಥಳೀಯ ಬಲ ಪಂಥೀಯರನ್ನು ರೊಚ್ಚಿಗೆಬ್ಬಿಸಿದೆ. ಹಾಗಾಗಿ ಮೊನ್ನೆ ಜರುಗಿದ ಜನಮತ ಗಣನೆ ಸರಕಾರವನ್ನು ಪದಚ್ಯುತ ಗೊಳಿಸುವ ದಿಶೆಯಲ್ಲಿ ಮತ್ತೊಂದು ಪ್ರಯತ್ನವಾಗಿತ್ತು. ಇದಕ್ಕಾಗಿ ಅಮೆರಿಕ ಮಿಲಿಯಗಟ್ಟಲೆ ಡಾಲರುಗಳನ್ನು ಸುರಿಸಿತು. ಎಲ್ಲ ಕುತಂತ್ರಗಳನ್ನು ಮಾಡಿತು. ಆದರೆ ವೆನಿಜುವೇಲದ ಜನತೆ ಇನ್ನಷ್ಟು ಅಧಿಕ ಸಂಖ್ಯೆಯಲ್ಲಿ ಮತ ನೀಡಿ ಅಧ್ಯಕ್ಷ ಶವೇಜ್‌ಗೆ ಅಪೂರ್ವ ಬೆಂಬಲ ಸೂಚಿಸಿ, ಪ್ರತಿಗಾಮಿಗಳ ಮುಖಕ್ಕೆ ಮಸಿ ಬಳಿದಿದ್ದಾರೆ. ಸತ್ವ ಪರೀಕ್ಷೆಯಲ್ಲಿ ಶವೇಜ್ ಮತ್ತೊಮ್ಮೆ ಗೆದ್ದಿದ್ದಾರೆ. ಅಧಿಕಾರ ವಹಿಸಿಕೊಂಡ ಮೇಲೆ ಆತ ತಂದ ಸುಧಾರಣೆಗಳೇ ಈ ದಿಗ್ವಿಜಯಕ್ಕೆ ಬುನಾದಿ. ಭೂಸುಧಾರಣೆಗಳನ್ನು ತಂದ ಶವೇಜ್ ಸರಕಾರ ೬೦,೦೦೦ ರೈತ ಕುಟುಂಬಗಳಿಗೆ ೫.೫ ಮಿಲಿಯ ಹೆಕ್ಟೇರ್ ಜಮೀನನ್ನು ಹಂಚಿತು. ರಾಷ್ಟ್ರೀಯ ಆರೋಗ್ಯ ಮತ್ತು ಶಿಕ್ಷಣಕ್ಕಾಗಿ ಬಜೆಟ್‌ನಲ್ಲಿ ಸರಕಾರ ಶೇ. ೮ರಷ್ಟು ಮೊಬಲಗನ್ನು ವಿನಿಯೋಗಿಸಿತು. ಖಾಸಗಿ ಶಾಲೆಗಳಿಗೆ ನೀಡುತ್ತಿದ್ದ ಪರಿಹಾರ ಧನವನ್ನು ನಿಲ್ಲಿಸಿತು. ಬ್ಯಾಂಕುಗಳಲ್ಲಿ ಬಡಜನರಿಗೆ ರೈತರಿಗೆ ಸುಲಭವಾಗಿ ಸಾಲ ದೊರಕುವಂತೆ ಮಾಡಿತು. ಈ ಸಾಮಾಜಿಕ ಸುಧಾರಣೆಗಳನ್ನು ಜಾರಿಗೆ ತರುವುದರಲ್ಲಿ ಕ್ಯೂಬಾದ ಸರಕಾರ ನೆರವು ನೀಡಿತು. ಶವೇಜ್ ತನ್ನ ಸುಧಾರಣಾ ನೀತಿಯನ್ನು ಮುಂದುವರಿಸುವುದರಿಂದ ಮಾತ್ರವೇ ಅಂತಃಶಕ್ತಿಯನ್ನು ಬೆಳೆಸಿಕೊಳ್ಳಲು ಸಾಧ್ಯ.

ಪ್ರತಿಗಾಮಿ ಬಲಪಂಥೀಯರು ಮತ್ತು ಅವರ ಪೋಷಕರಾದ ಬುಷ್ ಪರಿವಾರದವರು ಜನಾಭಿಪ್ರಾಯವನ್ನು ಒಪ್ಪಿಕೊಂಡಿಲ್ಲ. ಅಮೆರಿಕದ ಮಾಜಿ ಅಧ್ಯಕ್ಷ ಜಿಮ್ಮಿ ಕಾರ್ಟರ್ ಮತದಾನ ಅತ್ಯಂತ ನ್ಯಾಯ ಸಮ್ಮತವಾಗಿ ನಡೆಯಿತು ಎಂದು ವೀಕ್ಷಕರಲ್ಲೊಬ್ಬರಾಗಿ ಹೇಳಿದ್ದರೂ ವಿರೋಧಿಗಳು ಅಕ್ರಮ ನಡೆದಿದೆ ಎಂದು ಹೇಳುತ್ತಿದ್ದಾರೆ. ಸೋಲನ್ನೊಪ್ಪಿಕೊಳ್ಳಲು ಸಿದ್ಧವಿಲ್ಲದ ಅವರು ದಾಂಧಲೆ ನಡೆಸಿ, ಹಿಂಸಾಚಾರದಲ್ಲಿ ತೊಡಗಿ, ಸರಕಾರವನ್ನು ಉರುಳಿಸಿ ರಕ್ತಪಾತ ಮಾಡಿ, ಅಧಿಕಾರ ಗ್ರಹಣ ಮಾಡಲು ಮಸಲತ್ತು ನಡೆಸಿದ್ದಾರೆ. ಇದಕ್ಕೆ ಡಾಲರಿನ ಬೆಂಬಲವೂ ಇದೆ. ಅದರಿಂದಲೇ ಈಗ ದೊರಕಿರುವ ವಿಜಯದಿಂದ ತೃಪ್ತರಾಗದೆ, ವೆನಿಜುವೇಲದ ಜನತೆ ಮತ್ತು ಸರಕಾರ ಎಚ್ಚರಿಕೆಯಿಂದ ಇರಬೇಕಾಗಿದೆ. ಲ್ಯಾಟಿನ್ ಅಮೆರಿಕದ ಯಾವ ದೇಶವೂ ತನ್ನ ಪ್ರಭಾವ ವಲಯದಿಂದ ಕಳಚಿ ಹೋಗದಂತೆ ನೋಡಿಕೊಳ್ಳಲು ಅಮೆರಿಕದ ಸರಕಾರವು ಬೇಕಾದುದು ಮಾಡಲು ಸಿದ್ಧ ಎನ್ನುವುದನ್ನು ಈ ಪ್ರದೇಶದ ಇತಿಹಾಸ ತೋರಿಸಿದೆ. ವೆನಿಜುವೇಲದ ಅಧ್ಯಕ್ಷ ಶವೇಜ್ ಕೈಗೊಳ್ಳುವ ಎಲ್ಲ ಪ್ರಗತಿಪರ ಕ್ರಮಗಳಿಗೂ ಪ್ರಪಂಚದ ಪುರೋಗಾಮಿಗಳ, ಜನತೆಯ ಬೆಂಬಲವಿದೆ. ಅದರ ಯಶಸ್ಸು ಲ್ಯಾಟಿನ್ ಅಮೆರಿಕದ ದೇಶಗಳ ಭವಿಷ್ಯದಲ್ಲಿ ಹೊಸ ಪುಟ ತೆರೆದೀತು.

ಸೀಯಾರ್ಕೆ
೮೪೯, ಬನಶಂಕರಿ ಮೂರನೇ ಹಂತ, ಕತ್ರಿಗುಪ್ಪೆ
ಬೆಂಗಳೂರು - ೫೬೦ ೦೮೫

# ಸಂಬಂಧಗಳು

**ನ**ನಗೆ ಬಹಳ ಬೇಸರವಾದಾಗ, ಗೊತ್ತು ಗುರಿ ಇಲ್ಲದವಳಂತೆ drive ಮಾಡುತ್ತಾ ಹೋಗುವುದು ಅಭ್ಯಾಸವೋ ದುರಭ್ಯಾಸವೋ ಆಗಿದೆ.

ಯಾಂತ್ರಿಕ ಬದುಕು. ಮನಸ್ಸಿಲ್ಲ. ಅವರಿಲ್ಲದ ಜೀವನ ದುಸ್ಸಹನೀಯ. ನನ್ನ ಉತ್ಸಾಹವೆಲ್ಲಾ ಅವರ ನಿರ್ಗಮನದೊಂದಿಗೆ ಬತ್ತಿ ಹೋಗಿದೆ. ಈ ಪುಟ್ಟ ಹತ್ತು ವರುಷದ ಮಗನ ಭವಿಷ್ಯ ನನ್ನ ಹೆಗಲ ಮೇಲಿನ ಜವಾಬ್ದಾರಿ. ಮನೆ ಮಾಡಿಟ್ಟಿದ್ದಾರೆ. ಆದರೆ ಯಜಮಾನನೇ ಇಲ್ಲದೆ, ಆ ಮನೆಯಲ್ಲಿರಲು ಸುತರಾಂ ಒಪ್ಪಿಗೆಯಿಲ್ಲ. ಅವರು ಜೀವನ್ಮುಕ್ತರಾಗಿ ಎರಡು ವರ್ಷಗಳೇ ಕಳೆದಿವೆ. ಆದರೂ ನನ್ನಲ್ಲಿ ಉಳಿದಿದ್ದಾರೆ. ನನ್ನ ಸಂವೇದನೆಯನ್ನು ಅರ್ಥಮಾಡಿಕೊಂಡಿದ್ದಾರೆ. ಅದಕ್ಕೇ ನಾನಿನ್ನೂ ಪ್ರಜ್ಞೆಯಲ್ಲುಳಿದಿದ್ದೇನೆ. ಮನಸ್ಸು ಧಾವಿಸಿ ಏನೇನೋ ಯೋಚನಾ ಲಹರಿಗಳಲ್ಲಿ ಮುಳುಗಿದಾಗ ಎಚ್ಚರಿಸುವುದು ಅವರೇ. ಅವರೊಂದಿಗೆ ಕಳೆದ ಸಿಹಿ - ಕಹಿ ನೆನಪುಗಳೇ ನನಗೆ ಆತ್ಮಬಲ. ಹ್ಲಾಂ.... ಎಲ್ಲೋ ಹೋಗಿಬಿಟ್ಟೆನಲ್ಲಾ – ಹೀಗೆ ಯೋಚನೆಗಳಲ್ಲಿ ನನ್ನೊಂದಿಗೆ ನನ್ನ ಕಾರೂ ಸಹ ನಾಗಾಲೋಟದಲ್ಲಿಳಿದಾಗ ಥಟ್ಟನೆ ಬ್ರೇಕ್ ! ಇದು ಪ್ರತಿನಿತ್ಯ ನನ್ನ ಮಗ ಶಾಲೆಯಿಂದ ಬರುವ ಬಸ್ ಇಳಿಯುವ ಸ್ಥಳ. ಇಂದು ದಿನಕ್ಕಿಂತ ಬಹಳ ಬೇಗ ಬಂದಿದ್ದೇನೆ. ಗುಜುಗುಜು ಶಬ್ದ, ಮಾತುಗಳ ಕಲರವ, 'ಭರ್ರೋ' ಎಂದು ಓಡಾಡುವ ಬಸ್‌ಗಳು 'ಝುಯ್' ಎಂದು ಹಂಸಗಳೋಪಾದಿಯಲ್ಲಿ ಬಳುಕುತ್ತಾ ಹೋಗುವ ಕಾರ್‌ಗಳು, ವಿಮಾನಗಳಂತೆ ಇಲ್ಲಿ ಶಬ್ದವಾದರೆ, ಅಷ್ಟು ದೂರ ಓಡಿರುವ ದ್ವಿಚಕ್ರಗಳು - ಅಬ್ಬಬ್ಬಾ - ಎಷ್ಟು ಗಲಾಟೆ - ದಿನವೂ ಇಲ್ಲೇ ಬರುತ್ತೇನೆ. ಆದರೆ ಇಷ್ಟು ಸದ್ದು ಎಂದೂ ಕೇಳಿಲ್ಲ.

ಹಾಗೇ ಸುತ್ತಮುತ್ತ ಕಣ್ಣು ಹಾಯಿಸಿದಾಗ ಅಲ್ಲಲ್ಲೇ ಇಬ್ಬರು - ಮೂವರು ಮಾತನಾಡುತ್ತಾ ನಿಂತಿದ್ದಾರೆ; ಕೆಲವರು ಬಸ್ ಬರುವ ದಾರಿಯಲ್ಲಿ ಎಲ್ಲರಿಗಿಂತ ಮುಂದಾಗಿರಲು ಕಾಲುರಸ್ತೆ ಬಿಟ್ಟು ನೇರ ರಸ್ತೆಯ ಮಧ್ಯೆಯೇ ನಿಂತಿದ್ದಾರೆ. ಇನ್ನೂ ಸೈಕಲ್‌ಗಳನ್ನೇ ಸರಿಯಾಗಿ ತುಳಿಯಲು ಬಾರದವರು ಕಾಲು, ಕೈಗಳನ್ನು ಸೊಟ್ಟಗೆ ಮಾಡಿಕೊಂಡು (ಅದೊಂದು ಫ್ಯಾಷನ್!) ಅತಿವೇಗವಾಗಿ ಓಡಿಸುತ್ತಾರೆ – ಇಂಥಾ ಜನನಿಬಿಡ ರಸ್ತೆಯಲ್ಲಿ ಒಂದು ಬದಿಯಲ್ಲಿ ಉಲ್ಲಸಿತರಾಗಿ ನೋಡುತ್ತಾ ನಿಂತಿದ್ದಾರೆ ಯಾರೋ ಹಿರಿಯರು. ಈ ವಾಹನಗಳ ಆರ್ಭಟ, ಜನರ ಎಡೆಬಿಡದ ಗದ್ದಲ ಇವೆಲ್ಲಾ ನನ್ನ ವಯಸ್ಸಿಗೇ ಅಹಿತವೆನ್ನಿಸುವಾಗ, ಆತನಿಗೆ! ಬಹುಶಃ ರಸ್ತೆ ದಾಟಲು ಹವಣಿಸುತ್ತಿರಬಹುದು!

ಅವರನ್ನು ಸಮೀಪಿಸಿ ''ನಮಸ್ಕಾರ! ರಸ್ತೆ ದಾಟಬೇಕಿತ್ತೇ? ನಾನು ಸಹಾಯ ಮಾಡಲೇ ?'' ಎಂದೆ.

''ಓ! ನಮಸ್ಕಾರ. ನೀವು ಯಾರೂಂತ ತಿಳೀಲಿಲ್ಲ – ಹಾಳು ಮರೆವು ನೋಡಿ'' – ಎಂದರು, ಯಾರೋ ಪರಿಚಯಸ್ಥರಿರಬೇಕು, ನೆನಪು ಬರುತ್ತಿಲ್ಲವೆಂಬ ಸಂಕೋಚದ ಧ್ವನಿಯಲ್ಲಿ.

''ಇಲ್ಲ– ನನ್ನ ಪರಿಚಯ ಇದೀಗ ಆಗಬೇಕಷ್ಟೆ'' – ಎನ್ನುತ್ತಾ ಸ್ವಪರಿಚಯ ಮಾಡಿಕೊಂಡೆ.

''ಹೌದಮ್ಮ. ಬಹಳ ಸಂತೋಷ - ಅಂಥಾ ಹಿರಿಯ ಸಾಹಿತಿಯ ಮಗಳು ನೀವು'' ಎಂದು ಸಂತೋಷವನ್ನು ಬಾಯಲ್ಲಿ ಮಾತ್ರವೇ ಅಲ್ಲದೆ, ಕಣ್ಣಲ್ಲೂ ಪ್ರಕಟಿಸಿದರು. ''ನೀವು ಒಬ್ಬ 'Economics Professor' ಎಂದದ್ದು ಇನ್ನೂ ಸಂತೋಷ.''

''ನಿಮ್ಮಂಥಾ ಹಿರಿಯರ ಅನುಭವದ ಮುಂದೆ, ನಾವು ಬಹಳ ಸಣ್ಣವರು'' ಎಂದೆ ನಮ್ರತೆಯಿಂದ.

''ನಾನು ರಿಟೈರ್ಡ್ ಹೆಡ್‌ಮಾಸ್ಟರ್ ತಾಯಿ! ನನಗೆ ವಿದ್ಯೆಯ ಬಗ್ಗೆ ಅಭಿಮಾನವಿರುವವರನ್ನು ಕಂಡರೆ ಅಪಾರ ಗೌರವ. ಅದರಲ್ಲೂ ನೀವು ಅಂಥಾ ಹಿರಿಯ ಸಾಹಿತಿಯ ಮಗಳು. ನಿಗರ್ವಿ, ಹಿರಿಯರ ಬಗ್ಗೆ ಕಾಳಜಿ'' ಎನ್ನುತ್ತಲೇ ತಮ್ಮ ಕನ್ನಡಕ ಸವರಿಕೊಳ್ಳುತ್ತಾ ಮೂಗಿನ ಮೇಲಕ್ಕೆ ತಳ್ಳಿದರು.

''ನನಗೂ ಒಬ್ಬನೇ ಮಗ. ಪ್ರತಾಪ್ ಅಂತ. ಬಹಳ ಬುದ್ಧಿವಂತನಮ್ಮಾ - ಈಗಾಗಲೇ ಎರಡು ವರ್ಷಗಳಾಯ್ತು statesಗೆ ಹೋಗಿ. ಅವನಿಗೆ ನನ್ನದೇ ಯೋಚನೆ - ನನ್ನ ಊಟ - ಆರೋಗ್ಯ... ಇದೇ ಚಿಂತೆ. ಇನ್ನೊಂದು ವರ್ಷ ಬಂದ್ಬಿಡ್ತೀನೀಂತ ಬರೀತಾನೆ. ನಾನೇ ಅವನಿಗೆ ಬಲವಂತ ಮಾಡ್ತಿದೀನಿ, ಬರೀ ನೀನು ಕಲಿತರೆ ಸಾಲದಪ್ಪಾ ಬೇರೆಯವರಿಗೂ ನಿನ್ನ ವಿದ್ಯೆ ಹಂಚಬೇಕು. ನೀನು ಅಲ್ಲಿಯೇ ಇದ್ದು, ಇನ್ನೂ ಹೆಚ್ಚಾಗಿ ಓದಿ, ನಾಲ್ಕು ಜನಕ್ಕೆ ಉಪಯೋಗವಾಗುವಂತಾದ ಮೇಲೆ ಇಲ್ಲಿಗೆ ಬಾ - ಅಲ್ಲಿಗೆ ಹೋಗಿದ್ದೂ ಸಾರ್ಥಕವಾಗಲಿ'' ಅಂತ. ಅವನಿಗೇನೋ ನನ್ನನ್ನೂ ಅಲ್ಲಿಗೇ ಕರೆಸಿಕೊಳ್ಳುವ ಆಸೆ - ನನಗೋ ಎಂಬತ್ತರ ಸಮೀಪ. ಅಲ್ಲಿ ಹೋಗಿ ಖಾಯಿಲೆ ಬಿದ್ದು, ಅವನಿಗೆ ವ್ಯಥೆ ಕೊಡುವುದಕ್ಕಿಂತ, ಇಲ್ಲಿ ಹೇಗೂ ನನ್ನ ತಂಗಿ ನನ್ನ ಆಸರೆಯಾಗಿದ್ದಾಳೆ – ನೋಡ್ಕೋತಾಳೆ. ನನ್ನ ಮಗನ ವಿಷ್ಯ ಯಾಕೆ ಹೇಳ್ದೇ ಅಂದ್ರೆ ಅವನಿಗೂ ನಿಮ್ಮ ಹಾಗೇ ಹಿರಿಯರೆಂದರೆ ಭಕ್ತಿ - ಗೌರವ. ಏನೋ ಮಾತಾಡಿಸಿದ ಕೂಡ್ಲೇ ಮಗನ ಬಗ್ಗೆ ಶುರು ಹಚ್ಚಿದ ಈ ಮುದುಕ ಅಂತ ಅಂದ್ಕೋಬೇಡಿ'' ಅಂದರು ತಪ್ಪು ಮಾಡಿದವರಂತೆ.

''ಛೇ ಛೇ - ಹಾಗೆಲ್ಲಾ ತಿಳ್ಕೋಬೇಡಿ ಸಾರ್ ! ನಿಮ್ಮ ಮಗ statesನಲ್ಲಿ ಎಲ್ಲಿದ್ದಾರೆ?'' ಎಂದು ನಾನು ಪ್ರಶ್ನಿಸುತ್ತಿರುವಂತೆಯೇ, ಆತನಿಗೆ ಹರೆಯದ ಹುರುಪು ಮೂಡಿಬಂತು. ಕಣ್ಣುಗಳು ಅಗಲವಾಗಿ ಭಾರಿ ಮಿಂಚಿನ ನೋಟ. ವಯಸ್ಸಿನ ಪರಿಮಿತಿಯ ನೆನಪೇ ಹಾರಿ ಹೋಯಿತು. ಉತ್ಸಾಹ, ಲವಲವಿಕೆ ಚಿಮ್ಮಿಸುತ್ತಾ - 'California' ಎಂದರು ಗಟ್ಟಿಯಾಗಿ – ಅದು ಜಂಭವಲ್ಲ – ಹೆಮ್ಮೆ ಎಂದು ಯಾರಿಗೂ ತಿಳಿಯುತ್ತಿತ್ತು. ತಮ್ಮ ಕನ್ನಡಕವನ್ನು ಮೂಗಿನ ಮೇಲಿನಿಂದ ನಿಧಾನವಾಗಿ ತೆಗೆದು, ಒಮ್ಮೆ ಪರೀಕ್ಷಿಸಿ, ಮತ್ತೆ ಮೂಗಿನ ಮೇಲೇರಿಸಿದರು.

''ನಮ್ಮನೆ ಇಲ್ಲೇ ಪಕ್ಕದಲ್ಲೇ. ೧೭ನೇ ಕ್ರಾಸ್‌ನಲ್ಲಿ ಬಲಗಡೆಗೆ ತಿರುಗಿದರೆ immediate ಆಗಿ ಒಂದು ದೊಡ್ಡ ಬಂಗಲೆ, ನೋಡಿದ್ದೀರಲ್ಲಾ ?'' ನಾನು 'ಹ್ಲೂಂ' ಎಂದು ತಲೆಯಾಡಿಸುತ್ತಲೇ, ''ಉಹೂಂ, ಅದಲ್ಲ ಅದರ ಹಿಂದಿನ outhouseನಲ್ಲಿದ್ದೀನಿ. ಅದನ್ನ ೧೯೫೭ರಲ್ಲೇ ಕಟ್ಟಿಸಿದೆ. ಮುಂದೆ ಜಾಗ ಅಷ್ಟೂ ಬಿಟ್ಟಿದ್ದೆ. ಯಾವಾಗ್ಲಾದ್ರೂ ಉಪಯೋಗಿಸಿದ್ರಾಯ್ತು ಎಂದು. ಇವನು ವಿದೇಶಕ್ಕೆ ಹೋದಾಗ ಯಾರ ಹತ್ತಿರವೂ ಹಣ ಬೇಡುವ ಪರಿಸ್ಥಿತಿ ಬಾರದಂತೆ ಆ ಜಾಗಾನೇ ನನ್ನನ್ನು ಕಾಪಾಡಿತು ನೋಡಿ - ಅದನ್ನ ಯಾರೋ ಕೊಂಡ್ಕೊಂಡು ಬಂಗ್ಲೆ ಕಟ್ಟಿಸಿದ್ರು. ಇರೋದು ನಾನೊಬ್ಬ. ನಂಜೊತೇಗೆ ಒಬ್ಬ ಒಂಟಿ ತಂಗಿ. ಆ outhouse ಸಾಕು. ಮನೆ ಹತ್ರಾನೇ ಇದೆ - ಹಾಗೇ ಒಂದು round ಬಂದು ಹೋಗ್ತೀನಿ !!''

''ಅಲ್ಲೆಲ್ಲಾ ತುಂಬಾ calm ಆಗಿರುತ್ತೆ. ಇದು ಹೇಳಿಕೇಳಿ bus terminus ಎಷ್ಟು ಗಲಾಟೆ ಇರುತ್ತೆ! ನಿಮಗೆ ರಸ್ತೆ ದಾಟಕ್ಕೆ ಕಷ್ಟ ಅನ್ನಿಸಿದ್ರೆ ನಾನು ಸಹಾಯ ಮಾಡ್ತೀನಿ. ಈ ಬಸ್‌ನವರೂ ಹಿಂದು-ಮುಂದು ನೋಡ್ತಾರೋ ಇಲ್ವೋ ಅನ್ನೋ ಹಾಗೇ [illegible]ಸುತ್ತೋ ಇಲ್ವೋ ಅನ್ನೋ speedಲಿ ಓಡಿಸ್ತಾರೆ. ಅವರು horn ಮಾಡೋದು ಕ[illegible] [illegible]ಧರ್ಮಕ್ಕನು ಯೋಚನೆ ಇಲ್ಲದೆ, ಅವಸರವಸರವಾಗಿ ಓಡಿಸ್ತಾರೆ'' ಎಂದೆ, ಅವರ ವಯ[illegible] ಗುಣವಾಗಿ ಕಿವಿ ಮಂದವಾಗಿರುತ್ತೆ ಎಂದುಕೊಂಡು.

''ಹೌದಮ್ಮಾ - ನೀವು ಹೇಳೋದೂ ಸರಿ. ಇಷ್ಟು ವಯಸ್ಸಾದ್ಮೇಲೆ ಈ ಮುದುಕರಿಗೇನು ಕೇಡು – ಒಬ್ಬೊಬ್ಬರೇ ಬರ್ತಾರಲ್ಲಾಂತ ನನಗೋಸ್ಕರ speed ಕಡಿಮೆ ಮಾಡಿರೋ ವಾಹನದವರು ಬಯ್ಕೊಂಡಿದಾರೆ ಗೊತ್ತು. ಕಿವಿ ಕೇಳ್ದೇ ಇದ್ಮೇಲೆ ಹೀಗೆ ಒಬ್ಬೊಬ್ಬರೇ ಓಡಾಡ್ತಾರೆ. ನಮಗೆ problem ತಂದಿಡ್ತಾರೆ - policeರೂ, case ಅಂತಾ ಗೊಣಗಿರೋದು ಕೇಳಿಸ್ಕೊಂಡಿದೀನಿ. ಆಗೆಲ್ಲಾ ನಂಗೂ ಒಂದು ರೀತಿ ಮುಜುಗರ ಆಗ್ತಿತ್ತು.''

ವಯಸ್ಸಾದ್ಮೇಲೆ ಕೇಳಿಸ್ದೆ ಇರೋದು ಸಹಜ. ಇವರೇನು ಆಗ್ತಿತ್ತು ಅಂತಿದಾರೆ. ನೋಡಿದ್ರೆ hearing aid ಸಹ ಕಾಣಿಸ್ತಿಲ್ಲ ಎನ್ನಿಸಿತು. ಬಹುಶಃ ನನ್ನ ಮನಸ್ಸು ಓದಿದರೇನೋ ಎಂಬಂತೆ, ''ಈಗ ನನಗೆ ಆ ಚಿಂತೆಯಿಲ್ಲ. ನನ್ನ ಮಗ ಈಗೊಂದು ವಾರದ ಕೆಳಗೆ ಅಮೆರಿಕಾದಿಂದ ಒಂದು specially designed hearing aid ಕಳಿಸಿದಾನೆ. ಕನ್ನಡಕದ frameಗೇ attach ಆಗಿದೆ. ಮೊನ್ನೆ ಮೊನ್ನೆ ಅವನ ಅತ್ತೆ ಬರೆದಿದ್ದಳಂತೆ - ಸ್ವಲ್ಪ ಕಿವಿ ಮಂದ ಆಗಿದೆ ಅಣ್ಣನಿಗೇಂತ. ಅವನಾಗ್ಲೇ ಕೊರಿಯರ್‌ನಲ್ಲಿ ಕಳಿಸೇಬಿಟ್ಟ. ಎಷ್ಟು ಖರ್ಚಾಯ್ತೋ ಏನೋ ಪಾಪ !'' ಎನ್ನುತ್ತಾ ಅತ್ಯುತ್ಸಾಹದಿಂದ ಕನ್ನಡಕ ತೆಗೆದು ತೋರಿಸಿದರು.

ಹೌದು - ಬಹಳ ಚಿಕ್ಕದು. Frameನ್ನು ಕೈಯಲ್ಲಿ ಹಿಡಿದು ತಿರುಗಿಸಿ ನೋಡಿದರೆ ಮಾತ್ರ ಕಾಣಬಹುದು.

ನಿಜಕ್ಕೂ, ಅಂಥಾ ಮಗನನ್ನು ಪಡೆದ ತಂದೆ ಧನ್ಯ ! ಅಷ್ಟು ದೂರದಲ್ಲಿದ್ದೂ ತನ್ನ ಹಲವಾರು ಸಮಸ್ಯೆಗಳ ತೊಳಲಾಟದಲ್ಲೂ ತಂದೆಯ ಬಗ್ಗೆ ಕಾಳಜಿ ! ನಾನೂ ಎಷ್ಟೋ Studentsನ್ನ ನೋಡ್ತಿರ್ತೀನಿ. ಒಂದೇ ಮನೆಯಲ್ಲಿದ್ದರೂ ಒಬ್ಬರಿಗೊಬ್ಬರ ಸಂಪರ್ಕ ಇಲ್ಲ. ಇದ್ದರೂ ತಂದೆ-ತಾಯಿಯರೆಂದರೆ, old people - ನಿರ್ಲಕ್ಷ್ಯ ಭಾವ ಬಹಳ ಮಕ್ಕಳಿಗೆ. ತಮ್ಮ ಬುದ್ಧಿವಂತಿಕೆಯಲ್ಲಿ ಅರ್ಧದಷ್ಟೂ ಅವರಿಗಿಲ್ಲವೆಂಬ ಅಚಲ ವಿಶ್ವಾಸ ಇವರದು.

ಅಷ್ಟರಲ್ಲಿ ನನ್ನ ಪುಟಾಣಿ ಮರಿ ಬಸ್ಸಿನಿಂದ ಇಳಿದು ಬಂದು, ನನ್ನ ಕೈ ಹಿಡಿದ. ''ಅಮ್ಮಾ ಈ ತಾತ ಯಾರು ?'' ಎಂದು ಅವರ ಕಡೆಗೇ smile ಮಾಡುತ್ತಾ ಕೇಳಿದ.

''ಜಾಣ ಮರಿ ! ನಿಮ್ಮ ತಾತ-ಅಪ್ಪ-ಅಮ್ಮನನ್ನೂ ಮೀರಿಸಿದ ಜಾಣನಾಗು'' ಎಂದು ಕೆನ್ನೆ ಸವರಿ ಆತ ಅಲ್ಲಿಂದ ಹೊರಟೇಬಿಟ್ಟರು.

ಕಾರು start ಮಾಡುತ್ತಿದ್ದಂತೆಯೇ, ನಾನು ನನ್ನ ಕನ್ನಡಕ ಒರೆಸುವಾಗ ಆತನ ನೆನಪು. ಮಗ ಕಳಿಸಿದ hearing aidನ್ನು ಮಮತೆಯಿಂದ ಸವರಲೆಂದೇ ಆ ಹಿರಿಯರು ಮಾತು ಮಾತಿಗೂ ಕನ್ನಡಕ ತೆಗೆದು ಒರೆಸುತ್ತಿದ್ದರೇನೋ - ಇದೇ ರಕ್ತಸಂಬಂಧ.

ಬೇರು - ಬಿಳಿಲುಗಳ ಬಂಧ.

ರಾಧಾ ಟೇಕಲ್



**ಸಾಂಸ್ಕೃತಿಕ ಮುಖಾಮುಖಿ** (ಲೇಖನಗಳು)

ಡಾ|| ರಂಗರಾಜ ವನದುರ್ಗ

**ಪುಟ : ೧೩೩** **ಬೆಲೆ : ರೂ. ೧೦೦**

**ಕನಕ ಸಾಹಿತ್ಯ ಪ್ರತಿಷ್ಠಾನ,** ನಂ. ೨೭೨, ೫ನೇ ಮೈನ್, ೧ನೇ ಸ್ಟೇಜ್, ಮಂಜುನಾಥನಗರ, ಬೆಂಗಳೂರು

ಕರ್ನಾಟಕದ ಪ್ರಧಾನ ಸಂಸ್ಕೃತಿಗಳೊಂದಿಗೆ ತಮ್ಮ ಇರುವಿಕೆಯನ್ನು ಸಾರುತ್ತ ಮುಖಾಮುಖಿ ಮಾತನಾಡುವ ಉಪಸಂಸ್ಕೃತಿ ಮತ್ತು ಪರಂಪರೆ ಬಗ್ಗೆ ವೈಚಾರಿಕವಾಗಿ ವ್ಯಾಖ್ಯಾನಿಸಿರುವ ಲೇಖನಗಳ ಸಂಗ್ರಹವಿದು. ವಿವಿಧ ಜನಾಂಗೀಯ ಸಮೂಹ ಮಧ್ಯದಿಂದೆದ್ದು ಅರಳಿರುವ ಸಂಸ್ಕೃತಿಗಳ ವಿಚಾರವಾಗಿ ಮಾತನಾಡಲು ವಿಶಾಲ ಮನೋಭಾವನೆಯ ಅಗತ್ಯ ತುಂಬಾ ಇದೆ. ಸಂಸ್ಕೃತಿ ಮತ್ತು ಪರಂಪರೆಗಳು ಜನಪರವಾಗಿ ಗುರುತಿಸಲ್ಪಟ್ಟಾಗ ಮಾತ್ರ ಸುಖೀ ಸಮಾಜದ ಉದಯ ಹಾಗೂ ಬೆಳವಣಿಗೆ ಸಾಧ್ಯ. ಶ್ರೇಷ್ಠತೆ - ಶ್ರೀಮಂತಿಕೆಯ ಪಕ್ಷ ವಹಿಸಿ ಬಂದ ಸಾಂಸ್ಕೃತಿಕ ಅಧ್ಯಯನ ನಮ್ಮಲ್ಲಿ ಹೇರಳವಾಗಿ ಇದ್ದಷ್ಟು ಅದರ ಇನ್ನೊಂದು ಭಾಗವಾದ ಮರೆತುಹೋದ ದೀನ-ದಲಿತರ ಸಂಸ್ಕೃತಿಯ ವ್ಯಾಖ್ಯಾನ ಚರಿತ್ರೆಯಲ್ಲೇಕೆ ಇಲ್ಲವೆಂದು ಚಿಂತನಶೀಲ ಸಮಯೋಚಿತ ಪ್ರಶ್ನೆಯೊಂದನ್ನು ಇಲ್ಲಿ ಎತ್ತಲಾಗಿದೆ. ಜನಜೀವನ ವಿಧಾನದಲ್ಲಿ ಒಪ್ಪಿ ಅಂಗೀಕರಿಸಲ್ಪಟ್ಟ ಒಟ್ಟು ಮೊತ್ತವೇ ಇಲ್ಲಿ ಸಂಸ್ಕೃತಿ.



**ಶ್ರೀ ಚಂಡಾಲ ಸ್ವರ್ಗಾರೋಹಣಂ** (ಕಾವ್ಯ)

ಅರವಿಂದ ಮಾಲಗತ್ತಿ



**ಪುಟ : ೮೦** **ಬೆಲೆ : ರೂ. ೬೦**

**ಅಭಿರುಚಿ ಪ್ರಕಾಶನ,** ನಂ. ೪, ಎರಡನೆಯ ಮಹಡಿ, ನಗರ ರಸ್ತೆ ಸಾರಿಗೆ ಸಂಸ್ಥೆ ಕಟ್ಟಡ, ಕೆ.ಆರ್.ವೃತ್ತ, ಮೈಸೂರು

''ಗೌರ್ಮೆಂಟ್ ಬ್ರಾಹ್ಮಣ'' ಕೃತಿಯಿಂದ ಜಾತಿವಾದಿಗಳಿಗೆ ಚುರುಕು ಮುಟ್ಟಿಸಿದ ಅರವಿಂದ ಮಾಲಗತ್ತಿಯವರ ಇನ್ನೊಂದು ಅಷ್ಟೇ ಪರಿಣಾಮಕಾರಿಯಾದ ಹಳೆಗನ್ನಡದ ಹೊಸಕಾವ್ಯ. ಹುಟ್ಟಿನಿಂದ ಮಾತ್ರ ಬ್ರಾಹ್ಮಣ ಎಂಬ ತತ್ವಕ್ಕೆ ಸವಾಲೆಸೆದು ಮಹಾ ಬ್ರಾಹ್ಮಣನಾದ ವಿಶ್ವಾಮಿತ್ರನ ತ್ರಿಶಂಕು ಸ್ವರ್ಗ ಸೃಷ್ಟಿಯ ಪುರಾಣ ಕಥೆಯಾಧಾರಿತ ಸತ್ಯವ್ರತನೆಂಬ ರಾಜನ ಕಥೆಯಿದು. ವರ್ಣವ್ಯವಸ್ಥೆಯ ವಿಷ ವರ್ತುಲದಲ್ಲಿ ನರಳಿದ ಪೌರಾಣಿಕ ಗಂಭೀರ ಪಾತ್ರಗಳನ್ನು ಇಂದಿನ ಸಮಾನತೆಯ ನೆಲೆಯಲ್ಲಿ ಮಾನವೀಯ ದೃಷ್ಟಿಯಿಂದ ಕಂಡಾಗ ಇಂಥ ಕಾವ್ಯಸೃಷ್ಟಿ ಸಾಧ್ಯ. ಒಂದೇ ಮಣ್ಣಿನೊಳ್ ಪುಟ್ಟಿ ಅದೇ ಮಣ್ಣಿನೊಳ್ ಬೆರೆವ ಮನುಜಂ ಇನ್ನೋರ್ವ ಮನುಜನಂ ಅದೇನ್ ಜಾತಿ ಜಾತಿಯೆಂದಸಹ್ಯವಾಗಿ ಕಾಣ್ಬನೋ ನಾಂ ಅರಿಯೆ! ಕ್ಷಮಿಸಿ, ಈ ಕಾವ್ಯವನ್ನೋದಿದಾಗ ಹಳೆಗನ್ನಡ ತಾನಾಗಿ ಒಲಿದು ಬರುತ್ತದೆ.

**ಹರಿಯುವ ನದಿಗೆ ಮೈಯೆಲ್ಲ ಕಾಲು** (ಕವನಗಳು)

ಜಂಬಣ್ಣ ಅಮರಚಿಂತ



**ಪುಟ : ೯೬** **ಬೆಲೆ : ರೂ. ೮೦**

**ನಾಗಶ್ರೀ ಪ್ರಕಾಶನ,** ನಂ. ೧೪೯, ೭ನೇ ಮೈನ್, ಶ್ರೀನಿವಾಸ ನಗರ ಬನಶಂಕರಿ ೧ನೇ ಹಂತ, ಬೆಂಗಳೂರು - ೬೦

ಇಂದಿನ ಮನುಷ್ಯನ ಖಾಲಿತನ, ಬೇಕೆಂದೇ ಬರಮಾಡಿ ಕೊಂಡ ಕಷ್ಟ ಕೋಟಲೆಗಳು, ಎಲ್ಲದಕ್ಕೂ ಕಿವುಡಾಗುವ ನಮ್ಮ ಉದ್ಧಟತನದ ನಿರ್ಲಕ್ಷ್ಯ, ಇವೆಲ್ಲವನ್ನೂ ಗೇಲಿ ಮಾಡುತ್ತ ಕಿವಿ ಮಾತೂ ಹೇಳುತ್ತ ಈ ಕವನಗಳು ರೂಪುಗೊಂಡಿವೆ. ಭ್ರಮೆ ಮತ್ತು ವಾಸ್ತವಿಕತೆಯ ಮುಖವನ್ನು ಗುರುತಿಸುವ ಜಾಣ್ಮೆ ಎಷ್ಟು ಅವಶ್ಯಕವೆಂದು ಸಂಕಲನದ ಒಂದು ಕವಿತೆ ''ಮಾಯಾದರ್ಪಣ'' ಚೆನ್ನಾಗಿ ನಿರೂಪಿಸಿದೆ. ಮನುಷ್ಯನ ಬದುಕು ನಿಂತ ನೀರಾಗದೆ ನಿರಂತರ ಚಲನೆ ಮತ್ತು ಪರೋಪಕಾರಿಯಾಗಿ ಹರಿಯುವ ನದಿಯಂತಾಗಬೇಕೆಂಬುದು ಇಲ್ಲಿನ ಕವಿತೆಗಳ ಆಶಯ. ನಲವತ್ತೊಂದು ಕವಿತೆಗಳ ಸಮೂಹದಲ್ಲಿ ರಾಯಚೂರಿನ ಕಾವ್ಯಪ್ರಕಾರವಾದ ಗಜಲ್‌ಗಳು ಹಾಗೂ ಕೆಲವು ಚುಟುಕುಗಳೂ ಸೇರಿವೆ. ಕಾವ್ಯಭಾಷೆ ತೀರ ಲಘುವಾಗಿಲ್ಲದೆ ಸ್ವಲ್ಪ ಬಿಗುವಿದೆ.



**ಕವಿಗೆ ಕವಿ ಮಣಿವನ್**

ಸಂ. : ಎಂ. ಸರಸ್ವತಿ

**ಪುಟ : ೧೦೪** **ಬೆಲೆ : ರೂ. ೪೫**

**ಕನ್ನಡ ವೇದಿಕೆ,** ಶ್ರೀ ಭಗವಾನ್ ಮಹಾವೀರ ಜೈನ್ ಕಾಲೇಜು, ಡಾ|| ಅನಕೃ ರಸ್ತೆ, ವಿಶ್ವೇಶ್ವರಪುರ, ಬೆಂಗಳೂರು - ೫೬೦ ೦೦೪

ಒಬ್ಬ ಪ್ರತಿಭಾವಂತ ಕವಿಗೆ ಇನ್ನೊಬ್ಬ ಪ್ರತಿಭಾಶಾಲಿ ಕವಿಯಿಂದ ಕಾವ್ಯದ ಮೂಲಕ ನುಡಿ ನಮನ. ವಂದೆ - ಪ್ರತಿವಂದನೆ ಗೈದು ಇಲ್ಲಿ ರಾರಾಜಿಸಿದ ಕವಿಗಳೆಲ್ಲ ನವೋದಯ ಕಾಲದ ಹೊಸಗನ್ನಡದ ಸಮಕಾಲೀನ ಕವಿಗಳು. ಇಲ್ಲಿ ವ್ಯಕ್ತಿಗತ ಹೊಗಳಿಕೆಯ ಹೊನ್ನಶೂಲವಿಲ್ಲದೆ ಪ್ರತಿಭೆಯನ್ನು ಮೆಚ್ಚಿ ಒಬ್ಬರ ಕಾವ್ಯರಚನಾ ಸಾಮರ್ಥ್ಯವನ್ನು ಇನ್ನೊಬ್ಬರು ಬೆರಗಿನಿಂದ ನೋಡಿದ್ದಾರೆ. ಕವಿಯ ಕಾವ್ಯವೊಂದಕ್ಕೆ ಕವಿಯೊಬ್ಬ ವಸ್ತುವಾಗಿದ್ದಾನೆ. ಇದರಿಂದ ನಮಗೆ ಕವಿ ವ್ಯಕ್ತಿತ್ವದ ಪರಿಚಯ ಸಿಗುತ್ತದೆ. ಮತ್ತೊಬ್ಬರ ಸಾಧನೆಗಳನ್ನು ಅಸೂಯೆಯಿಲ್ಲದೆ ನೋಡುವ ಸತ್ಸಂಪ್ರದಾಯವು ಇಲ್ಲಿ ಕಲಿಯುವ ಪಾಠವಾಗಿದ್ದು ಎಲ್ಲರಿಗೂ ಅನ್ವಯಿಸಬಹುದಾಗಿದೆ. ಕವಿಗಳೆಲ್ಲ ಪರಸ್ಪರ ಭೇಟಿಯಾದಂತೆ ಕಲ್ಪಿಸುವ ಮುಖಪುಟವೂ ಆಕರ್ಷಕವಾಗಿದೆ.



**ಬೇರು ತೋರಿದ ಹಾದಿ** (ಲೇಖನಗಳು)

ಡಾ|| ಕುಮಾರ ಚಲ್ಯ

**ಪುಟ : ೧೪೪** **ಬೆಲೆ : ರೂ. ೭೫**

**ಅಭಿರುಚಿ ಪ್ರಕಾಶನ,** ನಂ. ೪, ಎರಡನೆಯ ಮಹಡಿ, ನಗರ ರಸ್ತೆ ಸಾರಿಗೆ ಸಂಸ್ಥೆ ಕಟ್ಟಡ, ಕೆ.ಆರ್.ವೃತ್ತ, ಮೈಸೂರು

ಜಾನಪದ ಸಾಹಿತ್ಯ ಹಿಂದಿನಿಂದಲೂ ಬದುಕಿನ ಜೀವಾಳ ವಾಗಿಯೇ ರೂಪುಗೊಂಡಿದೆ. ಅಲ್ಲಿ ಕಾಣಬರುವುದು ಸಮೂಹಗಾನ ಮತ್ತು ಸಮಷ್ಟಿಯ ದುಡಿತ. ಒಗ್ಗಟ್ಟು ಅಲ್ಲಿ ಎದ್ದು ಕಾಣುವ ಅಂಶ ಮಾತ್ರವಲ್ಲ; ಸಮೃದ್ಧಿ ಸುಖ ಸಂತೋಷಗಳಿಗೆ ಅತೀ ಅವಶ್ಯವಾದ ನೆಲೆಗಟ್ಟೂ ಆಗಿದೆ. ಜಾನಪದ ಸಾಹಿತ್ಯದಲ್ಲಿ ವಿಪುಲವಾಗಿ ಸಿಗುವ ಸಹೃದಯತೆ, ಮಾನವೀಯ ಗುಣ ಮತ್ತು ಜೀವನ ಪ್ರೀತಿಗಳನ್ನು ಇತ್ತೀಚಿನ ದಿನಗಳಲ್ಲೆಲ್ಲಿ ಹುಡುಕೋಣ! ಪಲ್ಲಟಗೊಂಡ ಜೀವನ ವಿಧಾನ ಮತ್ತು ಮನಸ್ಸಿದ್ದರೂ ಮಾಡಲಾರದಂಥ ಸಂದಿಗ್ಧಗಳು ಮನುಷ್ಯನನ್ನಿಂದು ಕಟ್ಟಿಹಾಕಿ ಮಿತಿ ಹೇರಿವೆ. ಈ ಹಿನ್ನೆಲೆಯಲ್ಲಿ ಜಾನಪದ ಆಚರಣೆಗಳು ಮತ್ತು ಆಶಯಗಳ ಸ್ವರೂಪವನ್ನು ಇಲ್ಲಿ ಚರ್ಚಿಸಲಾಗಿದೆ. ಜಾನಪದ ಸಾಹಿತ್ಯದಲ್ಲಿ ಸಿಗುವ ಬದುಕಿನ ನೈಜ ಚಿತ್ರಣಗಳು, ಕಥಾರೂಪದಲ್ಲಿ ನೀಡುವ ಸಂದೇಶಗಳು ಮತ್ತು ನಂಬಿಕೆಗಳನ್ನಿಲ್ಲಿ ಪ್ರಸ್ತಾವಿಸಲಾಗಿದೆ.

**ಕ್ಷೇತ್ರ ಭಾಷಾ ವಿಜ್ಞಾನ** (ಅಧ್ಯಯನ)

ಡಾ|| ಎಲ್. ಮಂಜುಳಾಕ್ಷಿ



**ಪುಟ : ೨೫೬** **ಬೆಲೆ : ರೂ. ೧೫೦**

**ಅಭಿರುಚಿ ಪ್ರಕಾಶನ,** ನಂ. ೪, ಎರಡನೆಯ ಮಹಡಿ, ನಗರ ರಸ್ತೆ ಸಾರಿಗೆ ಸಂಸ್ಥೆ ಕಟ್ಟಡ, ಕೆ.ಆರ್.ವೃತ್ತ, ಮೈಸೂರು

ಭಾಷಾ ವಿಜ್ಞಾನದ ಅಧ್ಯಯನಕ್ಕೆ ಸಂಬಂಧಿಸಿದಂತೆ ಒಂದು ಆಕರ ಗ್ರಂಥವಾಗಬಲ್ಲ ಮಾಹಿತಿಯನ್ನೊಳಗೊಂಡ ಪುಸ್ತಕವಿದು. ಹಲವಾರು ಸಮುದಾಯದವರ ಆಡುಮಾತು ಹಲವಾರು ಸಂಸ್ಕೃತಿಗಳ ನೆಲೆಯಲ್ಲಿ ಭಿನ್ನವಾಗಿರುತ್ತದೆ. ಸಾಧ್ಯವಾದಷ್ಟೂ ಗ್ರಾಮಾಂತರ ಪ್ರದೇಶಗಳಿಗೆ ಭೇಟಿ ಕೊಟ್ಟು ಕ್ಷೇತ್ರಕಾರ್ಯ ನಡೆಸಿದ್ದು ಮೈಸೂರು ಪ್ರದೇಶದ ಸುತ್ತಮುತ್ತಲಿನ ಭಾಷೆ ಉಪಭಾಷೆಗಳ ಬಗ್ಗೆ ಬೆಳಕು ಚೆಲ್ಲಿದ್ದಾರೆ. ಭಾಷಾ ಸಂಶೋಧನ ವಿದ್ಯಾರ್ಥಿಗಳಿಗೆ ಅನುಕೂಲವಾಗಲೆಂಬಂತೆ ಪುಸ್ತಕದ ಕೊನೆಯಲ್ಲಿ ಪಾರಿಭಾಷಿಕ ಪದಕೋಶವನ್ನೂ ಮಾದರಿ ಪ್ರಶ್ನಾವಳಿಗಳನ್ನೂ ಕೊಟ್ಟಿದ್ದು ಅಂತರರಾಷ್ಟ್ರೀಯ ಧ್ವನಿಮಾಲೆಯನ್ನೂ ಕನ್ನಡದಲ್ಲಿ ತಿಳಿಯಪಡಿಸಿದ್ದಾರೆ. ಸಮಾಜಶಾಸ್ತ್ರ ಭಾಷಾ ವಿಜ್ಞಾನಗಳ ಸಂಶೋಧಕರಿಗೆ ಆಸಕ್ತಿಯ ಹಾಗೂ ಕುತೂಹಲ ಮೂಡಿಸುವ ಸರಳ ಮಾಹಿತಿಯನ್ನೊದಗಿಸುವ ಕೃತಿ.

- ಇಂದಿರಾಕುಮಾರಿ

# ಹೈದರಾಬಾದು ಕರ್ನಾಟಕ
# ಚರಿತ್ರೆ ಮತ್ತು ಸಾಹಿತ್ಯ ಅಂತರ್‌ಸಂಬಂಧ

ಸಂಘರ್ಷಗಳ ಕಾಲದಲ್ಲಿ ಹುಟ್ಟುವ ಕವಿಗಳು ಸುದೈವಿಗಳು. ಯಾಕೆಂದರೆ ಸಂಘರ್ಷಗಳ ಚಿತ್ರಣವನ್ನು ತಮ್ಮ ಕಾವ್ಯದಲ್ಲಿ ಪುನರ್ ಸೃಷ್ಟಿಸುವ ಅವಕಾಶವನ್ನು ಪಡೆದಿರುತ್ತಾರೆ. ಆದರೆ ಚರಿತ್ರೆಯ ಭೀಕರ ಕಾಲಘಟ್ಟದಲ್ಲಿ ಬದುಕುವ ಕವಿಗಳ ಬೆನ್ನಮೇಲೆ ಅನೇಕ ಸವಾಲು ಗಳಿರುತ್ತವೆ. ಬಂದೊದಗುವ ಸಾಂಸ್ಕೃತಿಕ ಸವಾಲುಗಳನ್ನು ಎದುರಿಸುವ ಜವಾಬ್ದಾರಿಯನ್ನು ಕವಿಗಳು ಪ್ರಾಮಾಣಿಕವಾಗಿ ಹೊತ್ತು ನಿಭಾಯಿಸಬೇಕು. ಅಂದಾಗ ಮಾತ್ರ ಕವಿಗಳಿಗೆ ಘನತೆ ಬರುತ್ತದೆ. ಅವರ ಕಾವ್ಯಕ್ಕೂ ಘನತೆಯಿರುತ್ತದೆ. ಪಂಪ, ಬಸವಣ್ಣ, ಅಲ್ಲಮ, ಕುಮಾರವ್ಯಾಸ, ಕನಕದಾಸ, ಶಿಶುನಾಳ ಶರೀಫ ಮುಂತಾದವರು ಚರಿತ್ರೆಯ ಸ್ಥಿತ್ಯಂತರದ ಕಾಲಘಟ್ಟದಲ್ಲಿ ಬದುಕಿದ್ದರಿಂದಲೇ ಅವರ ಕಾವ್ಯಕ್ಕೆ ಶಕ್ತಿ ಬಂದಿದೆ. ತಮ್ಮ ತಮ್ಮ ಕಾಲದ ಪ್ರಭುತ್ವವನ್ನು, ಧಾರ್ಮಿಕ ಮೂಲಭೂತವಾದವನ್ನು ವಿರೋಧಿಸಿರುವುದ ರಿಂದಲೇ ಪ್ರಬುದ್ಧ ಕಾವ್ಯವನ್ನು ರಚಿಸಲು ಅವರಿಗೆ ಸಾಧ್ಯವಾಯಿತು ಎಂಬುದನ್ನು ಮರೆಯುವಂತಿಲ್ಲ.

ಈ ಪ್ರಾಂತದಲ್ಲಿ, ಸ್ವಾತಂತ್ರ್ಯಪೂರ್ವದ ಕೊನೆಯ ೩೦೦ ವರ್ಷಗಳು ಚರಿತ್ರೆ ಕಂಡ ಭೀಕರ ವರ್ಷಗಳಾಗಿವೆ. (ಈ ಮಾತು ಭಾರತದ ಸಂದರ್ಭಕ್ಕೂ ಅನ್ವಯಿಸ ಬಹುದು). ೧೬ನೇ ಶತಮಾನದ ಕೊನೆಯ ಭಾಗದಲ್ಲಿ ಮೊಗಲರ ದಾಳಿಯಿಂದ ಆದಿಲ್‌ಶಾಹಿಗಳು ಪತನವಾದ ಮೇಲೆ ಈಗಿನ ಹೈದರಾಬಾದು ಕರ್ನಾಟಕವೆಂದು ಗುರುತಿಸುವ ಪ್ರಾಂತ ಹೇಳದಷ್ಟು ದುಃಸ್ಥಿತಿಗೆ ಈಡಾಯಿತು. ಜನಸಮುದಾಯಗಳ ಬದುಕು ಬೇಗುದಿಯ ಬೀಡಾಯಿತು. ಹಾಗೆ ನೋಡಿದರೆ ಈ ಪ್ರಾಂತದಲ್ಲಿ ೧೩ನೇ ಶತಮಾನ ದಿಂದಲೇ ಅನ್ಯ ಪ್ರಭುತ್ವಗಳು, ಧರ್ಮಗಳು, ಭಾಷೆಗಳು, ಸಂಸ್ಕೃತಿಗಳು ಪ್ರವೇಶಿಸಿ ನೆಲೆ ಪಡೆಯಲಾರಂಭಿಸಿದವು. ಅವು ಈ ಪ್ರಾಂತದ ಸ್ಥಳೀಯ ಧಾರ್ಮಿಕ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ವಿದ್ಯಮಾನಗಳ ಜತೆ ಕೂಡಿಕೊಂಡವು. ಅದರ ಫಲವಾಗಿ ರೂಪುಗೊಂಡ ಸಂಕರ ಸಂಸ್ಕೃತಿಯು ಕಳೆದ ನಾಲ್ಕೈದು ಶತಮಾನಗಳಿಂದ ಬೆಳೆದುನಿಂತಿದೆ. ಈ ಬೆಳವಣಿಗೆಯು ಸುಲಭವಾಗಿ ಸರಳವಾಗಿ ಏರ್ಪಟ್ಟಿದ್ದಲ್ಲ. ಜನಸಮುದಾಯಗಳಲ್ಲಿ ಬಿಕ್ಕಟ್ಟುಗಳನ್ನು, ಸಂಘರ್ಷವನ್ನು ಉಂಟುಮಾಡಿದೆ. ಒತ್ತಡ, ಅಸಹಾಯಕತೆ, ಅನಿವಾರ್ಯ ಗಳಿಂದ ಬದುಕನ್ನು ಕಟ್ಟಿಕೊಂಡಿದ್ದರಿಂದ ಸಂಕರ ಸಂಸ್ಕೃತಿ ರೂಪುಗೊಂಡಿದೆ. ಜನಸಮುದಾಯಗಳು ಪ್ರಭುತ್ವಗಳ ಎಲ್ಲ ಬಗೆಯ ಕ್ರೌರ್ಯಗಳನ್ನು ಈ ಕಾಲಘಟ್ಟದಲ್ಲಿ ಅನುಭವಿಸಿವೆ. ಧರ್ಮಗಳು ನೀಡಿರುವ ಹೊಡೆತಗಳನ್ನು ಎದುರಿಸಿ, ಬದುಕುವುದನ್ನು ಕಲಿತಿವೆ.

ಈ ಪ್ರಾಂತದಲ್ಲಿ ಕಾಣಿಸಿಕೊಂಡ ಧಾರ್ಮಿಕ ಪಂಥ ಗಳನ್ನು ಗಮನಿಸಿದರೆ ದಿಗ್ಭ್ರಮೆಯಾಗುತ್ತದೆ. ಮತಾಂತರ ಗಳು, ಒಳ ಮತಾಂತರಗಳು ಬೇಕಾದಷ್ಟು ನಡೆದಿವೆ. ನಾಥರು, ಸಿದ್ಧರು, ಆರೂಢರು, ಸೂಫಿಗಳು, ದರ್ವೇಶಿ ಗಳು, ದೀನ್‌ದಾರ್ ಚನ್ನಬಸವಣ್ಣ ಮುಂತಾದ ಹತ್ತಾರು ಪಂಥಗಳೂ ಅಲ್ಲದೆ, ಸ್ಥಳೀಯ ದೈವಗಳೇ ಒಂದೊಂದು ಧಾರ್ಮಿಕ ಪಂಥಗಳಂತೆ ಬೆಳೆದಿವೆ. ಧರ್ಮಗಳು ಸಂಸ್ಥೆ ಗಳಾಗುವ ಸಂದರ್ಭದಲ್ಲಿ ಕಾಣಿಸಿಕೊಂಡ ಅಸಮಾಧಾನ ಗಳು ಈ ಬಗೆಯ ಪಂಥಗಳು ಬೆಳೆಯಲು ಕಾರಣಗಳಾಗಿರ ಬೇಕು. ಈ ಎಲ್ಲ ಬೆಳವಣಿಗೆಗಳು ತೀವ್ರ ಸಂಘರ್ಷಗಳಿಂದ ಆಗಿರುತ್ತವೆ ಎಂಬುದು ಸಹಜ. ಈ ಕಾಲಾವಧಿಯಲ್ಲಿ ಫ್ರೆಂಚರು, ಬ್ರಿಟಿಷರು, ನಿಜಾಮರು, ಮರಾಠರು, ಹೈದರಾಲಿ ಅಧಿಕಾರಕ್ಕಾಗಿ ನಡೆಸಿದ ಯುದ್ಧಗಳು ಒಂದು ಕಡೆಯಾದರೆ, ದಂಗೆ, ದೊಂಬಿಗಳು ಇನ್ನೊಂದು ಕಡೆ. ಲೂಟಿಕೋರರು, ದಾಳಿಕೋರರುಗಳಿಂದ ಈ ಪ್ರಾಂತದ ಜನಸಮುದಾಯಗಳು ತತ್ತರಿಸಿಹೋಗಿದ್ದವು. ಸಮಾಜದಲ್ಲಿ ನೆಮ್ಮದಿ ಎನ್ನುವುದು ಕನಸಿನ ಮಾತಾಗಿತ್ತು. ಇದೊಂದು ಸುದೀರ್ಘ ಬೇಗುದಿಯ ಕಾಲವಾಗಿತ್ತು. ಈ ಎಲ್ಲ ಬಗೆಯ ಸಂಕಷ್ಟಗಳು ಈ ಪ್ರಾಂತದಲ್ಲಿ ತುಂಬಿದ್ದವು. ಜನ ಸಮುದಾಯಗಳು ಅನುಭವಿಸಿದ ಈ ಬಗೆಯ ತಲ್ಲಣಗಳ ಚಿತ್ರಣ ಈ ಪ್ರಾಂತದಲ್ಲಿ ಹುಟ್ಟಿದ ಸಾಹಿತ್ಯದಲ್ಲಿ ಒಡಮೂಡಿದೆಯೇ? ಈ ಪ್ರಶ್ನೆ ಸಹಜವಾಗಿಯೇ ಹುಟ್ಟುತ್ತದೆ. ಸಮಾಜ ಮತ್ತು ಸಾಹಿತ್ಯದ ಸಂಬಂಧವನ್ನು ತೀವ್ರವಾಗಿ ಪರಿಗಣಿಸುವ ಈ ಹೊತ್ತಿನಲ್ಲಿ ಈ ಪ್ರಶ್ನೆ ಪ್ರಮುಖವಾಗಿ ಕಾಣುತ್ತಿದೆ. ಮಹಾಕಾವ್ಯಕ್ಕೆ ಬೇಕಾದ ಅಪಾರ ಅನುಭವ ಈ ಕಾಲಘಟ್ಟದಲ್ಲಿತ್ತು. ಆದರೆ ಮಹಾಕಾವ್ಯ ಹುಟ್ಟಲಿಲ್ಲ. ಈ ಸಂದರ್ಭದ ಭೀಕರ ಅನುಭವಗಳು ಸಾಹಿತ್ಯದಲ್ಲಿ ಕಾಣಿಸಿಕೊಳ್ಳಲಿಲ್ಲ. ಕವಿಗಳಿಗೆ ಚರಿತ್ರೆಯ ಭೀಕರ ಘಟ್ಟಗಳ ಅನುಭವಗಳೇ ಅಭಿವ್ಯಕ್ತಿಗೆ ಸುವರ್ಣಾವಕಾಶಗಳು. ವಿಚಿತ್ರವೆಂದರೆ, ಈ ಕಾಲವು ಕವಿಗಳಿಗೆ ವಸಂತ ಋತುವಿನಂತಿತ್ತು. ಹಾಡುವ ಹಕ್ಕಿಗಳಿದ್ದರೆ ವಸಂತ ಋತುವಿಗೂ ಶೋಭೆ. ಹಾಗೆ ನೋಡಿದರೆ '೧೨೦೦-೧೯೦೦ರ ತನಕದ ಕನ್ನಡ ಸಾಹಿತ್ಯವನ್ನೇ ನೋಡಿ, ಆ ಅವಧಿಯ ಭಾರತೀಯ ಸಮಾಜ ಎದುರಿಸಿದ ಅಲ್ಲೋಲಕಲ್ಲೋಲಗಳ, ಹೃದಯವಿದ್ರಾವಕ ಬೆಳವಣಿಗೆಗಳ ಚಿತ್ರಣವೇ ನಮ್ಮಲ್ಲಿಲ್ಲ' (ಡಿ. ಆರ್. ನಾಗರಾಜ : ಸಾಹಿತ್ಯ ಕಥನ (೧೯೮೬) ಪು. ೩೨೬) ಎಂಬ ಮಾತು ಯೋಚನೆಗೆ ಈಡುಮಾಡುತ್ತದೆ.

ಈ ಪ್ರಾಂತದಲ್ಲಿ ನೂರಾರು ಜನ ತತ್ವಪದಕಾರ ರಿದ್ದಾರೆ. ಹತ್ತಾರು ಪುರಾಣಗಳ, ಸಣ್ಣಾಟಗಳ ರಚನಾಕಾರ ರಿದ್ದಾರೆ. ಲಾವಣಿಕಾರರು, ಶಾಹಿರರು, ಜನಪದ ಕಥೆಗಾರರು ಇದ್ದಾರೆ. ಇವರೆಲ್ಲರು ರಚಿಸಿದ, ಕಟ್ಟಿದ ಸಾಹಿತ್ಯವಿದೆ. ಈ ಎಲ್ಲ ಬಗೆಯ ಸಾಹಿತ್ಯದಲ್ಲಿ ಈ ಕಾಲಘಟ್ಟದ 'ಅಲ್ಲೋಲಕಲ್ಲೋಲಗಳ ಹೃದಯವಿದ್ರಾವಕ ಬೆಳವಣಿಗೆಗಳ ಚಿತ್ರಣ' ಇದೆಯೇ? ಈ ಪ್ರಶ್ನೆಗೆ ಸರಳ ನೇರ ಉತ್ತರ ಸಿಗಲಾರದು. ೧೩ನೇ ಶತಮಾನದಿಂದ ೧೫ನೇ ಶತಮಾನದ ಚಾರಿತ್ರಿಕ ಪಲ್ಲಟದ, ಸಾಂಸ್ಕೃತಿಕ ಬೆಳವಣಿಗೆಗಳಿಗೂ ಕುಮಾರವ್ಯಾಸನ 'ಗದುಗಿನ ಭಾರತ'ಕ್ಕೂ ಸಂಬಂಧವಿಲ್ಲವೇ? ಕುಮಾರವ್ಯಾಸನ ನಂತರದ ಕಾಲಘಟ್ಟದ ಮೂರ್‍ನಾಲ್ಕು ಶತಮಾನಗಳಂತೂ ಮತ್ತೊಂದು ಮಹಾಭಾರತಕ್ಕೆ ಬೇಕಾದ ಲೋಕವಿತ್ತು. ಈ ಲೋಕವನ್ನು ಕಾವ್ಯದಲ್ಲಿ ಒಡಮೂಡಿಸುವ ಕವಿಗಳು ಕಾಣಿಸಿಕೊಳ್ಳಲಿಲ್ಲ. 'ಸಾಹಿತ್ಯ ಚರಿತ್ರೆಯೊಂದರ ಬಗೆಗೆ ಮಾತನಾಡುವಾಗ ಇರದುದರೆಡೆಗೆ ತುಡಿಯುವುದು ಒಂದು ದೃಷ್ಟಿಯಿಂದ ಹುಚ್ಚುತನ. ನಿಜ. ಆದರೆ ಸಮಾಜವೊಂದರ ಸಾಹಿತ್ಯ ಹಿಡಿದಿಟ್ಟಿರುವ ಅನುಭವ

**ಹೈದರಾಬಾದು ಕರ್ನಾಟಕ ಪ್ರಾಂತದಲ್ಲಿ, ಸ್ವಾತಂತ್ರ್ಯಪೂರ್ವದ ಕೊನೆಯ ೩೦೦ ವರ್ಷಗಳು ಚರಿತ್ರೆ ಕಂಡ ಭೀಕರ ವರ್ಷಗಳಾಗಿವೆ. (ಈ ಮಾತು ಭಾರತದ ಸಂದರ್ಭಕ್ಕೂ ಅನ್ವಯಿಸಬಹುದು). ೧೬ನೇ ಶತಮಾನದ ಕೊನೆಯ ಭಾಗದಲ್ಲಿ ಮೊಗಲರ ದಾಳಿಯಿಂದ ಆದಿಲ್‌ಶಾಹಿಗಳು ಪತನವಾದ ಮೇಲೆ ಈಗಿನ ಹೈದರಾಬಾದು ಕರ್ನಾಟಕವೆಂದು ಗುರುತಿಸುವ ಪ್ರಾಂತ ಹೇಳದಷ್ಟು ದುಃಸ್ಥಿತಿಗೆ ಈಡಾಯಿತು. ಜನಸಮುದಾಯಗಳ ಬದುಕು ಬೇಗುದಿಯ ಬೀಡಾಯಿತು. ಹಾಗೆ ನೋಡಿದರೆ ಈ ಪ್ರಾಂತದಲ್ಲಿ ೧೩ನೇ ಶತಮಾನದಿಂದಲೇ ಅನ್ಯ ಪ್ರಭುತ್ವಗಳು, ಧರ್ಮಗಳು, ಭಾಷೆಗಳು, ಸಂಸ್ಕೃತಿಗಳು ಪ್ರವೇಶಿಸಿ ನೆಲೆ ಪಡೆಯಲಾರಂಭಿಸಿದವು. ಅವು ಈ ಪ್ರಾಂತದ ಸ್ಥಳೀಯ ಧಾರ್ಮಿಕ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ವಿದ್ಯಮಾನಗಳ ಜತೆ ಕೂಡಿಕೊಂಡವು. ಅದರ ಫಲವಾಗಿ ರೂಪುಗೊಂಡ ಸಂಕರ ಸಂಸ್ಕೃತಿಯು ಕಳೆದ ನಾಲ್ಕೈದು ಶತಮಾನಗಳಿಂದ ಬೆಳೆದುನಿಂತಿದೆ.**

**ಡಾ|| ಅಮರೇಶ ನುಗಡೋಣಿ**

ಸಮೃದ್ಧಿಯ ದೃಷ್ಟಿಯಿಂದ ಇಲ್ಲದಿರುವ ಸಂಗತಿಗಳು ಆ ಸಾಹಿತ್ಯ ಸಂಸ್ಕೃತಿಯ ಬಗ್ಗೆ ಪರಿಣಾಮಕಾರಿಯಾದ ಸತ್ಯಗಳನ್ನು ಹೇಳುತ್ತವೆ' (ಅದೇ, ಪು. ೩೨೬). ಹೀಗಾಗಿ ಆಯಾ ಕಾಲಘಟ್ಟದ ಸಾಹಿತ್ಯವನ್ನು ಗಮನಿಸುವಾಗ ಚರಿತ್ರೆಯಲ್ಲಿರುವ ಸಂಗತಿಗಳು ನೆನಪಾಗುತ್ತವೆ. ಸಾಹಿತ್ಯದಲ್ಲಿ ಯಾವುದು ಗೈರುಹಾಜರಿಯಾಗಿರುತ್ತದೋ ಅದರತ್ತ ಗಮನ ಹರಿಸುವುದು ಅನಿವಾರ್ಯವಾಗುತ್ತದೆ. ಗಮನ ಹರಿಸುವ ಒತ್ತಡವನ್ನು ಅದೇ ಸಾಹಿತ್ಯ ಸೃಷ್ಟಿಸುತ್ತದೆ.

ಸಾಹಿತ್ಯ ರಚನೆಗೆ ಬೇಕಾದ ಸಮೃದ್ಧ ಕಾಲಘಟ್ಟ ಇದಾಗಿದ್ದು ಈ ಪ್ರಾಂತವು ಕವಿಗಳಿಗೆ ಕನ್ಯೆ ನೆಲವಾಗಿತ್ತು. ಆದರೆ ಬಿತ್ತಿ ಬೆಳೆದದ್ದು ಎಷ್ಟು? ಈ ಕೊರಗನ್ನು ದೊಡ್ಡ ಪ್ರಮಾಣದಲ್ಲಿ ಇಟ್ಟುಕೊಳ್ಳುವಷ್ಟು ನಿರಾಶೆಪಡಬೇಕಾಗಿಲ್ಲವೆಂದು ಹೇಳಬಹುದು. (ಈ ಮಾತು ೧೯೦೦ರ ಕಾಲಘಟ್ಟಕ್ಕೆ ಅನ್ವಯಿಸುವುದು ಕಷ್ಟ). ತತ್ವಪದಕಾರರಲ್ಲಿ ಕಡಕೋಳ ಮಡಿವಾಳಪ್ಪ, ರಾಮಾಪುರದ ಬಕ್ಕಪ್ಪಯ್ಯ, ಮೋಟ್ನಹಳ್ಳಿ ಹಸನ ಸಾಬ, ಕೂಡಲೂರು ಬಸಲಿಂಗಪ್ಪ ಮುಂತಾದ ತತ್ವಪದಕಾರರ ಪ್ರತಿಭೆಯನ್ನು ನಿರಾಕರಿಸಲಾಗದು. ಚರಿತ್ರೆಯ ಅನುಭವಗಳು ಸಾಮಾನ್ಯವಾಗಿದ್ದಾಗಲೂ ದೊಡ್ಡ ಮಟ್ಟದ ಪ್ರತಿಭೆಗಳು ಕಾಣಿಸಿಕೊಂಡರೆ ಸಾಹಿತ್ಯ ಸೂಕ್ಷ್ಮತೆಗಳಿಂದ ಸಮೃದ್ಧವಾಗಿ ಕಾಣಬಹುದು. ಚರಿತ್ರೆಯ ಅನುಭವಗಳು ಭೀಕರವಾಗಿದ್ದರಂತೂ ದೊಡ್ಡ ಮಟ್ಟದ ಪ್ರತಿಭೆಗಳಿದ್ದರೆ ಸಾಹಿತ್ಯ ಸುವರ್ಣಯುಗವಾಗುತ್ತದೆ. ಚರಿತ್ರೆಯ ಅನುಭವಗಳು ಹೃದಯವಿದ್ರಾವಕವಾಗಿದ್ದರೆ ಸಣ್ಣಮಟ್ಟದ ಪ್ರತಿಭೆಗಳೂ ಸೃಜನಶೀಲ ಶಕ್ತಿ ಒರಟಾಗಿಯಾದರೂ ಪ್ರಾಪ್ತವಾಗುತ್ತದೆ. ಉನ್ನತಮಟ್ಟದ ಪ್ರತಿಭೆ ಕುಮಾರವ್ಯಾಸನದು. ಒಂದು ಬಗೆಯಲಿ ಕಡಿಕೋಳ ಮಡಿವಾಳಪ್ಪ ಮುಂತಾದವರೂ ಸಾಂಸ್ಕೃತಿಕವಾಗಿ ಮುಖ್ಯರಾಗುತ್ತಾರೆ.

೧೭೦೦-೧೯೦೦ರ ಅವಧಿಯ ತತ್ವಪದಕಾರರು 'ಹಾದರ', 'ಗಾಂಜಾ', 'ಅಲಾವಿ', 'ಮೂಗುತಿ' ಮತ್ತು 'ಚೇಳು ಕಡಿತ' ಎನ್ನುವ ರೂಪಕಗಳನ್ನು ಹೆಚ್ಚು ಬಳಸಿದ್ದಾರೆ. ಈ ಕಾಲಘಟ್ಟದ ಪ್ರಭುತ್ವದ ದಾಹ, ಧಾರ್ಮಿಕ ಮೂಲಭೂತವಾದ ಮತ್ತು ಸಾಮಾಜಕ ನಡವಳಿಕೆಗಳನ್ನು ಈ ರೂಪಕಗಳ ಮೂಲಕ ಹಿಡಿದಿಡಲು ಪ್ರಯತ್ನಿಸಿದ್ದಾರೆ. ವ್ಯಕ್ತಿಗತ ನೆಲೆಯಲ್ಲಿ ಈ ರೂಪಕಗಳು ಹುಟ್ಟಿಕೊಂಡಂತೆ ಕಂಡರೂ ಅವುಗಳಿಗೆ ವ್ಯಾಪಕತೆಯಿದೆ. ರಾಜಕೀಯ ಪ್ರಭುತ್ವಗಳನ್ನು, ಧಾರ್ಮಿಕ ಪ್ರಭುತ್ವಗಳನ್ನು, ಆರ್ಥಿಕ ಪ್ರಭುತ್ವಗಳನ್ನು ನೇರವಾಗಿ ಎದುರಿಸುವ ಅನೇಕ ತತ್ವಪದಕಾರರಿದ್ದಾರೆ. ನೇರವಾಗಿ ವಿರೋಧಿಸುವುದು ಕೆಲವರಿಗೆ ಸಾಧ್ಯವಾಗಿಲ್ಲ ಎಂಬಂತೆ ಮೇಲುನೋಟಕ್ಕೆ ಕಾಣುತ್ತದೆ. ಆದರೆ ತತ್ವಪದಕಾರರು ಬಡತನದ ವೈಭವೀಕರಣದ ಉದ್ದೇಶವೇ ಎಲ್ಲ ಬಗೆಯ ಪ್ರಭುತ್ವವನ್ನು ಎದುರಿಸಲು ಹುಡುಕಿಕೊಂಡ ದಾರಿಯಾಗಿದೆ. ರಾಜಕಾರಣ ಮತ್ತು ಧರ್ಮದ ಮೂಲಕ ಅಧಿಕಾರವನ್ನು ಪಡೆಯಬೇಕೆಂಬ ಹುಚ್ಚು ಈ ಕಾಲಘಟ್ಟದಲ್ಲಿ ಹೆಚ್ಚಾಗಿದ್ದುದನ್ನು ಕಂಡ ತತ್ವಪದಕಾರರು ಅಧ್ಯಾತ್ಮದ, ಅನುಭಾವದ ಹುಚ್ಚನ್ನು ಹಚ್ಚಿಕೊಳ್ಳುವ ಮೂಲಕ ಪರ್ಯಾಯ ಮಾರ್ಗಗಳನ್ನು ಶೋಧಿಸಿದರು. ಆರ್ಥಿಕವಾಗಿ ದುರ್ಬಲವಾಗಿದ್ದ ವರ್ಗ, ಕೆಳವರ್ಗದ ಜನರು ತತ್ವಪದಕಾರರ ಬೆನ್ನುಬಿದ್ದು ಒಂದು ಬಗೆಯ ಆತ್ಮವಿಶ್ವಾಸವನ್ನು ಪಡೆದು ಬಾಳಲು ಶಕ್ತರಾದರು.

ಕಡಕೋಳ ಮಡಿವಾಳಪ್ಪ ಕಾವ್ಯದ ಯಾವ ಸೂಕ್ಷ್ಮತೆಯನ್ನೂ ಇಟ್ಟುಕೊಳ್ಳದೆ ಗಡುಸಾಗಿ, ಒರಟಾಗಿ ಈ ಕಾಲಘಟ್ಟದ ರಾಜಕೀಯ, ಧಾರ್ಮಿಕ ಮತ್ತು ಆರ್ಥಿಕ ಪ್ರಭುತ್ವಗಳನ್ನು ಖಂಡಿಸಿದ್ದಾನೆ. 'ಮಾನಗೇಡಿ ಮಂದಿ ಹುಟ್ಟಿ ಮರ್ತ್ಯಾ ಕೆಡಿಸ್ಯಾರೋ', 'ಏನಾಗತಾದ ಏಂಥಾಗತಾದ' ಎನ್ನುವ ತತ್ವಪದಗಳಲ್ಲಿ ಮಡಿವಾಳಪ್ಪ

## ಕಾಡಲ್ಲಿ – ನಾಡಲ್ಲಿ – ನನ್ನ ಹಾಡಲ್ಲಿ

ಕಾಡಲ್ಲಿ :

ಹುಲಿಗೆ ಗೋವಿನ ಪಾಠ
ಗಿಡಗಂಟಿಗಳಲ್ಲಿ ಸಂಗೀತದ ಸವಿಯೂಟ.
ಹೊತ್ತಿದೆ ಮರ
ಹಬ್ಬುವ ಬಳ್ಳಿಯ ಭಾರ.
ಹಾವಿನ ಹುತ್ತದಲ್ಲಿ
ಹೂಡಿದೆ ಇರುವೆ ಸಂಸಾರ.

ಮುಳ್ಳಿನ ಗಿಡದಲ್ಲೂ ಅರಳಿದೆ ಪರಿಮಳದ
ಹೂವು.

ಕೋಗಿಲೆಯ ತತ್ತಿಗೂ
ಕಾಗೆ ಕೊಡುತ್ತಿದೆ ಕಾವು.

ಹರಿವ ನದಿಗೆ ಬಂಡೆಗಳೂ
ಬಿಡುತ್ತಿವೆ ಹಾದಿ.
ಸಾಗುತ್ತಿದೆ ನಿತ್ಯೋತ್ಸವದ
ಬದುಕಿನ ಸರದಿ.

ನಾಡಲ್ಲಿ :

ಗೋವು ಹುಲಿಗೆ ಬೇಟೆ
ಹುಲಿಯ ರಕ್ಷಣೆಗೆ ಕೋಟೆ.

ಮರಕ್ಕೆ ಮೃತ್ಯು
ಕೊಂಬೆಯ ಕೊಡಲಿ ಕಾವು.
ಆರಾಧಿಸದವರ
ಹೆಡೆಬಿಚ್ಚಿ ಹೆದರಿಸುತ್ತಿದೆ ಹಾವು.
ಹೂಹಾರಗಳಲ್ಲೂ ಬಾಂಬು
ಕುರಿಗಳಲ್ಲೂ ಹರಿತವಾಗಿವೆ ಕೊಂಬು.

ಹಲವು ಅಡ್ಡಗಟ್ಟೆಗಳು ಹರಿವ ನದಿಗೆ
ಸುತ್ತು ಗೋಡೆಗಳು ಮನೆ ಮನೆಗೆ
ಆಡುವ ಆಟದಲ್ಲೂ ಬೂಟ



ನೋಡುವ ನೋಟದಲ್ಲೂ ಕಾಟ.
ಕಣ್ಮುಚ್ಚಿ ಕಾಯುತ್ತಿದೆ
ಹಾಲಿಗಾಗಿ ಪಕ್ಕದ ಮನೆಯ ಬೆಕ್ಕು
ಚಿನ್ನಕ್ಕೂ ಹಿಡಿಯಬೇಕೆ ತುಕ್ಕು ?

ನನ್ನ ಹಾಡಲ್ಲಿ :

ಕಾಡು ನಾಡಾಗಿ
ನಾಡು ಹಾಡಾಗಿ
ಹಾಡಲ್ಲಿ ಸಪ್ತಸ್ವರಗಳೊಂದಾಗಿ
ಹಾಡುವ ಹಕ್ಕಿಗಳು
ಕಟ್ಟಬೇಕು ಗೂಡು
ಮಿನಾರುಗಳಲ್ಲಿ, ಗೋಪುರಗಳಲ್ಲಿ
ಮನೆ ಮನೆಯ
ಸಿಹಿಯೂಟಕ್ಕೆ
ಸವಿ ನೀಡುವ
ಬೆಲ್ಲದುಂಡೆಗಳಾಗಬೇಕು
ಬಾಂಬು.
ಪರಿಮಳದ
ತಂಗಾಳಿಯಾಗಿ
ವಿಶ್ವವನ್ನಾವರಿಸಬೇಕು
ಉಸಿರುಗಟ್ಟಿಸುವ
ಹೊಗೆ.
ಇದೇ
ಆ
ಈ
ಬದುಕು ಬೆಸೆಯುವ ತವರ
ಕಟ್ಟಲಿರುವ ಮೀನಾರು ಗೋಪುರ

ಡಾ|| ಸೈಯದ್ ಝಮೀರುಲ್ಲಾ ಷರೀಫ್

ಅಪ್ಪಟ ದೇಶಿನುಡಿಗಟ್ಟಿನಲ್ಲಿ ಸಮಾಜದಲ್ಲಿ ದುರ್ಬಲರ ಮೇಲೆ ಉಳ್ಳವರು ನಡೆಸುವ ದಬ್ಬಾಳಿಕೆಯನ್ನು ನೇರವಾಗಿ ಅಭಿವ್ಯಕ್ತಿಸಿದ್ದಾನೆ.

ರಾಮಾಪುರದ ಬಕ್ಕಪ್ಪಯ್ಯನು ಮಡಿವಾಳಪ್ಪನಷ್ಟು ಗಡಸು-ಒರಟುತನವನ್ನು ತೋರಿಸುವುದಿಲ್ಲ. ಆದರೆ ಒಗಟು, ಬೆಡಗು ಹಾಗೂ ರೂಪಕಗಳಲ್ಲಿ ಅನುಭಾವದ ಎತ್ತರವನ್ನು ಸಾಧಿಸುವ ಸೂಕ್ಷ್ಮಗಳನ್ನು ಅಭಿವ್ಯಕ್ತಿಸಿದ್ದಾನೆ. ದೇಶಿ ನುಡಿಗಟ್ಟಿನಲ್ಲಿ ಭಾಷಿಕ ಲಯಗಾರಿಕೆಯನ್ನು ಉಳಿಸಿಕೊಂಡು ಲೋಕದ, ಬದುಕಿನ ಜಂಜಡವನ್ನು ನೀಗಿಕೊಳ್ಳಲು ಅನುಭಾವದ ಮೊರೆಹೋಗುವ ದಾರಿಗಳನ್ನು ಬಕ್ಕಪ್ಪಯ್ಯ ಹೆಚ್ಚು ಬಗೆದು ತೋರಿಸುತ್ತಾನೆ. ಸಂಸಾರ ಬದುಕಿನ ತಾಪತ್ರಯಗಳನ್ನು ತಿಳಿಯಾದ ಹಾಸ್ಯದಲ್ಲಿ ವ್ಯಕ್ತ ಪಡಿಸಿದರೂ ಗಾಢವಾದ ವಿಷಾದ ಮನಸ್ಸಿನಲ್ಲಿ ಮೂಡುತ್ತದೆ. ಪ್ರಭುತ್ವದ ಅಧಿಕಾರದ ಹುಚ್ಚಿಗೆ ಎದುರಾಗಿ ಸಾಮಾನ್ಯರ ಅಧ್ಯಾತ್ಮದ ಹುಚ್ಚನ್ನು ನಿಲ್ಲಿಸಿದಂತಿದೆ. 'ಚೇಳು ಕಡಿತ' ಎನ್ನುವ ರೂಪಕ ಇದನ್ನು ಬಿಂಬಿಸುತ್ತದೆ. ಚೇಳಿನ ವಿಷ ಮೈ-ಮನಸ್ಸನ್ನು ಆವರಿಸಿದಂತೆ, ಅಧ್ಯಾತ್ಮದ ವಿಷಯವೂ ಮೈ-ಮನಸ್ಸನ್ನು ಆವರಿಸುತ್ತದೆ. ಈ ತತ್ವ ಪ್ರಭುತ್ವದ ಹುಚ್ಚಿಗೆ ಉತ್ತರದಂತೆ ಕಾಣುತ್ತದೆ.

'ಗಿಡನೋಡ ತಂಗೆಮ್ಮ ಬುಡಮೇಲನಾಗ್ಯಾದ' ಎಂದು ಹಾಡಿದ ಕೂಡಲೂರು ಬಸಲಿಂಗಪ್ಪ ಸಾಮಾಜಿಕ ನೈತಿಕತೆಯನ್ನು ಎತ್ತಿ ಹಿಡಿದಿದ್ದಾನೆ. ಆತ ಬಳಸುವ 'ಮೂಗುತಿ' ನೈತಿಕತೆಯ ಸಂಕೇತವಾಗಿಯೇ ಬರುತ್ತದೆ. ರಮ್ಯತೆ, ನವಿರುತನ ಬಸಲಿಂಗಪ್ಪನ ತತ್ವಪದಗಳಲ್ಲಿದ್ದು ನವೋದಯ ಕಾವ್ಯಕ್ಕೆ ಮುನ್ಸೂಚನೆಯಂತೆ ತೋರುತ್ತವೆ. ಮೋಟ್ನಹಳ್ಳಿ ಹಸನ ಸಾಬ ಮತಮಾನ್ಯ ಪರಿಸರದಲ್ಲಿ ಬೆಳೆದಂತೆ ಕಾಣುತ್ತದೆ. ಲಿಂಗಾಯತ ಧರ್ಮದ ಪರಿಭಾಷೆ ಮತ್ತು ಆಶಯಗಳು ಆತನ ತತ್ವಪದಗಳಲ್ಲಿ ಕಾಣುತ್ತವೆ. ಹೀಗಾಗಿ ಇನ್ನಿತರ ತತ್ವಪದಕಾರರಿಗಿಂತ ಈತನ ಪದಗಳಲ್ಲಿ ಹೆಚ್ಚು ಶಿಷ್ಟತೆ ಸಹಜತೆಗಿಂತ ಬಿಗುವು ಆತನಲ್ಲಿದೆ. ಈ ಪ್ರಾಂತದ ಮುಸ್ಲಿಮರು ತತ್ವಪದಕಾರರು ಮುಸ್ಲಿಮೇತರರ ಪ್ರಭಾವಕ್ಕೆ ಒಳಗಾದಂತೆ ಕಾಣುತ್ತದೆ. ಅಂದರೆ ಅವರ ಗುರುಗಳು ಲಿಂಗಾಯತ ಮತಮಾನ್ಯ ಪರಿಸರಕ್ಕೆ ಸಂಬಂಧಿಸಿದವರೇ ಆಗಿದ್ದುದು ಕಂಡುಬರುತ್ತದೆ.

ಸ್ವಾತಂತ್ರ್ಯಪೂರ್ವದ ಕೊನೆಯ ಅರ್ಧದಶಕದ ಕಾಲಘಟ್ಟವೂ ಹೆಚ್ಚು ಪ್ರಕ್ಷುಬ್ಧವಾಗಿತ್ತು. ನಿಜಾಮರ ಆಳ್ವಿಕೆ, ಉರ್ದು ಹೇರಿಕೆ, ಸ್ವಾತಂತ್ರ್ಯಕ್ಕಾಗಿ ಹೋರಾಟ, ರಜಾಕಾರರ ಹಾವಳಿ ಇಂಥ ರಾಜಕೀಯ ಬೆಳವಣಿಗೆಗಳಿಂದ ಸಮಾಜದಲ್ಲಿ ಬಿಕ್ಕಟ್ಟುಗಳು ಹೆಚ್ಚಾಗಿದ್ದವು. ಸಾಮಾಜಿಕವಾಗಿ ಭೂಮಾಲೀಕರ ಹಿಡಿತದಲ್ಲಿ ದುಡಿಯುವ ಬಡವರಿಗೆ, ಕೆಳವರ್ಗದವರಿಗೆ ನಿತ್ಯದ ಪಾಡು ಇದ್ದೇಯಿತ್ತು. ಇವರಿಗೆ 'ಮುಕ್ತಿ' ಎಂಬುದು ಇರಲಿಲ್ಲ. ಈ ಕಾಲಾವಧಿಯಲ್ಲಿ ಭಯಾನಕ ಕ್ಷಾಮ, ಬರಗಾಲ ಮೇಲಿಂದ ಮೇಲೆ ಕಾಣಿಸಿಕೊಂಡು ಜನಸಮುದಾಯಗಳನ್ನು ದುಸ್ಥಿತಿಗೆ ತಳ್ಳಿತ್ತು. ೧೯೪೮ರ ವರ್ಷವಂತೂ ನಿಜಾಮರ ರಾಜಕೀಯ ದಾಹ, ರಜಾಕಾರರ ದೌರ್ಜನ್ಯ, ಪೊಲೀಸ್ ಕಾರ್ಯಾಚರಣೆ ಈ ಎಲ್ಲ ಸಂದರ್ಭದಲ್ಲಿ ಹತ್ಯಾಕಾಂಡವೇ ನಡೆದುಹೋದವು. ಮನುಷ್ಯನಿಗೆ ಅಸ್ತಿತ್ವವೇ ಇಲ್ಲ ಎನ್ನುವ ವಾತಾವರಣ ನಿರ್ಮಾಣವಾಗಿತ್ತು. ಇಂಥ ಹೃದಯವಿದ್ರಾವಕ ಘಟನೆಗಳು ಸಂಭವಿಸುತ್ತಿದ್ದ ಕಾಲಘಟ್ಟವಿದು. ಇದರ ನಡುವೆಯೇ ಉರ್ದು ಭಾಷೆಯಲ್ಲಿಯಾದರೂ ಆಧುನಿಕ ಶಿಕ್ಷಣ ದೊರೆಯಲಾರಂಭಿಸಿತು. ವಿದ್ಯಾವಂತರ ಸಂಖ್ಯೆ ಮಂದಗತಿಯಲ್ಲಿ ಬೆಳೆಯುತ್ತಿದ್ದರೂ ಸಮಾಜದಲ್ಲಿ ಜಾಗೃತಿ ಮೂಡತೊಡಗಿತ್ತು. ರಾಜಕೀಯ ಸ್ವಾತಂತ್ರ್ಯ ಬರುವ ಮೊದಲೇ ಭಾಷಾವಾರು ಪ್ರಾಂತಗಳ ವಿಭಜನೆಯ ಕಾವು ಏರಿತ್ತು. ಬೀದರ, ಗುಲಬರ್ಗಾ ಜಿಲ್ಲಾಪ್ರದೇಶಗಳಲ್ಲಿಯೇ ಅರ್ಧ ಮಹಾರಾಷ್ಟ್ರಕ್ಕೆ, ಅರ್ಧ ಆಂಧ್ರಪ್ರದೇಶಕ್ಕೆ ಹರಿದು ಹಂಚಿಹೋಗುತ್ತದೆಂಬ ಭೀತಿ ಸ್ಥಳೀಯ ಕನ್ನಡಿಗರಿಗೆ ಹುಟ್ಟಿತ್ತು. ಬಳ್ಳಾರಿ, ಹೊಸಪೇಟೆ ತಾಲ್ಲೂಕುಗಳು, ಆಂಧ್ರದ ಕೆಲವು ಭಾಗಗಳು ಒಟ್ಟುಗೂಡಿ 'ರಾಯಲುಸೀಮೆ' ಆಗುತ್ತದೆಂಬ ಭಯವಿತ್ತು. ಇನ್ನೊಂದೆಡೆ ಸಂಸ್ಥಾನವೇ ಇನ್ನೊಂದು ಪಾಕಿಸ್ತಾನದಂತೆ ಪ್ರತ್ಯೇಕಗೊಳ್ಳುತ್ತದೆಂಬ ವದಂತಿಗಳು ಹುಟ್ಟಿಕೊಂಡು ವಾತಾವರಣವು ಇನ್ನಷ್ಟು ಪ್ರಕ್ಷುಬ್ಧವಾಗಿತ್ತು. ಇಂಥ ಹಲವಾರು ಸಂಗತಿಗಳಿಂದ ಜನರು ನೆಮ್ಮದಿಯನ್ನು ಕಳೆದುಕೊಳ್ಳುತ್ತ ಭಯಭೀತಿಯಿಂದ ಜೀವ ಕೈಯಲ್ಲಿಡಿದು ಬದುಕುವಂತಾಗಿತ್ತು. ಇಂಥ ಪ್ರಕ್ಷುಬ್ಧ ಕಾಲಘಟ್ಟದ ಅನುಭವಗಳು ಯಾವತ್ತೂ ಸಾಹಿತ್ಯಕ್ಕೆ ಹೇಳಿಮಾಡಿಸಿದಂತಿರುತ್ತವೆ. ಸಾಹಿತ್ಯ ರಚನೆಗೆ ಸಮೃದ್ಧ ಕನ್ಯೆನೆಲದಂತಿರುತ್ತವೆ. ಆದರೆ ಈ ಪ್ರಾಂತದಲ್ಲಿ ಕಾವ್ಯವನ್ನು ಬಿತ್ತಿ ಬೆಳೆಯಲು ಕವಿಗಳಿಗೆ ಸಾಧ್ಯವಾಗಲಿಲ್ಲ. ಕವಿಗಳೆಲ್ಲ ಬಿರುಗಾಳಿಗೆ ಸಿಕ್ಕ ಹಕ್ಕಿಗಳಂತೆ ಜರ್ಜರಿತರಾಗಿದ್ದರೇ? ಆಧುನಿಕ ಕಾಲಘಟ್ಟದಲ್ಲಿಯೂ ಈ ಪ್ರಶ್ನೆ ಇದ್ದೇ ಇರುತ್ತದೆ. ೧೭೦೦-೧೯೦೦ರ ತನಕ ತತ್ವಪದಕಾರರಾದರೂ ಸಮೃದ್ಧ ಸಾಹಿತ್ಯವನ್ನು ಬೆಳೆಸಲಿಲ್ಲ ಎಂದರೂ ಕಡೆಗಣಿಸಲಾಗದ ಸಾಹಿತ್ಯವನ್ನು ನೀಡಿದರು. ಆದರೆ ೧೯೦೦-೬೦ರ ನಡುವಿನ ಆಧುನಿಕ ಕವಿಗಳು ಈ ಕನ್ಯೆನೆಲದಲ್ಲಿ ಬೆಳೆದದ್ದೆಷ್ಟು? ಏನನ್ನು ಬೆಳೆದರು?

'ಇಂಥ ಭೀಕರ ಕಾಲಘಟ್ಟದಲ್ಲಿ ನಾವು ಬದುಕಿ ಉಳಿದಿದ್ದೇ ದೊಡ್ಡ ಮಾತು' ಎಂದು ಹಿರಿಯ ಕವಿಗಳು ಹೇಳುತ್ತಾರೆ. ಅಡ್ಡಿ ಆತಂಕಗಳು ನೂರಾರು ಇದ್ದವೆಂದು ಒಪ್ಪಬೇಕಾಗುತ್ತದೆ. ಕನ್ನಡ ಭಾಷೆಯು ಶಿಕ್ಷಣದಲ್ಲಿ ಇರಲಿಲ್ಲವೆಂಬುದು ಸರಿ. ಆದರೂ ೨೦ನೇ ಶತಮಾನದ ಆದಿಭಾಗದಲ್ಲಿ ಹತ್ತಾರು ಪುರಾಣಗಳು ಕನ್ನಡದಲ್ಲಿ ರಚನೆಯಾಗಿವೆ. ತಕ್ಕಮಟ್ಟಿಗೆ ಶಾಸ್ತ್ರಸಾಹಿತ್ಯವೂ ರಚನೆಯಾಗಿದೆ. ಕಾವ್ಯವೂ ಹುಟ್ಟಿದೆ. ರಚನೆಯಾದ ಸಾಹಿತ್ಯದಲ್ಲಿ ಈ ಪ್ರಾಂತದ ಬದುಕು ವ್ಯಕ್ತವಾಗಿದೆಯೇ? ಸಾಂಪ್ರದಾಯಿಕ ಸಾಹಿತ್ಯ ರಚನಕಾರರನ್ನು ಈ ಪ್ರಶ್ನೆಯಿಂದ ಹೊರಗಿಡಬಹುದು. ಆದರೆ ಆಧುನಿಕ ಕವಿಗಳು ಈ ಪ್ರಶ್ನೆಯನ್ನು ಎದುರಿಸಬೇಕಾಗಿದೆ.

ಸೃಜನಶೀಲತೆಗೂ ಪ್ರಾದೇಶಿಕತೆಗೂ ಸಂಬಂಧ ಇರುವುದರಿಂದ ಈ ಪ್ರಶ್ನೆ ಇದ್ದೇ ಇರುತ್ತದೆ. ಹಾಗೆಂದು ಕವಿತೆಯಲ್ಲಿ ಪ್ರಾದೇಶಿಕತೆಯನ್ನು ಹುಡುಕುವ ಪ್ರಯತ್ನ ಇದಲ್ಲ. ಭಾಷೆಯ ಬಳಕೆ ಮಾತ್ರ ಪ್ರಾದೇಶಿಕತೆ ಅಲ್ಲ. ಬದುಕಿನ ಆಶಯಗಳು ಅಭಿವ್ಯಕ್ತಿ ಪಡೆದಿರಬೇಕೆಂದು ಅಪೇಕ್ಷಿಸುವುದು ತಪ್ಪಲ್ಲವೆಂದು ಕಾಣುತ್ತದೆ. ೧೯೦೦-೬೦ರ ವರೆಗಿನ ಕಾವ್ಯದಲ್ಲಿ ಒಡಮೂಡಿದ್ದು ಏನು? ಕಾವ್ಯದ ತುಡಿತ, ಹಂಬಲಗಳೇನು? ಎಂದು ಹುಡುಕಿದರೆ ನಿರಾಶೆಯಾಗುತ್ತದೆ. 'ಮೊಗ್ಗಿನ ಮಾಲೆ' (೧೯೩೭), 'ಶ್ರೀಕಾರ' (೧೯೫೪) ಎಂಬ ಎರಡು ಸಂಕಲನಗಳು ಪ್ರಕಟವಾಗಿವೆ. ಹೈದರಾಬಾದ್ ನಗರದಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದ ಈ ಪ್ರಾಂತದ ಆಧುನಿಕ ಕವಿಗಳ ಪ್ರಾತಿನಿಧಿಗಳ ಕವಿತೆಗಳು ಈ ಸಂಕಲನಗಳಲ್ಲಿ ಸೇರಿವೆ. ಇವು ಅಂಥಾಲಜಿಗಳೇ. ೩೦ರ ದಶಕದಲ್ಲಿ ಬರೆದಿರಬಹುದಾದ ಜೆ. ಕೆ. ಪ್ರಾಣೇಶಾಚಾರ್ಯರ 'ಸ್ವಾಗತ' ಎನ್ನುವ ಒಂದು ಕವನ ಚಾರಿತ್ರಿಕವಾಗಿ ಗಮನಿಸುವಂಥದ್ದು.

ಈ ನಮ್ಮ ನಾಡಿಂಗೆ ಓಡಿ ಬನ್ನಿ,  
ನಿಮ್ಮವರ ನೋಡ ಬನ್ನಿ.  
ಕಕ್ಕುಲತೆಯಿಂದ ಮಾತಾಡ ಬನ್ನಿ,  
ಎಮ್ಮೊಡನೆ ಕೂಡ ಬನ್ನಿ.

ಎಂದು ಕವಿ ಈ ನಾಡಿನ ಪರಿಸ್ಥಿತಿಯನ್ನು ಬಿ.ಎಂ.ಶ್ರೀ. ಅವರಿಗೆ ಅಪಾರ ನೋವಿನಿಂದಲೇ ನಿವೇದಿಸಿಕೊಂಡಿದ್ದಾನೆ. ಬಿ.ಎಂ.ಶ್ರೀ. ಅವರು ನವೋದಯ ಕಾವ್ಯಮಾರ್ಗದ ಹರಿಕಾರರು. ಕನ್ನಡ ಕಟ್ಟಿದ ನಾಯಕರು. ಅವರು ಈ ಪ್ರಾಂತದ ಆಧುನಿಕ ಕವಿಗಳಿಗೆ ಆದರ್ಶಪ್ರಾಯ ಆಗಿದ್ದುದು ಸಹಜವೇ. ವಿಚಿತ್ರವೆಂದರೆ 'ಸ್ವಾಗತ' ಕವಿತೆಯಲ್ಲಿ ಈ ನಾಡಿನ ದುಸ್ಥಿತಿಯನ್ನು ಬಿ.ಎಂ.ಶ್ರೀ. ಅವರಿಗೆ ನಿವೇದಿಸಿ ಕೈತೊಳೆದುಕೊಂಡರೇ ವಿನಹ ಈ ನಾಡಿನ ಅಂದರೆ ನಿಂತ ನೆಲದ ಜನರ ಪಾಡನ್ನು, ತುಡಿತಗಳನ್ನು ತಮ್ಮ ಕವಿತೆಗಳಲ್ಲಿ ಅಭಿವ್ಯಕ್ತಿಸುವುದನ್ನು ಮರೆತು, ಆಕಾಶ ನೋಡಿ ಬರೆಯತೊಡಗಿದ್ದುದು ದುರ್ದೈವದ ಸಂಗತಿ ಎನ್ನದೆ ವಿಧಿಯಿಲ್ಲ. 'ಸ್ವಾಗತ' ಕವಿತೆಯ ಕೊನೆಯ ನುಡಿ ಗಮನಿಸಿದರೆ, ಈ ಪ್ರಾಂತದಲ್ಲಿ ಕಾವ್ಯದ ಸೆಲೆ ಬತ್ತಿಹೋಗಿದೆ. ಒಂದು ವೇಳೆ ಬತ್ತಿದ ಸೆಲೆ ಜಿನುಗಬೇಕಾದರೆ ಬಿ.ಎಂ.ಶ್ರೀ. ಅವರು ಈ ನಾಡಿಗೆ ಮಳೆಯಾಗಿ ಬರಬೇಕು. ಇದನ್ನು ಗಮನಿಸಿದರೆ ಈ ನಾಡಿನ ಆರಂಭದ ಕವಿಗಳು ನವೋದಯ ಕಾವ್ಯಮಾರ್ಗವನ್ನು ಹಿಡಿಯಲು ಬಿ.ಎಂ.ಶ್ರೀ. ಅವರಿಂದ ದೀಕ್ಷೆ ಪಡೆದಂತೆ ಕಾಣುತ್ತದೆ. ಹೀಗಾಗಿ ನಿಂತ ನೆಲ ಭುಗಿಲೆದ್ದು ಉರಿಯುತ್ತಿದ್ದರೂ ಕನಸು, ಆದರ್ಶ, ರಮ್ಯತೆಗಳಿಂದ ಕೂಡಿದ ಕವಿತೆಗಳು ಈ ಕಾಲಘಟ್ಟದಲ್ಲಿ ರಚನೆಯಾಗಿವೆ. 'ಮೊಗ್ಗಿನ ಮಾಲೆ' ಮತ್ತು 'ಶ್ರೀಕಾರ' ಎರಡು ಅಂಥಾಲಜಿಯಲ್ಲಿ ಸುಮಾರು ೫೦ ಕವಿಗಳ ಕವಿತೆಗಳಿವೆ. ಈ ಕವಿತೆಗಳು ಈ ಪ್ರಾಂತದ ಯಾವ ನೆನಪುಗಳನ್ನೂ ಹೊತ್ತಂತೆ ಕಾಣುವುದಿಲ್ಲ. ಆದರೆ ಈ ಕವಿತೆಗಳು ಚೆನ್ನಾಗಿಲ್ಲವೆಂದು ಹೇಳಲುಬರುವುದಿಲ್ಲ. ನವೋದಯ ಕಾವ್ಯ ಸಂಪ್ರದಾಯದಲ್ಲಿ ಸೇರಿಕೊಳ್ಳಬಹುದಾದ ಅರ್ಹತೆಯನ್ನು ಖಂಡಿತ ಪಡೆದಿವೆ. ರಮ್ಯಕಾವ್ಯಕ್ಕೆ ಇರಬೇಕಾದ ತಾಂತ್ರಿಕಾಂಶಗಳೆಲ್ಲವೂ ಈ ಕವಿತೆಗಳಲ್ಲಿವೆ.

ಆದರೂ ಈ ಕಾಲಘಟ್ಟದಲ್ಲಿ ಅಲ್ಲೊಂದು, ಇಲ್ಲೊಂದು ಈ ಪ್ರಾಂತದ ಜನರ ತುಡಿತಗಳು, ಹಂಬಲಗಳು ವ್ಯಕ್ತವಾಗುವ ಕವಿತೆಗಳು ಸಿಗುತ್ತವೆ. ಸಿದ್ಧಯ್ಯ ಪುರಾಣಿಕರ 'ಸಲಾಮ್ ಸಾಬ' ಎಂಬ ಕವಿತೆಯು ೪೦ರ ದಶಕದಲ್ಲೇ ರಚನೆಯಾಗಿದೆ. ಇದೊಂದು ಕಥನಕವನ. ಭಾರತ ಒಡೆದು, ಒಂದು ಭಾಗ ಪಾಕಿಸ್ತಾನ ಆಗುವ ಅಲ್ಲೋಲ ಕಲ್ಲೋಲದ ಸಂದರ್ಭ. ಭಾರತದಿಂದ ಪ್ರತ್ಯೇಕವಾಗಿ ಪಾಕಿಸ್ತಾನ ಎಂಬ ದೇಶವೊಂದು ರೂಪುಗೊಳ್ಳುತ್ತದೆ ಎಂಬ ಸುದ್ದಿಗಳು ಈ ಪ್ರಾಂತದಲ್ಲಿ ವಿಚಿತ್ರ ಬಗೆಯಲ್ಲಿ ಭೀತಿಯನ್ನುಂಟುಮಾಡಿತು. ಹೈದರಾಬಾದು ಸಂಸ್ಥಾನವೂ ಹಾಗೇ ಇನ್ನೊಂದು 'ದೇಶ' ವಾಗುವುದೆಂದು ಪ್ರಜ್ಞಾವಂತ ದೇಶಿಗರು ತಲ್ಲಣಿಸಿದ್ದರು. ವಿಭಜನೆ ಎಂಬ ಭಯದ

ಭೂತ ಕಾಡಿರುವುದಕ್ಕೆ ಸಾಹಿತ್ಯದಲ್ಲಿ ಬೇಕಾದಷ್ಟು ಪುರಾವೆಗಳು ಸಿಗುತ್ತವೆ. ಭಾರತೀಯರು ಮುಸ್ಲಿಮರನ್ನು 'ಮನೆಮುರುಕರು' ಎಂದು ಪರಿಗಣಿಸಿ ದ್ವೇಷಿಸುತ್ತಿದ್ದರು. 'ಸಲಾಮ್ ಸಾಬ' ಕವಿತೆಯಲ್ಲಿ ಬಡ ಮುಸ್ಲಿಮನೊಬ್ಬ ಭಿಕ್ಷೆ ಬೇಡುತ್ತಾನೆ. 'ಮನೆಮುರುಕ ತುರುಕ'ನಿಗೆ ಭಿಕ್ಷೆ ನೀಡುವುದಕ್ಕೆ ಕವಿಗೆ (ನಿರೂಪಕ) ಮನಸ್ಸು ಬರುವುದಿಲ್ಲ. ಮರುಕ ಹುಟ್ಟಿ ಮನಸ್ಸು ಹೊಯ್ದಾಡುತ್ತದೆ. ಆದರೂ ಸಮಯ ಸಾಧಕರು, ಸ್ವಾರ್ಥಿಗಳು ಪಾಕಿಸ್ತಾನ ಬೇಕೆಂದು ಹೊಂಚುಹಾಕುತ್ತಿದ್ದಾರೆಯೇ ಹೊರತು 'ಬಡತುರುಕ ಬೇಡುವುದು ಅನ್ನ – ಅಲ್ಲ ಪಾಕಿಸ್ತಾನ' ಎಂದು ನಾಲ್ಕಾಣೆ ನೀಡುತ್ತಾನೆ ಕವಿ. ಶಾಂತರಸರ 'ಬೇಗಂ ಪಾಕಿಸ್ತಾನ' ಎನ್ನುವ ಕವನ ಕೂಡ ಇಂಥದ್ದೇ ಸಂದರ್ಭದಲ್ಲಿ ರಚನೆಯಾದದ್ದು. ಪಾಕಿಸ್ತಾನ ಬೇಕೆಂದು ಬಯಸುವವರನ್ನು ಖಂಡಿಸಿ ಬುದ್ಧಿ ಹೇಳುವುದು ಕವಿತೆಯ ಮುಖ್ಯ ಉದ್ದೇಶವಾಗಿದೆ. ಈ ಕವಿತೆಗಳ ಹಿಂದಿನ ಆಶಯಗಳು ಕವಿಗಳದ್ದೇ ಆದರೂ ಈ ಕಾಲಘಟ್ಟದಲ್ಲಿ ಜನರ ಮನೋಭಾವ, ರಾಜಕೀಯ ವಿದ್ಯಮಾನಗಳಿಗೆ ಜನರ ಪ್ರತಿಕ್ರಿಯೆಗಳು ಇಲ್ಲಿ ಕಾಣಿಸುತ್ತವೆ. ಶಾಂತರಸರು ರಾಜಕೀಯ, ಸಾಮಾಜಿಕ ಬೆಳವಣಿಗೆಗಳಿಗೆ ತಮ್ಮದೇ ಆದ ನಿಲುವಿನಲ್ಲಿ ಪ್ರತಿಕ್ರಿಯಿಸುವ ಗುಣ ಹೊಂದಿದವರು. ಆದರೆ ಸಿದ್ದಯ್ಯ ಪುರಾಣಿಕರು ಹಾಗಲ್ಲ. ಅವರು ವ್ಯವಸ್ಥೆಯನ್ನು ವಿರೋಧಿಸುವ, ಪ್ರಭುತ್ವವನ್ನು ಪ್ರಶ್ನಿಸುವ ಗೋಜಿಗೆ ಹೋಗುವುದಿಲ್ಲ. ಅವರ ಕಾವ್ಯ ಮಾನವೀಯ ಆದರ್ಶಗಳಿಂದ ತುಂಬಿದೆ. 'ಸಲಾಮ್ ಸಾಬ' ಕವಿತೆ ಬರೆದು ಪೇಚಿಗೆ ಸಿಲುಕಿದಂತೆ ಕಾಣುತ್ತದೆ. ಈ ಪೇಚಿಗೆ ಕಾರಣವೆಂದರೆ ಕವಿತೆ ಬರೆದ ಬೆನ್ನಲ್ಲೇ ಅವರು ನಿಜಾಮ್ ಸರಕಾರದಲ್ಲಿ ತಹಸೀಲ್ದಾರರಾಗಿ ನೇಮಕಗೊಂಡದ್ದು. ಈ ಕವಿತೆಯನ್ನು 'ಮುಸುಕ ತೆರೆ' ಕೃತಿಯಲ್ಲಿ ಪ್ರಕಟಿಸಬಾರದೆಂದು ರಾಯಚೂರಿನ ಸಂಗಡಿಗರ ಸಮಿತಿಗೆ ಅವರು ಮನವಿ ಮಾಡಿಕೊಳ್ಳುತ್ತಾರೆ. ಆದರೆ ಆ ಕೃತಿ ಅಷ್ಟೊತ್ತಿಗೆ ಪ್ರಕಟವಾಗಿರುತ್ತದೆ. (ಚನ್ನಬಸವಪ್ಪ ಬೆಟ್ಟದೂರು : ಸಂಗಡಿಗರ ಸಾಂಗತ್ಯದಲ್ಲಿ ಶಾಂತರಸರು (ರಾಯಚೂರು ವಾಣಿ - ಸಾ.ಸ. ೧.೧೨.೦೩) ಪುಟ - ೧). ಮುಂದೆ ಇಂಥ ಕವಿತೆಗಳನ್ನು ಅವರು ಬರೆಯಲಿಲ್ಲ. ಹಿರಿಯ ತಲೆಮಾರುಗಳಲ್ಲಿ ಕಲಾನಂದ ಗೂಗಲ್ಲು ಉತ್ತಮ ಪದ್ಯಗಳನ್ನು ಬರೆದಿದ್ದಾರೆ. ಅವರ ಕವಿತೆಗಳ ಸಂಗ್ರಹ ಹೊರಬಂದಂತೆ ಕಾಣುವುದಿಲ್ಲ. ಅವರ ಕವಿತೆಗಳಲ್ಲಿ ರಾಜಕೀಯ, ಸಾಮಾಜಿಕ ಪ್ರಜ್ಞೆ ಜಾಗೃತವಾಗಿರುವುದು ಕಂಡುಬರುತ್ತದೆ. ಹನುಮಂತಾಚಾರ್ಯ ಉಪಾಧ್ಯಾಯರ ಕವಿತೆಗಳಲ್ಲಿ ನೆಹರು ಅವರ ಸಮಾಜವಾದ, ಭವ್ಯಭಾರತದ ಕನಸು, ಆದರ್ಶಗಳು ವ್ಯಕ್ತವಾಗಿವೆ.

೬೦-೭೦ರ ದಶಕದಲ್ಲಿ ಬರೆಯುತ್ತಿದ್ದ ಕವಿಗಳ ಕಾವ್ಯ 'ಬೆನ್ನ ಹಿಂದಿನ ಬೆಳಕು' ಎಂಬ ಆಂಥಾಲಜಿಯಲ್ಲಿದೆ. ಈ ಅವಧಿಯ ಕವಿಗಳ ಮೇಲೆ ನವ್ಯಸಾಹಿತ್ಯದ ಪ್ರಭಾವವಿದೆ. ವಿಚಿತ್ರವೆಂದರೆ ಈ ಕವಿಗಳು ಹಳ್ಳಿಯಲ್ಲಿ ಹುಟ್ಟಿ, ಬೆಳೆದು, ವಿದ್ಯಾಭ್ಯಾಸ ಮಾಡಲು ಪಟ್ಟಣದಲ್ಲಿದ್ದರೂ ಈ ಕವಿಗಳ ವ್ಯಕ್ತಿತ್ವ ಹಳ್ಳಿಯ ಜಾಯಮಾನದ್ದೇ ಆಗಿದೆ. ಆಧುನಿಕ ಬದುಕಿನ ಯಾವ ಸಂವೇದನೆ ಪಡೆಯದ ಈ ಕವಿಗಳು ಕಾಲದ ಒತ್ತಡಕ್ಕೆ ನವ್ಯಕಾವ್ಯದ ಬೆನ್ನುಹತ್ತಿ ಅನಾಥಪ್ರಜ್ಞೆ, ಅಸಂಗತ ಮನಸ್ಸಿನ ತುಮುಲ, ಉಸಿರುಗಟ್ಟುವ ಸಾಂಪ್ರದಾಯಿಕ ಬದುಕಿನ ಬಗ್ಗೆ ವಿರೋಧ ಮುಂತಾದವುಗಳನ್ನು ಆರೋಪಿಸಿಕೊಂಡು ಕವಿತೆಗಳನ್ನು ರಚಿಸಿದ್ದಾರೆ. ಆದರೆ ಈ ಕವಿಗಳು ಇದಕ್ಕೆ ವಿರುದ್ಧವಾದ ಸಾಮೂಹಿಕ ಬದುಕನ್ನು, ಹಳ್ಳಿಯ ಸತ್ವ ಸೊಗಡನ್ನು ಅನುಭವಿಸಿದವರು. ಅಂದರೆ ಅವರು ಹಳ್ಳಿ-ಸಮಾಜದ ಭಾಗವಾಗಿದ್ದವರೇ ಹೊರತು ಪ್ರತ್ಯೇಕ ಅಸ್ತಿತ್ವ ಕಂಡುಕೊಂಡವರಲ್ಲ. ಈ ಹೊತ್ತಿಗೂ ಈ ಪ್ರಾಂತದಿಂದ ಆಧುನಿಕ ಬದುಕನ್ನು ಪ್ರತಿನಿಧಿಸುವ ಸಾಹಿತ್ಯ ಕೃತಿಗಳು ಹೊರಬಂದಿಲ್ಲ. ಮನುಷ್ಯನ ಒಳ ಜಗತ್ತನ್ನು ಅರಿಯುವ ಆಸಕ್ತಿಗಿಂತ ಹೊರಜಗತ್ತನ್ನೇ ಅರಿಯುವ ಆಸಕ್ತಿಯೇ ಹೆಚ್ಚಾಗಿ ಕಾಣುತ್ತದೆ. ಹೀಗಾಗಿ ನವ್ಯಕಾವ್ಯದ ಕಾಲದಲ್ಲಿ ವಾತಾವರಣದ ಒತ್ತಡಕ್ಕೆ ನವ್ಯ ಕಾವ್ಯವನ್ನು ರಚಿಸಲು ಪಟ್ಟಪಾಡು ಈ ಅವಧಿಯಲ್ಲಿ ರಚನೆಯಾದ ಕಾವ್ಯದಿಂದ ವ್ಯಕ್ತವಾಗಿದೆ. ಈ ಬೆಳವಣಿಗೆಯಿಂದ ಈ ಪ್ರಾಂತದಲ್ಲಿ ಕವಿಗಳು ಬಿಕ್ಕಟ್ಟಿಗೆ ಸಿಲುಕಿದಂತೆ ಕಾಣುತ್ತದೆ. ಬೇರೊಂದು ದಾರಿಯನ್ನು ಕಂಡುಕೊಳ್ಳುವಷ್ಟು ಎತ್ತರದ ಪ್ರತಿಭೆಗಳು ಆಗ ಇರಲಿಲ್ಲ. ಆದರೂ ಕವಿತೆಗಳನ್ನು ರಚಿಸಿದರು. ಅವು ನವ್ಯವೂ ಅಲ್ಲ, ನವೋದಯಕ್ಕೂ ಸೇರಿಸಿಕೊಳ್ಳಲು ಮೂಲಭೂತ ಗುಣಗಳು ಅವುಗಳಲ್ಲಿ ಇರಲಿಲ್ಲ. ಆಶಾದಾಯಕ ಸಂಗತಿಯೆಂದರೆ ನವ್ಯದ ಬೆನ್ನ ಹಿಂದೆಯೇ ಆರಂಭವಾದ ಬಂಡಾಯ ಸಾಹಿತ್ಯ ಚಳುವಳಿಯಲ್ಲಿ ಸೇರಿಕೊಂಡು ಕೆಲವರು ಬಿಡುಗಡೆ ಪಡೆದರು. ಚೆನ್ನಣ್ಣ ವಾಲೀಕಾರ, ಶಿವಶರಣ ಪಾಟೀಲ ಜವಳಿ, ಜಂಬಣ್ಣ ಅಮರಚಿಂತ ಮುಂತಾದವರು ನವ್ಯ ಧೋರಣೆಯಿಂದ ಉಸಿರುಗಟ್ಟಿ ಹೋಗಿದ್ದರು. ಬಂಡಾಯ ಸಾಹಿತ್ಯ ಚಳುವಳಿ ಆರಂಭವಾದದ್ದು ಈ ಕವಿಗಳಿಗೆ ಶಕ್ತಿ ಬಂದಂತಾಯಿತು. ಆದರೆ ನವ್ಯ ಕಾವ್ಯವನ್ನು ಅದು ಹೇಗೋ ರಚಿಸುತ್ತಿದ್ದ ಮೇಲ್ವರ್ಗಗಳ ಕವಿಗಳಿಗೆ ಬಂಡಾಯ - ದಲಿತ ಸಾಹಿತ್ಯ ಚಳುವಳಿಯನ್ನು ಸೇರಲು ಅಸಾಧ್ಯವಾಯಿತು. ಅಂಥವರು ಕಾವ್ಯ ಬರೆಯುವುದನ್ನೇ ನಿಲ್ಲಿಸಿಬಿಟ್ಟರು. ನವ್ಯಸಾಹಿತ್ಯ ಚಳುವಳಿ ಈ ಪ್ರಾಂತದಲ್ಲಿ ದೊಡ್ಡ ಬಿಕ್ಕಟ್ಟನ್ನೇ ಉಂಟುಮಾಡಿತು. ಈ ಬಿಕ್ಕಟ್ಟು ಕವಿಗಳ ಅಭಿವ್ಯಕ್ತಿ ಸಾಧ್ಯತೆಯನ್ನೇ ಕುಂಠಿತಗೊಳಿಸಿತು.

೧೯೦೦-೫೦ರ ನಡುವೆ ಕಾವ್ಯ ರಚನೆಯಾದಷ್ಟು ಕಥನ ಸಾಹಿತ್ಯ ರಚನೆಯಾಗಲಿಲ್ಲ. ಬೆರಳು ಮಡಿಕೆಯಷ್ಟು ಕೃತಿಗಳು ಸಿಗುವುದು ಕಷ್ಟ. ಚನಪನಹಳ್ಳಿ ಹನುಮಂತರಾವ್ ದೇಸಾಯಿ, ಸಗರ ಕೃಷ್ಣಾಚಾರ್ಯ, ಎ. ಬಿ. ಮುತ್ತಾಳ ಮುಂತಾದ ಕೆಲವೇ ಕಥೆಗಾರರು ಕಾಣಿಸುತ್ತಾರೆ. ಆರಂಭದ ಕವಿಗಳು ಬಿ.ಎಂ.ಶ್ರೀ. ಅವರನ್ನು ಆದರ್ಶವಾಗಿಟ್ಟುಕೊಂಡಂತೆ, ಕಥೆಗಾರರು ಅನಕೃ ಅವರನ್ನು ಅನುಸರಿಸಿರುವುದು ಕಂಡುಬರುತ್ತದೆ. ಗುಲಬರ್ಗಾದಿಂದ ಹೊರಬಂದ 'ಸನ್ಮಾನ' (೧೯೬೮) ಎನ್ನುವ ಪ್ರಾತಿನಿಧಿಕ ಕಥಾಸಂಕಲನ (ಆಂಥಾಲಜಿ)ವನ್ನು ಅನಕೃ ಅವರನ್ನು ಸಂಭ್ರಮದಿಂದ ಸ್ವಾಗತಿಸಿ ಅವರಿಗೆ ಅರ್ಪಿಸಲಾಗಿದೆ. 'ಸನ್ಮಾನ' ಸಂಕಲನದ ೧೦ ಕತೆಗಳು, 'ಒರೆಗಲ್ಲು' ಸಂಕಲನದ ೧೦ ಕಥೆಗಳು ಸೇರಿದಂತೆ ಎಲ್ಲವುಗಳ ಮೇಲೆ ಪ್ರಗತಿಶೀಲ ಸಾಹಿತ್ಯ ಚಳುವಳಿಯ ಪ್ರಭಾವ, ಪ್ರೇರಣೆಯಿದೆ. ಹಿಂದಿಯ ಪ್ರೇಮಚಂದ್ರ, ಕನ್ನಡದ ಅನಕೃ ಇವರಿಂದ ಈ ಕಥೆಗಾರರು ಪ್ರಭಾವಿತರಾಗಿರುವುದು ಕಂಡುಬರುತ್ತದೆ. ಭಾರತ ದೇಶ ವಿಭಜನೆಯಾದಾಗ ನಡೆದ ಮತೀಯ ಗಲಭೆಗಳು,

ಬೆಂಗಳೂರು ಪುಸ್ತಕ ಮಾರಾಟಗಾರರು ಮತ್ತು ಪ್ರಕಾಶಕರು ಸಂಘಟಿಸಿದ್ದ 'ಬೆಂಗಳೂರು ಪುಸ್ತಕೋತ್ಸವ – ೨೦೦೪', ಸೆಪ್ಟೆಂಬರ್ ೧೦ರಿಂದ ೧೯ರವರೆಗೆ ಯಶಸ್ವಿಯಾಗಿ ಜರುಗಿತು. ಕನ್ನಡ, ತಮಿಳು, ತೆಲುಗು, ಹಿಂದಿ, ಮಲೆಯಾಳಂ ಮತ್ತು ಇಂಗ್ಲಿಷ್ ಭಾಷೆಯ ಸುಮಾರು ೩೦೦ಕ್ಕೂ ಹೆಚ್ಚು ಪುಸ್ತಕ ಮಳಿಗೆಗಳಿದ್ದವು. ಸುಮಾರು ಒಂದೂವರೆ ಲಕ್ಷದಷ್ಟು ಪುಸ್ತಕಾಸಕ್ತರು ಈ ಪುಸ್ತಕೋತ್ಸವಕ್ಕೆ ಭೇಟಿ ನೀಡಿದ್ದರು. ಪುಸ್ತಕ ಮಾರಾಟದ ಜೊತೆಗೆ ಪ್ರತಿದಿನ ಸಂಜೆ ಸಂವಾದ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳು ಜರುಗಿದವು.

ಚಿತ್ರಸುದ್ದಿ



ನವಕರ್ನಾಟಕ ಪ್ರಕಟಿಸಿರುವ 'ನವಕರ್ನಾಟಕ ಸಚಿತ್ರ ಸರಳ ವ್ಯಾಕರಣ', 'ಪ್ರಾಚೀನ ಭಾರತದಲ್ಲಿ ಶೂದ್ರರು' ಮತ್ತು 'ಭಗವದ್ಗೀತ' (ಇಂಗ್ಲಿಷ್) ಕೃತಿಗಳನ್ನು ಖ್ಯಾತ ಜ್ಞಾನಪೀಠ ಪ್ರಶಸ್ತಿ ವಿಜೇತ ಸಾಹಿತಿ ಡಾ|| ಯು. ಆರ್. ಅನಂತಮೂರ್ತಿ ಅನಾವರಣಗೊಳಿಸಿದರು.


ನವಕರ್ನಾಟಕ ಮಳಿಗೆ ಅತ್ಯುತ್ತಮ ಮಳಿಗೆಯೆಂದು ಪ್ರಥಮ ಬಹುಮಾನ ಗಳಿಸಿತು. ಕರ್ನಾಟಕ ಚಿತ್ರಕಲಾ ಪರಿಷತ್ತಿನ ಕಾರ್ಯದರ್ಶಿಗಳಾದ ಶ್ರೀ ಡಿ. ಕೆ. ಚೌಟ ಅವರು, ನವಕರ್ನಾಟಕದ ಶ್ರೀ ಕೆ. ಶ್ರೀನಿವಾಸ ಮೂರ್ತಿ ಅವರಿಗೆ ಪ್ರಶಸ್ತಿ ಪ್ರದಾನ ಮಾಡಿದರು

ಎರಡು ಮಹಾಯುದ್ಧಗಳು ಸಂಭವಿಸಿದಾಗ ಹುಟ್ಟಬಹುದಾಗಿದ್ದ ಭೀತಿ ಮತ್ತು ದೇಶಭಕ್ತಿ-ದೇಶಸೇವೆ, ಕವಿ ಕಲಾವಿದರ ಗೋಳಿನ (ಆದರ್ಶದ) ಕಥೆ, ಭಗ್ನ ಪ್ರೇಮ, ಬಡತನ–ದಾರಿದ್ರ್ಯಗಳ ನಡುವೆ ಮೆರೆಯುವ ಮಾನವೀಯತೆ ಮುಂತಾದವುಗಳು ಮೊದಲ ಘಟ್ಟದ ಕಥೆಗಳಲ್ಲಿ ವ್ಯಕ್ತಗೊಂಡಿವೆ. ದೇಶ ವಿಭಜನೆಯಿಂದಾದ ದುರಂತವನ್ನು ಮನಗಂಡಿದ್ದ ಈ ಪ್ರಾಂತದ ಜನತೆ, ತಮ್ಮ ನಿಂತ ನೆಲ ವಿಭಜನೆಯಾಗುತ್ತದೆಂಬ ಭೀತಿಗೆ ಒಳಗಾಗಿದ್ದರು. ಇಂಥ ಸಂದರ್ಭಗಳಲ್ಲಿ ಸಮಯ ಸಾಧಕರ ವಿಚ್ಛಿದ್ರಕಾರಕ ಕೆಲಸಗಳು ತೀವ್ರಗೊಂಡು ಸಮಾಜವನ್ನು ದುರಂತಕ್ಕೀಡು ಮಾಡುತ್ತವೆ. ಈ ದುರಂತದ ಹಲವು ಮುಖಗಳ ತಕ್ಕಮಟ್ಟಿನ ಚಿತ್ರಣ ಕಥನ ಸಾಹಿತ್ಯದಲ್ಲಿದೆ.




ಪ್ರಾದೇಶಿಕತೆಗೂ ಸೃಜನಶೀಲತೆಗೂ ಇರುವ ಸಂಬಂಧವನ್ನು ೭೦ರಿಂದೀಚೆಗೆ ರಚನೆಯಾದ ಕಥನ ಸಾಹಿತ್ಯದಲ್ಲಿ ಇನ್ನೂ ಹೆಚ್ಚು ಕಾಣಬಹುದು. ರಜಾಕಾರರ ಹಾವಳಿಯ ಸಂದರ್ಭದಲ್ಲಿ ಸಮಾಜದಲ್ಲಿ ಉಂಟಾದ ಭೀಕರ ಪರಿಸ್ಥಿತಿಯನ್ನು ಸಂಕೀರ್ಣವಾಗಿ ಹಿಡಿಯಲು ಈ ಭಾಗದ ಕಥನಕ್ಕೆ ಸಾಧ್ಯವಾಗಿಲ್ಲವೆಂದರೂ ಅದರ ಚಿತ್ರಣವೇನೋ ಇದೆ. ರಾಜಕೀಯ ಪ್ರೇರಿತ ಹಾವಳಿಯಾದರೂ ಸಮಾಜದಲ್ಲಿ ಅದು ಪಡೆದುಕೊಂಡ ಸ್ವರೂಪವನ್ನು ಕಥನಸಾಹಿತ್ಯದಲ್ಲಿ ಹಿಡಿದಿಡಲಾಗಿದೆ. ಬಹಳ ಮುಖ್ಯವಾಗಿ, ಪ್ರಭುತ್ವದ ದಬ್ಬಾಳಿಕೆ, ಅದನ್ನು ಅನುಭವಿಸುವ, ಎದುರಿಸುವ ವರ್ಗಗಳ ನಡುವಿನ ಸಂಘರ್ಷವು ಕಥನಸಾಹಿತ್ಯದಲ್ಲಿದೆ. ಸಾಮಾಜಿಕವಾಗಿ ಊರಗೌಡ, ಸಾಹುಕಾರ, ಪಟೇಲ, ಕುಲಕರ್ಣಿ, ಮಠಾಧೀಶ ಮುಂತಾದವರು ಬಡವರನ್ನು, ಕೆಳವರ್ಗದವರನ್ನು ಶೋಷಣೆಗೀಡು ಮಾಡುವುದನ್ನು ಎತ್ತಿ ತೋರಿಸುವುದು ಕಥನಸಾಹಿತ್ಯದ ಸ್ಥಾಯಿಗುಣ ಎಂಬಂತೆ ಕಾಣುತ್ತದೆ. ಮೇಲುನೋಟಕ್ಕೆ ಬಂಡಾಯ-ದಲಿತ ಸಾಹಿತ್ಯ ಚಳುವಳಿಯ ಪ್ರಭಾವ ಇದ್ದಂತೆ ಕಾಣುತ್ತದೆ. ಇದನ್ನು ಸಂಪೂರ್ಣ ನಿರಾಕರಿಸಲಾಗುವುದಿಲ್ಲ ಆದರೂ ಈ ಪ್ರಾಂತದ ಬದುಕೇ ಹೀಗಿರುವುದರಿಂದ ಇದು ಸಹಜವಾಗಿ ವ್ಯಕ್ತವಾಗಿದೆ. ಕಾಕತಾಳೀಯ ಎಂಬಂತೆ ಬಂಡಾಯ - ದಲಿತ ಸಾಹಿತ್ಯ ಚಳುವಳಿ ಆರಂಭದ ಹೊತ್ತಿನಲ್ಲಿಯೇ ಈ ಪ್ರಾಂತದ ಕಥನಸಾಹಿತ್ಯ ಬೆಳೆಯುತ್ತಿತ್ತು. ಅವು ಒಂದಕ್ಕೊಂದು ಪೂರಕವಾದವು ಅಷ್ಟೆ. ಯಾಕೆಂದರೆ 'ಬೆಳ್ಳಿ' (ಚೆನ್ನಣ್ಣ ವಾಲೀಕಾರ) ಕಾದಂಬರಿ ಬಹಳ ಹಿಂದೆ ಪ್ರಕಟವಾಗಿತ್ತು. ಬಂಡಾಯ ಸಾಹಿತ್ಯ ಚಳುವಳಿಗಿಂತ ಮೊದಲೇ 'ಸಣ್ಣಗೌಡಸಾನಿ' (ಶಾಂತರಸ), 'ಕುರುವಯ್ಯ ಮತ್ತು ಅಂಕುಶದೊಡ್ಡಿ' (ಜಂಬಣ್ಣ ಅಮರಚಿಂತ) ಎಂಬ ದೊಡ್ಡ ಗಾತ್ರದ ಕಾದಂಬರಿಗಳು ರಚನೆಯಾಗಿದ್ದರೂ ಪ್ರಕಾಶಕರ ಕೊರತೆಯಿಂದ ಅವು ಪ್ರಕಟವಾಗಿರಲಿಲ್ಲ. ಹತ್ತಾರು ವರ್ಷಗಳ ನಂತರ, ಅದೂ ಸಂಕ್ಷಿಪ್ತ ರೂಪದಲ್ಲಿ ಪ್ರಕಟವಾದವು. 'ಬೆಳ್ಳಿ' ಕಾದಂಬರಿ ಭಾಷೆಯ ತೊಡಕಿನಿಂದ ನಿರ್ಲಕ್ಷ್ಯಕ್ಕೆ ಒಳಗಾಯಿತು. ಕಾದಂಬರಿಯಲ್ಲಿ ನಾಗರಿಕ ಸಮಾಜಕ್ಕಿರುವ ಯಾವ ಮುಜುಗರ, ಸೂಕ್ಷ್ಮತೆಗಳು ಇಲ್ಲದ ಸಮಾಜವೊಂದರಲ್ಲಿ ಮನುಷ್ಯ ಸಂಬಂಧಗಳು ಎಷ್ಟು ಭೀಕರವಾಗಿರುತ್ತವೆ ಎಂಬ ಚಿತ್ರಣವಿದೆ.

'ಸಣ್ಣಗೌಡಸಾನಿ' ಕಾದಂಬರಿಯಲ್ಲಿ, ಮುಸ್ಲಿಮ್ ಸಮುದಾಯದ ಒಂದು ಪಂಗಡವಾದ 'ಜಾತಿಗೇರ' ಜನಾಂಗದ ಚಿತ್ರಣವಿದೆ. ಜಾತಿಗೇರರು ಹಾಡುಗಾರಿಕೆ, ಅಭಿನಯಗಳನ್ನು ಬಲ್ಲ ಅಲೆಮಾರಿ ಕಲಾವಿದರು. ಊರೂರು ಅಲೆಯುತ್ತ ಹೆಂಗಸರು, ಗಂಡಸರು ಕೂಡಿಯೇ ಸಣ್ಣಾಟಗಳನ್ನು ಆಡುತ್ತಾರೆ. ಇದರಿಂದಲೇ ಉಪಜೀವನ. ಅವರು ಮೈಮಾರಿ ಬದುಕು ಸಾಗಿಸುತ್ತಿದ್ದ ಪ್ರಸ್ತಾಪವಿದೆ. ಸುಂದರ ಮಹಿಳೆಯರನ್ನು ಹಣವಂತರು ತಮ್ಮಲ್ಲೇ ಇಟ್ಟುಕೊಳ್ಳುತ್ತಿದ್ದುದು ಉಂಟು. ಇಂಥ ಜನಾಂಗದ ಬದುಕಿನ ಪೂರ್ಣ ಚಿತ್ರಣ ಕಾದಂಬರಿಯಲ್ಲಿ ಬರುವುದಿಲ್ಲ. ಬದಲಾಗಿ 'ಜಾತಿಗೇರ' ಜನಾಂಗದ ಮಾಬಿ (ಮೆಹಬೂಬ ಜಾನ್) ಎನ್ನುವ ಸುಂದರ ಹೆಣ್ಣನ್ನು ಹಳ್ಳಿಯೊಂದರಲ್ಲಿ ದಕ್ಕಿಸಿಕೊಳ್ಳುವುದಕ್ಕೆ, ಫ್ಯೂಡಲ್ ವ್ಯವಸ್ಥೆಯ ಒಳಗಡೆ ನಡೆಯುವ ಪೈಪೋಟಿಯಿಂದ ಉದ್ಭವವಾಗುವ ವೈಷಮ್ಯ, ಜಗಳಗಳ ನಡುವೆ ಅಂತಿಮವಾಗಿ ಮಾಬಿ ಎಂಬ ಮಹಿಳೆಯೇ ದುರಂತಕ್ಕೀಡಾಗಬೇಕಾಗುತ್ತದೆ. ಇಟ್ಟುಕೊಂಡವನ ಬಳಿ ನೆಲೆ ಪಡೆದು, ತನ್ನ ವ್ಯಕ್ತಿತ್ವದಿಂದ 'ಸಣ್ಣಗೌಡಸಾನಿ' ಎಂದು ಕರೆಸಿಕೊಂಡರೂ ಮಾಬಿ ದುರಂತಕ್ಕೀಡಾಗುವುದು ಈ ಜನಾಂಗದಲ್ಲಿ ಹೆಣ್ಣುಗಳ ಸ್ಥಿತಿಯ ಸಂಕೇತ ಎಂಬಂತೆ ಕಾಣುತ್ತದೆ.

'ಕುರುವಯ್ಯ ಮತ್ತು ಅಂಕುಶದೊಡ್ಡಿ' ಕೊರವ ಜನಾಂಗದ ಕಥೆಯನ್ನು ಒಳಗೊಂಡಿದೆ. ಸಮಾಜದ ಅಂಚಿನಲ್ಲಿದ್ದು, ತಮ್ಮದೇ ಬದುಕಿನ ಕಟ್ಟುಪಾಡುಗಳ ಒಳಗೇ ಬಾಳುತ್ತ ಅನೇಕ ಸಂಕಷ್ಟಗಳಿಗೆ ಗುರಿಯಾಗುತ್ತಾರೆ. ಅಲ್ಲದೆ ನಾಗರಿಕ ಸಮಾಜದಿಂದ ದೂರವಿದ್ದರೂ ಕೊರವರಿಗೆ ಅದರಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗದ ಸ್ಥಿತಿ ಉದ್ಭವಿಸುತ್ತದೆ. ಸ್ಥಳೀಯ ಫ್ಯೂಡಲ್ ಶಕ್ತಿಗಳ ರಾಜಕೀಯಕ್ಕೆ ಕೊರವರು ಬಲಿಯಾಗುವುದು, ಬೆಳೆಯುತ್ತಿರುವ ಆಧುನಿಕ ಸಮಾಜದಿಂದಲೂ ಅನೇಕ ಬಿಕ್ಕಟ್ಟುಗಳನ್ನು ಈ ಜನಾಂಗ ಅನುಭವಿಸುತ್ತಿದೆ ಎಂಬುದನ್ನು ಕಾದಂಬರಿ ಹೇಳುತ್ತದೆ.

'ಗತಿ' (ಬಿ. ಟಿ. ಲಲಿತಾ ನಾಯಕ್) ಕಾದಂಬರಿಯಲ್ಲಿಯೂ ಲಂಬಾಣಿ ಜನಾಂಗದ ಚಿತ್ರಣವಿದೆ. ಕೊರವರು, ಲಂಬಾಣಿಗಳು ತಮ್ಮ ಸಮಾಜದ 'ಅನಾಗರಿಕ' ವ್ಯವಸ್ಥೆಯಿಂದಲೇ ತಮ್ಮ ಒಳಗೇ 'ವಿಕಾರ'ಗಳನ್ನು ಕಟ್ಟಿಕೊಳ್ಳುತ್ತ ದುರಂತವನ್ನು ಅನುಭವಿಸುತ್ತಿರುವುದು, ಹೆಣ್ಣಿನ ಬದುಕು ದಾರುಣವಾಗಿರುವುದು ಈ ಕಾದಂಬರಿಗಳಿಂದ ಕಂಡು ಬರುತ್ತದೆ. ಗೀತಾ ನಾಗಭೂಷಣ ಅವರು ಕೂಡ ಜೋಗಿಣಿಯರು ಬದುಕಿನಲ್ಲಿ ಅನುಭವಿಸುವ ಶೋಷಣೆಗಳನ್ನು ಕಟ್ಟಿಕೊಡುತ್ತಾರೆ. ಕೆಳವರ್ಗದ ಮಹಿಳೆಯರು ಪುರುಷರು ದಬ್ಬಾಳಿಕೆಗೆ ಒಳಗಾಗುವುದನ್ನು ತೋರಿಸುವ ಸರಮಾಲೆಯೇ ಅವರ ಕಾದಂಬರಿಗಳಲ್ಲಿದೆ. ಈ ಪ್ರಾಂತದ ದಾರುಣ ಬದುಕನ್ನು ಎಲ್ಲ ಕಾದಂಬರಿಗಳಲ್ಲಿ ಕಾಣುತ್ತೇವೆ.

ಈ ಪ್ರಾಂತದ ಕಥನಸಾಹಿತ್ಯದಲ್ಲಿ ಕಾಣುವ ಪ್ರಧಾನ ಅಂಶವೆಂದರೆ ಹೆಣ್ಣಿನ ಚಿತ್ರಣ. ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ದುರ್ಬಲವಿರುವ ವರ್ಗಗಳಲ್ಲಿ ಪುರುಷರಿಗಿಂತ ಮಹಿಳೆಯೇ ಹೆಚ್ಚು ದಬ್ಬಾಳಿಕೆಗೆ ಒಳಗಾಗುತ್ತಾಳೆ. ಇಡೀ ಕಥನ ಸಾಹಿತ್ಯದಲ್ಲಿ ಮಹಿಳೆಯ ದೌರ್ಬಲ್ಯ ಮತ್ತು ಶಕ್ತಿಯ ಪರಾಕಾಷ್ಠೆಯ ಚಿತ್ರಣವಿದೆ. ಈ ಪ್ರಾಂತದ ಕೆಳವರ್ಗದ ಸಾಮಾಜಿಕ ಬದುಕನ್ನು ಗಮನಿಸಿದರೆ, ಬದುಕನ್ನು ಕಟ್ಟಿಕೊಂಡು ನಿಭಾಯಿಸುವ ಶಕ್ತಿ ಪಡೆದುಕೊಂಡಿರುವುದೇ ಮಹಿಳೆ. ಬದುಕನ್ನು ಕೆಡಿಸುವ ಪುರುಷನ ಮುಂದೆಯೇ ಪೌರುಷದಿಂದ ಜೀವಿಸುವ ಎದೆಗಾರಿಕೆ ತೋರಿಸುವ ಮಹಿಳೆಯರನ್ನು ಚಿತ್ರಿಸದ ಕಥನಕಾರರೇ ಈ ಪ್ರಾಂತದಲ್ಲಿ ವಿರಳ. ಇದರಿಂದಾಗಿ '....ಇವೆಲ್ಲವನ್ನು ಬರೆಯುತ್ತಿರುವವರು ಹಲವರಲ್ಲ, ಒಬ್ಬರೇ' [ಎಚ್. ಎಸ್. ರಾಘವೇಂದ್ರರಾವ್ : ಮುನ್ನುಡಿ (ಬಿಸಿಲ ಹನಿಗಳು ೧೯೯೫) ಪು - XXII] ಎನ್ನುವ ಎಚ್. ಎಸ್. ರಾಘವೇಂದ್ರರಾವ್ ಅವರ ಮಾತು ಸಹಜವಾಗಿದೆ. ಈ ಪ್ರಾಂತದ ಸಾಮಾಜಿಕ ವಾಸ್ತವವೇ ಕಥನ ಸಾಹಿತ್ಯದಲ್ಲಿದೆ.

ಈಚಿನ ವರ್ಷಗಳಲ್ಲಿ ಈ ಪ್ರಾಂತದ ಕಥೆಗಾರರು ಮುಂಚೂಣಿಯಲ್ಲಿರುವುದು ಸಹಜವಾಗಿದೆ. ಕಥನಕಾರರಿಗೆ ಈ ಪ್ರಾಂತ ಕಸ್ವೆನೆಲವಾಗಿಯೇ ಇದೆ. 'ಗ್ರಾಮಾಯಣ' ಎಂಬ ಕಾದಂಬರಿ ಉತ್ತರ ಕರ್ನಾಟಕದಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿಯೇ ಹುಟ್ಟಿತು. ಕೃಷ್ಣಾ ನದಿಯ ದಂಡೆಯ ಮೇಲೆ ಅದರ ರಚನೆಯಾಗಿದೆ. ಹೈದರಾಬಾದು ಕರ್ನಾಟಕದಲ್ಲಿ ಇನ್ನೊಂದು 'ಗ್ರಾಮಾಯಣ' ಹುಟ್ಟಬೇಕಾಗಿತ್ತು. ಗೀತಾ ನಾಗಭೂಷಣ ಅವರ 'ಬದುಕು' ಕಾದಂಬರಿ ಈ ದೃಷ್ಟಿಯಿಂದ ಒಳ್ಳೆಯ ಪ್ರಯತ್ನವಾಗಿದೆ. ಇನ್ನೂ ಕಾಲ ಮೀರಿಲ್ಲ. ಈಚಿನ ಕಥನಕಾರರು ಒಲವು ತೋರಿಸಬೇಕು. ಸ್ವಾತಂತ್ರ್ಯಾನಂತರದಲ್ಲಿ ವಲಸೆ ಹೋಗುವವರ ಬವಣೆಗಳು, ಹೆಚ್ಚು ನೀರಾವರಿ ಯೋಜನೆಗಳು ಚಾಲ್ತಿಯಲ್ಲಿದ್ದು ಅಣೆಕಟ್ಟಿನಿಂದ ಮುಳುಗಡೆಗೆ ಒಳಗಾಗುವ ಜನಸಮುದಾಯಗಳ ಸಾಂಸ್ಕೃತಿಕವಾದ ಅವನತಿ, ನೀರಾವರಿ ಬರುತ್ತದೆಂದು ೩೦ ವರ್ಷಗಳಿಂದ ತಮ್ಮ ಹೊಲಗಳಿಗೆ ನೀರು ಬರುವುದನ್ನೇ ಕಾಯ್ದು ಕರಕಲಾಗುತ್ತಿರುವ ರೈತರು, ಜಾಗತೀಕರಣದಿಂದ ಉಂಟಾಗಿರುವ ರೈತರ ಸಾವುಗಳು, ಉದ್ದಿಮೆಗಳು ಮುಚ್ಚಿ ಬೀದಿಗೆ ಬೀಳುತ್ತಿರುವ ಕಾರ್ಮಿಕರ ಪರಿಸ್ಥಿತಿ, ಜಾತಿ, ಕೋಮು ಸಂಘರ್ಷಗಳು ಮುಂತಾದ ಸಂಕಷ್ಟಗಳಿಂದ ಇಡೀ ಪ್ರಾಂತ ಜ್ವಲಂತ ಸಮಸ್ಯೆಗಳಿಂದ ತುಂಬಿದೆ. ಆದರೂ ಜನಸಮುದಾಯಗಳಿಗೆ ಬದುಕುವ ಶಕ್ತಿಯಿದೆ, ಬದುಕುತ್ತಿವೆ. ಬದುಕುತ್ತಿರುವುದರಿಂದ ಪ್ರೀತಿ, ಮಾನವೀಯತೆಯನ್ನು ಉಡಿಯಲ್ಲಿಟ್ಟುಕೊಂಡು ಮುನ್ನಡೆದಿವೆ. ಆದರೆ ಸಾಹಿತ್ಯ... ?

ಅಮರೇಶ ನುಗಡೋಣಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಹೊಸಪೇಟೆ ತಾಲ್ಲೂಕು - ೫೮೩ ೨೭೬

# ಮೃಗೀಯ ಮನಸ್ಸುಗಳ ಧರ್ಮೋನ್ಮಾದಕ್ಕೆ ಹಿಡಿದ ಕನ್ನಡಿ

# ಲಜ್ಜಾ



'ಲಜ್ಜಾ' ಕಾದಂಬರಿಯು ಮೂಲಭೂತವಾಗಿ ಸಮಕಾಲೀನ ಸಮಸ್ಯೆಯೊಂದಕ್ಕೆ ಸ್ಪಂದಿಸಿ ರಚಿತವಾದ ಸೃಜನಶೀಲ ಕೃತಿ. ಸೃಜನಶೀಲ ಕೃತಿಯೊಂದು ಸಮಕಾಲೀನತೆಗೆ ಸ್ಪಂದಿಸುತ್ತಲೆ ಸಾರ್ವಕಾಲಿಕ ದಾಖಲೆಯಾಗುಳಿಯುವ ಮಹತ್ವದ ಕೃತಿಯಾಗಿ ಹೇಗೆ ಪರಿವರ್ತನೆಗೊಳ್ಳುತ್ತದೆ ಅಥವಾ ಓದುಗನ ಮನಸ್ಸಿನಲ್ಲಿ ಆ ಅಂಥ ಸ್ಥಾನವನ್ನು ಹೇಗೆ ಪಡೆದುಕೊಳ್ಳುತ್ತದೆ ಎಂಬುದಕ್ಕೆ ಉತ್ತಮ ಸಾಕ್ಷಿ ಕೂಡಾ 'ಲಜ್ಜಾ' ಆಗಿದೆ.

'ಲಜ್ಜಾ' ಕೇವಲ ಒಂದು ಕಾದಂಬರಿಯಾಗಿರದೆ ಅದು ಆ ಕಾಲದ ಸಾಮಾಜಿಕ ಆರ್ಥಿಕ - ಸಾಂಸ್ಕೃತಿಕ ಹಾಗೂ ಸಮಾಜೋ-ಧಾರ್ಮಿಕ ಸಂದರ್ಭಗಳಿಗೆ ಹಿಡಿದ ಕನ್ನಡಿಯಾಗಿದೆ. ಉದಾಹರಣೆಗಳನ್ನು ದಾಖಲಿಸುವುದಾದರೆ ಬಾಂಗ್ಲಾದಲ್ಲಿನ ಅಲ್ಪಸಂಖ್ಯಾತ ಹಿಂದೂಗಳು ಭಾರತೀಯ ಬ್ರಾಹ್ಮಣರಂತೆ ಮಡಿವಂತಿಕೆ, ಗೋಹತ್ಯಾವಿರೋಧ, ಅಂಧಸಂಪ್ರದಾಯಗಳಿಂದ ಕೂಡಿದ ಬಿಗಿಬಂಧದ ಕೌಟುಂಬಿಕ ವ್ಯವಸ್ಥೆಗಳನ್ನು ಪರಿಪಾಲಿಸಿಕೊಂಡು ಬರುತ್ತಿದ್ದಾರೆನ್ನುವುದು ಹಾಗೂ ಅಲ್ಲಿಯ ಹಿಂದೂಗಳಿಗೆ ನೌಕರಿಗಳಿಲ್ಲ, ಇದ್ದರೂ ಮೇಲ್ದರ್ಜೆಯ ಸ್ಥಾನಗಳಲ್ಲಿ ಹೇರಳ ಅವಕಾಶಗಳಿಲ್ಲ ಎನ್ನುವುದು. ಇವೆಲ್ಲ ಬಾಂಗ್ಲಾದ ಆ ಕಾಲದ ಪರಿಸ್ಥಿತಿಯನ್ನು ನಮಗೆ ಕಣ್ಣಿಗೆ ಕಟ್ಟುವಂತೆ ವಿವರಿಸುತ್ತವೆ. ಅಲ್ಲಿ ಆಚರಿಸಲಾಗುವ ಹಬ್ಬಗಳ ಉಲ್ಲೇಖ ಮತ್ತು ಗಲಭೆಗೆ ಮುಂಚೆ ಹಿಂದೂ-ಮುಸ್ಲಿಂರಲ್ಲಿ ಯಾವುದೇ ಬಗೆಯ ವ್ಯತ್ಯಾಸಗಳಿರದ ಸಮರಸದ ಬದುಕೊಂದು ನಿರಾತಂಕವಾಗಿ ಸಾಗಿಕೊಂಡು ಬಂದಿತ್ತು ಎಂಬ ಆಹ್ಲಾದಕಾರಿ ಫ್ಲ್ಯಾಶ್‌ಬ್ಯಾಕ್ ಸತ್ಯಗಳು ಸಾಂದರ್ಭಿಕವಾಗಿ ಅಲ್ಲಲ್ಲಿ ಕಾಣಿಸಿಕೊಳ್ಳುವ ಮೂಲಕ ಅಲ್ಲಿಯ ಗಲಭೆಗೆ ಮುಂಚಿನ ಮತ್ತು ನಂತರದ ಧಾರ್ಮಿಕ ವಾತಾವರಣದ ಪರಿಚಯ ಮಾಡಿಕೊಟ್ಟಿವೆ.

೯೦ರ ದಶಕದಲ್ಲಿ ಇಂಡಿಯಾದಲ್ಲಿ ಬಾಬ್ರಿ ಮಸೀದಿಯನ್ನು ಕೆಡವಿದ ಪ್ರಕರಣವೇ ನೆರೆಯ ಬಾಂಗ್ಲಾದಲ್ಲಿ ಎಷ್ಟೊಂದು ಹಿಂಸಾಚಾರಕ್ಕೆ ಬೀಜವಾಯಿತು ಎಂಬುದನ್ನು ಲೇಖಕಿ ತಸ್ಲೀಮಾ ನಸ್ರೀನ್ ನಿಖರ ಅಂಕಿ-ಸಂಖ್ಯೆಗಳ ಆಧಾರದ ಮೂಲಕ ಹೇಳುತ್ತಾ ಸಾಗುತ್ತಾರೆ. ಹೀಗೆ ಬಾಂಗ್ಲಾದಲ್ಲಿರುವ ಕೇವಲ ಎರಡೂವರೆ ಕೋಟಿ ಹಿಂದೂಗಳ ಮೇಲೆ ನಡೆದ ಮಾರಣಹೋಮ, ಮನೆಗಳ ಲೂಟಿ, ಬೀದಿಗಳ ಮೇಲೆ ಹಾಡಹಗಲೇ ನಡೆದ ಸಾಮೂಹಿಕ ಅತ್ಯಾಚಾರಗಳು, ಮೂಲಭೂತವಾದಿ ಮನಸ್ಸುಗಳಿಗೆ ಒತ್ತಾಸೆಯಾಗಿಯೆಂಬಂತೆ ಜಾಣಮೌನ-ಕುರುಡುಗಳನ್ನು ಪ್ರದರ್ಶಿಸುವ ಮತಾಂಧ ಸರ್ಕಾರ, ನಿನ್ನೆಯವರೆಗೆ ಭಾಯಿ-ಭಾಯಿಯಾಗಿದ್ದ ಮನಸ್ಸುಗಳು ಎಲ್ಲೋ ಯಾರೋ ಮಸೀದಿ ಕೆಡವಿದ್ದು ನೆಪವಾಗಿ ಅಕ್ಷರಶಃ ಅಮಾಯಕರಾದ ಅಲ್ಪಸಂಖ್ಯಾತ ಹಿಂದೂಗಳನ್ನು ಬೀದಿನಾಯಿಗಿಂತ ಕಡೆಯಾಗಿಸಿ ಚಿತ್ರಹಿಂಸೆ ನೀಡುವುದು.... ಇತ್ಯಾದಿಗಳೆಲ್ಲದರ ಚಿತ್ರಣವನ್ನು ತಸ್ಲೀಮಾ ನೀಡುತ್ತಾರೆ. ನಿರೂಪಕಿಯ ಮಧ್ಯಪ್ರವೇಶದಿಂದಾಗಿ ದೊರೆಯುವ ಇಂಥಾ ಹಿಂಸಾಚಾರದ ವಿವರಗಳಿಂದಾಗಿ ಇಡೀ ಕಾದಂಬರಿಯನ್ನು ಓದಿ ಮುಗಿಸಿದ ನಂತರ ಮೃಗೀಯ ಮನಸ್ಸು ಮತ್ತು ಅಫೀಮೇ ಆಗಿರುವ ಧರ್ಮಗಳ ಬಗ್ಗೆ ಜುಗುಪ್ಸೆ ಹುಟ್ಟುತ್ತದೆ.

ಅಷ್ಟೆಲ್ಲ ಕುಟುಂಬಗಳು ಹಿಂಸಾಚಾರ ತಾಳದೆ ಭಾರತಕ್ಕೆ ಓಡಿಹೋಗುವುದನ್ನು ಹೇಳುವ ತಸ್ಲಿಮಾ, ಹಾಗೆ ಹೇಳುತ್ತಲೆ, ಅಂಥ ಹಲವು ಕಥೆಗಳಿಗೆ ನಮ್ಮನ್ನು ಕಿವಿಯಾಗಿಸುತ್ತ ಬಾಂಗ್ಲಾದ ಆ ಸಂದರ್ಭದಲ್ಲಿ ಎಲ್ಲ ಹಿಂದೂ ಕುಟುಂಬಗಳ ಪ್ರತಿನಿಧಿಯಂತಹ ಕುಟುಂಬವೊಂದನ್ನು ಪ್ರಧಾನ ಭೂಮಿಕೆಯಲ್ಲಿಟ್ಟುಕೊಂಡು, ಅಲ್ಪಸಂಖ್ಯಾತ ಹಿಂದೂಗಳು ವಿನಾಕಾರಣವಾಗಿ ಅನುಭವಿಸಬೇಕಾಗಿ ಬಂದ ರೌರವ ನರಕದ ದರುಶನ ಮಾಡಿಸುತ್ತಾರೆ.

ಸುಧಾಮಯ ದತ್ತ ಮತ್ತು ಕಿರಣ್ಮಯಿ ಎಂಬ ದಂಪತಿಗಳು ಮತ್ತು ಅವರ ಮಕ್ಕಳಾದ ಸುರಂಜನ್ ದತ್ ಮತ್ತು ಮಾಯಾರನ್ನೊಳಗೊಂಡ ಚಿಕ್ಕ ಕುಟುಂಬವು ಬಾಂಗ್ಲಾವೇ ತನ್ನ ಮಾತೃದೇಶವೆಂದು ಅಗಾಧ ಮತ್ತು ಅಮಿತವಾದ ದೇಶಪ್ರೇಮವನ್ನು ಮೈಯ ಕಣಕಣದಲ್ಲೂ ತುಂಬಿಕೊಂಡು ಉಳಿದವರಂತೆ, ಹಿಂಸಾಚಾರಕ್ಕೆ ಹೆದರಿ ದೇಶಬಿಟ್ಟು ಓಡಿಹೋಗದೆ, ಅಲ್ಲೇ ಉಳಿಯುವ ನಿರ್ಧಾರ ತೆಗೆದುಕೊಳ್ಳುತ್ತದೆ. ಓಡಿಹೋದವರು ಹಾಯಾಗಿ ಉಳಿದರೋ ಗೊತ್ತಿಲ್ಲ. ಉಳಿದವರು ಅನುಭವಿಸಿದ ನರಕವೆಂಥದೆಂಬುದನ್ನು ನಿರುದ್ವಿಗ್ನವಾದ ಶೈಲಿಯಲ್ಲಿ ಕಾದಂಬರಿಯುದ್ದಕ್ಕೂ ವಿವರಿಸಿಕೊಂಡು ಹೋಗಲಾಗಿದೆ. ತಸ್ಲೀಮಾ ಎಲ್ಲಿಯೂ, ಯಾವ ಪಾತ್ರದಿಂದಲೂ ಆವೇಶಪೂರಿತವಾದ ಸಿನಿಮ್ಯಾಟಿಕ್ ರೀತಿಯ ಮಾತುಗಳನ್ನಾಡಿಸಿಲ್ಲದಿರುವುದು - ಕೃತಿಯನ್ನು 'ಒಂದು ಸಾಮಾನ್ಯ ವರದಿರೂಪದ ಕೃತಿ' ಯಾಗಬಹುದಾಗಿದ್ದ ಅಪಾಯದಿಂದ ಪಾರುಮಾಡಿದೆ.

ಕೊನೆಗೂ ಸುಧಾಮಯದತ್ತನ ಕುಟುಂಬ ತನ್ನ ಅಚಲ ನಿರ್ಧಾರವನ್ನು ಸಡಿಲಿಸಿ ಇಂಡಿಯಾಕ್ಕೆ ಹೊರಡಲು ಸಿದ್ಧವಾಗುವುದರೊಂದಿಗೆ ಕಾದಂಬರಿ ಮುಗಿಯುತ್ತದೆ. ಸಾಕಷ್ಟು ಓದಿಕೊಂಡಿದ್ದ, ಕಮ್ಯುನಿಸ್ಟ್ ವಿಚಾರಧಾರೆಯಿಂದ ಪ್ರಭಾವಿತನಾಗಿದ್ದ, ನಾಸ್ತಿಕವಾದಿ ಮಾಜಿ ಪತ್ರಕರ್ತನಾದ ಸೂಕ್ಷ್ಮ-ಸಂವೇದನೆಯ ಯುವಕ ಸುರಂಜನ್ ದತ್ತ, ಕಾದಂಬರಿಯ ಮುಕ್ತಾಯದ ಹೊತ್ತಿಗೆ ಕಮ್ಯೂನಲ್ ಆಗಿ ಪರಿವರ್ತಿತನಾದಂತೆ ತೋರುವ ಲಕ್ಷಣಗಳು ಗಮನಾರ್ಹವಾಗಿವೆ. ಅವನು ಹಿಂದೂಗಳಿಗೆ ಮುಸ್ಲಿಂರು ಮಾಡಿದ ಹಿಂಸೆಗೆ ಪ್ರತಿಯಾಗಿ ಏನನ್ನೂ ಮಾಡಲಾಗದ ತನ್ನ ಅಸಹಾಯಕತನದಿಂದಾಗಿ ಕುಡಿತಕ್ಕೆ ಶರಣಾಗುತ್ತಾನೆ ಹಾಗೂ ಸಂಭೋಗ ಮತ್ತು ಬಲಾತ್ಕಾರಗಳು ಬೇರೆ ಬೇರೆ ಅನುಭವಗಳೇ ಅಲ್ಲದ ಒಬ್ಬ ನಿರ್ಭಾವುಕ ಮುಸ್ಲಿಂ ವೇಶ್ಯೆಯ ಮೇಲೆ ಲೈಂಗಿಕ ದೌರ್ಜನ್ಯ ಮಾಡುವ ಮೂಲಕ ತನ್ನ ಪ್ರತೀಕಾರವನ್ನು ತೀರಿಸಿಕೊಳ್ಳುವಂಥ ನೀಚ ಮಾನಸಿಕ ಸ್ಥಿತಿಗೆ ತಲುಪುತ್ತಾನೆ.

ಅದೇನೇ ಇರಲಿ. 'ಲಜ್ಜಾ' ವಿವಾದಿತ ಕೃತಿಯಾದ್ದರಿಂದಲೇ ಎಲ್ಲರಿಗೂ ಗೊತ್ತಾಗಿಬಂತೇ ಹೊರತು ಅದು ಸಾಹಿತ್ಯಕವಾಗಿ ಅಷ್ಟೇನೂ ಮಹತ್ವದ ಕೃತಿಯಲ್ಲ. ಕಾದಂಬರಿಯ ವಸ್ತುವಾಗಲಿ, ತಂತ್ರವಾಗಲಿ, ಕಥಾಹಂದರವಾಗಲಿ ಅಥವಾ ಎಲ್ಲ ಪಾತ್ರಗಳಿಗೆ ಸಮಾನ ನ್ಯಾಯ ದೊರಕಿಸಿಕೊಡಲಾಗದ ಕಾದಂಬರಿಕಾರ್ತಿಯ ಸೋಲಾಗಿರಲಿ... ಎಲ್ಲ ದೃಷ್ಟಿಯಿಂದ ಇದೊಂದು ಜನಪ್ರಿಯ ಶೈಲಿಯ ಕಾದಂಬರಿಗೆ ತುಸು ಹತ್ತಿರದ್ದೆನಿಸುವ ಒಂದು ಸಾಮಾನ್ಯ ಕೃತಿಯಂತೆ ಕಾಣುತ್ತದೆ. ಆದರೆ ಗಮನಿಸಬೇಕಾದ ಅಂಶ ಇರುವುದು ಇಲ್ಲೇನೆ. 'ಲಜ್ಜಾ'ಗೆ ಕೇವಲ ಸಾಂಸ್ಕೃತಿಕ ಅಥವಾ ಸಾಹಿತ್ಯಕ ಆಯಾಮವಷ್ಟೇ ಅಲ್ಲ; ಅದು ಆಗಿನ ಕಾಲ ಮತ್ತು ಸತ್ಯಗಳನ್ನು ಯಥಾವತ್ತಾಗಿ

೬೨ನೇ ಪುಟಕ್ಕೆ

'ಲಜ್ಜಾ' ಕೇವಲ ಒಂದು ಕಾದಂಬರಿಯಾಗಿರದೆ ಅದು ಆ ಕಾಲದ ಸಾಮಾಜಿಕ ಆರ್ಥಿಕ - ಸಾಂಸ್ಕೃತಿಕ ಹಾಗೂ ಸಮಾಜೋ-ಧಾರ್ಮಿಕ ಸಂದರ್ಭಗಳಿಗೆ ಹಿಡಿದ ಕನ್ನಡಿಯಾಗಿದೆ. ಉದಾಹರಣೆಗಳನ್ನು ದಾಖಲಿಸುವುದಾದರೆ ಬಾಂಗ್ಲಾದಲ್ಲಿನ ಅಲ್ಪಸಂಖ್ಯಾತ ಹಿಂದೂಗಳು ಭಾರತೀಯ ಬ್ರಾಹ್ಮಣರಂತೆ ಮಡಿವಂತಿಕೆ, ಗೋಹತ್ಯಾವಿರೋಧ, ಅಂಧಸಂಪ್ರದಾಯಗಳಿಂದ ಕೂಡಿದ ಬಿಗಿಬಂಧದ ಕೌಟುಂಬಿಕ ವ್ಯವಸ್ಥೆಗಳನ್ನು ಪರಿಪಾಲಿಸಿಕೊಂಡು ಬರುತ್ತಿದ್ದಾರೆ ಎನ್ನುವುದು ಹಾಗೂ ಅಲ್ಲಿಯ ಹಿಂದೂಗಳಿಗೆ ನೌಕರಿಗಳಿಲ್ಲ, ಇದ್ದರೂ ಮೇಲ್ದರ್ಜೆಯ ಸ್ಥಾನಗಳಲ್ಲಿ ಹೇರಳ ಅವಕಾಶಗಳಿಲ್ಲ ಎನ್ನುವುದು. ಇವೆಲ್ಲ ಬಾಂಗ್ಲಾದ ಆ ಕಾಲದ ಪರಿಸ್ಥಿತಿಯನ್ನು ನಮಗೆ ಕಣ್ಣಿಗೆ ಕಟ್ಟುವಂತೆ ವಿವರಿಸುತ್ತವೆ.

. . . . . . . . . . . . . . . . . .

ಚಿದಾನಂದ ಸಾಲಿ

# ಮತ ಪಂಥ ಧರ್ಮ ದರ್ಶನಗಳು

ಆಂಗ್ಲ ಭಾಷೆಯ ಸೆಕ್ಟ್, ಕಲ್ಟ್, ರಿಲಿಜನ್, ಫಿಲಾಸಫಿ ಎಂಬ ಪದಗಳಿಗೆ ನಮ್ಮ ನುಡಿಯಲ್ಲಿ ಮತ, ಪಂಥ, ಧರ್ಮ, ದರ್ಶನಗಳೆಂಬ ಪರಿಕಲ್ಪನೆಗಳಿವೆ. ನಮ್ಮ ಹಿಂದಿನವರು 'ಮತ'ಕ್ಕೆ 'ಸಮಯ'ವೆಂತಲೂ ಕರೆಯುತ್ತಿದ್ದರು. 'ಧರ್ಮ'ವನ್ನು ತುಂಬ ವಿಶಾಲವಾದ, ವಿಭಿನ್ನ ಅರ್ಥಗಳಲ್ಲಿ ಬಳಸುತ್ತಿದ್ದರು. ಬೇರೆ, ಬೇರೆ ಸಮಯದವರು 'ಧರ್ಮ'ಕ್ಕೆ ತುಂಬ ಭಿನ್ನವಾದ ಅರ್ಥಗಳನ್ನು ಕಲ್ಪಿಸುತ್ತ ಬಂದಿದ್ದಾರೆ. ಆದರೆ ಇಂದು ಅವೆಲ್ಲ ಅರ್ಥಗಳು ಮಾಯವಾಗಿ 'ರಿಲಿಜನ್'ಗೆ ಪರ್ಯಾಯ ಪರಿಕಲ್ಪನೆಯಾಗಿ ಮಾತ್ರ ಬಳಸುತ್ತಿದ್ದೇವೆ. ಇಂದು ನಾವು ಹೇಳುತ್ತಿರುವ 'ತತ್ತ್ವಜ್ಞಾನ'ಕ್ಕೆ (ಫಿಲಾಸಫಿ) ಹಿಂದೆ ದರ್ಶನವೆನ್ನುತ್ತಿದ್ದರು. ಧರ್ಮ ಅಥವಾ ಸಮಯಗಳ ಮಟ್ಟಕ್ಕೇರದ ಮೈಲಾರ, ಮಾರೆಮ್ಮ, ಮಂಟೇಸ್ವಾಮಿ, ಮಾದೇಶ್ವರ ಮೊದಲಾದ ದೈವಗಳ ಸುತ್ತ ಇರುವ ಪದ್ಧತಿ, ಪರಂಪರೆ, ನಂಬಿಕೆ, ಆಚರಣೆಗಳನ್ನು ಆಯಾ ದೈವಗಳ ಹೆಸರಿನ (ಮೈಲಾರ ಪಂಥ, ಇತ್ಯಾದಿ) 'ಪಂಥ'ವೆಂದು ಹೇಳಲಾಗುತ್ತದೆ. ಇಂಥ ಅನೇಕ ಪಂಥಗಳು ನಮ್ಮ ಸಮಾಜದಲ್ಲಿ ಅಸ್ತಿತ್ವದಲ್ಲಿವೆ. 'ನಾಗಪಂಥ' ನಾಗ ಪಂಚಮಿಯ ಹಬ್ಬದ ರೂಪದಲ್ಲಿ ಉಳಿದಿದೆ, ಇತ್ಯಾದಿ.

ಮೇಲೆ ಹೇಳಿದ ಈ ಪಾರಿಭಾಷಿಕ ಪದಗಳ ಸೂಕ್ಷ್ಮ ವ್ಯತ್ಯಾಸಗಳನ್ನು ಖಚಿತ ಮಾಡಿಕೊಳ್ಳಬೇಕಾದ ಅಗತ್ಯವೇಕಿದೆ, ಎಂದರೆ ಅವನ್ನು ಕಲಬೆರೆಕೆ ಮಾಡಿ ತಪ್ಪಾಗಿ ಬಳಸುವ ಪರಿಪಾಠ ನಮ್ಮಲ್ಲಿ ಕಂಡುಬರುತ್ತಿರುವುದರಿಂದ. ನಮ್ಮ ಜನಕೋಟಿಯ ಬದುಕು ಹೆಚ್ಚು ಹಸನಾಗಬೇಕು, ಮೌಢ್ಯ ನಾಶವಾಗಬೇಕು, ಪ್ರಗತಿ ಉಸಿರಾಗಬೇಕು ಎನ್ನುವುದಾದರೆ ಅವರ ಜೀವನಕ್ರಮದಲ್ಲಿ (ಸಂಸ್ಕೃತಿ) ಪ್ರಭಾವಶಾಲಿಯಾಗಿರುವುದು ಮತವೇ, ಪಂಥವೇ, ಧರ್ಮವೇ, ದರ್ಶನವೇ ಎಂದು ಪರಿಶೋಧಿಸುವಂತಾಗಬೇಕು. ಅವರು ತಮ್ಮ ಬದುಕನ್ನು ತಾವೇ ಪರಾಮರ್ಶಿಸಿಕೊಂಡು ಯಾವುದಕ್ಕೆ ಪ್ರಾಧಾನ್ಯತೆ ಕೊಡಬೇಕೆಂಬುದನ್ನು ನಿರ್ಧರಿಸುವಂತಾಗಬೇಕು.

ಮತ, ಪಂಥ, ಧರ್ಮ, ದರ್ಶನಗಳೆಲ್ಲ ನಮ್ಮ ಮಧ್ಯೆ ಅಸ್ತಿತ್ವದಲ್ಲಿರುವುದಕ್ಕೆ ಕಾರಣ – ನಮ್ಮ ಸಮಗ್ರ ಸಾಮಾಜಿಕ ಬದುಕು ಒಂದೇ ಪ್ರಮಾಣದಲ್ಲಿ, ಸಮಾನ ಮಟ್ಟದಲ್ಲಿ ಏಳ್ಗೆ ಹೊಂದದೇ ಇರುವುದು. ವಿವಿಧ ಬಗೆಯ ಜನಕುಲಗಳು, ಪ್ರಗತಿಯ ವಿಭಿನ್ನ ಕಾಲಘಟ್ಟಗಳನ್ನು ಪ್ರತಿನಿಧಿಸುವಂತಿದ್ದು, ಬುಡಕಟ್ಟುಗಳಿಂದ ಹಿಡಿದು, ಆಧುನಿಕ ಬದುಕಿನ ಹಂತಗಳೆಲ್ಲವೂ ಅಸ್ತಿತ್ವದಲ್ಲಿವೆ. ನಮ್ಮ ಕಾಡುಗಳಲ್ಲಿ ಕಾಡು ಕುರುಬರು, ಸೋಲಿಗರು, ತೋಡರು, ಕಾಡುಗೊಲ್ಲರು, ಮ್ಯಾಸ ನಾಯಕರು ಮೊದಲಾದ ಬುಡಕಟ್ಟು ಅಂಶಗಳನ್ನು ಹೆಚ್ಚು ಉಳಿಸಿಕೊಂಡಿರುವ ಸಮುದಾಯಗಳಿದ್ದರೆ, ದೂರದ ಗ್ರಾಮಗಳಲ್ಲಿ ವಿಭಿನ್ನ ತಳ ಜಾತಿ ಘಟಕಗಳು, ತಮ್ಮ ಪ್ರಾಚೀನ ಸಂಪ್ರದಾಯಗಳನ್ನು ಉಳಿಸಿಕೊಂಡೇ ಬಾಳುತ್ತಿವೆ. ಪಟ್ಟಣ ಮತ್ತು ನಗರಗಳಲ್ಲಿ ಆಧುನಿಕತೆ ಕಂಡುಬರುತ್ತಿದ್ದರೂ ಊಳಿಗಮಾನ್ಯ ಕಾಲದ 'ಜಾತಿ' ಸಂಪೂರ್ಣ ನಶಿಸಿಲ್ಲ.

ಈ ಆರ್ಥಿಕ, ಸಾಮಾಜಿಕ, ರಾಜಕೀಯ ವಾಸ್ತವ ಸ್ಥಿತಿಯ ಹಿನ್ನೆಲೆಯಲ್ಲಿ ಮತ, ಪಂಥ, ಧರ್ಮ, ದರ್ಶನಗಳ ಪ್ರಭಾವಗಳ ಕುರಿತು ಪರ್ಯಾಲೋಚಿಸಬೇಕಾದ ಜರೂರಿದೆ. ಗ್ರಾಮೀಣ ಪ್ರದೇಶದಲ್ಲಿ ನೀವು ಹೀಗೇ ಯಾರೋ ಒಬ್ಬರನ್ನು ಪರಿಚಯ ಮಾಡಿಕೊಳ್ಳುವಾಗ 'ನೀವು ಯಾವ ಮತದವರು?' ಎಂದು ಕೇಳುತ್ತೀರಿ. 'ನಾವು ಹಾಲು ಮತದವರು' ಎಂಬ ಉತ್ತರ ಬರುತ್ತದೆನ್ನಿ. ನಿಮಗೆ ಹಾಗೆಂದರೇನೆಂದು ಅರ್ಥವಾಗದಿರಬಹುದು. ಮತ್ತೆ ಕೇಳುತ್ತೀರಿ - 'ಯಾವ ಜಾತಿಯವರು?' ಅವರು ಹೇಳುತ್ತಾರೆ - 'ಕುರುಬರು'.

ಇಲ್ಲಿ ಜಾತಿ ಮತ್ತು ಮತಗಳ ವಿವರಣೆ ಒಂದೇ ಆಗಿಲ್ಲ. 'ಹಾಲುಮತ' ಗೌರವದ, ಪ್ರತಿಷ್ಠೆಯ ಪದದಂತೆ ತೋರಿದರೆ 'ಕುರುಬರು' ಮುಜುಗರದ, ಕೀಳರಿಮೆಯ ಪದದಂತೆ ಕಾಣುತ್ತದೆ. ಶಂ.ಬಾ.ಜೋಷಿ ಅವರು 'ಹಾಲುಮತ ದರ್ಶನ' ಎಂಬ ಗ್ರಂಥವನ್ನೇ ಬರೆದರು. ಸಾಮಾನ್ಯ ಜನ ಸಮುದಾಯಗಳ ಚಿಂತನಾಧಾರೆಯನ್ನು ಶೋಧಿಸುವ ತುಂಬ ಮುಖ್ಯವಾದ ಪ್ರಯತ್ನ ಅದು. 'ಕುರುಬರು' – ಕುರಿಯನ್ನು ಸಾಕುವವರು ಎಂದು ಪಶುಪಾಲನಾ ವೃತ್ತಿಯನ್ನು, ವಲಸೆಗಾರ ಬದುಕನ್ನು ಸೂಚಿಸುತ್ತದೆ. ಇದು 'ಹಟ್ಟಿ ಸಂಸ್ಕೃತಿ.'

ಇಲ್ಲಿ ಮತ, ಜಾತಿ, ಸಂಸ್ಕೃತಿ ಎಂಬ ಮೂರು ಪರಿಕಲ್ಪನೆಗಳು ಎದುರಾಗುತ್ತಿವೆ. ತಳ ಜಾತಿಗಳ ಹೆಸರು ಮುಜುಗರವನ್ನುಂಟುಮಾಡುತ್ತಿದ್ದರೂ ಅವುಗಳ ಮೂಲಾರ್ಥಗಳು ಕೀಳಾರ್ಥದಲ್ಲೇನಿಲ್ಲ. 'ಕುರುಬರು' ಎಂಬ ಪದವನ್ನೇ ನೋಡಿದರೆ 'ಕುರು' ಅಂದರೆ 'ಕಾಡು'ಗಳಲ್ಲಿ ಇರುವವರು ಎಂದಾಗುತ್ತದೆ. 'ಕನ್ನಡ', ಪದ ನಿಷ್ಪತ್ತಿಯಲ್ಲಿ 'ಕುರು' ಪ್ರಸ್ತಾಪವಾಗುತ್ತದೆ. 'ಪೊಲಿ', 'ಮಾದ' ಪದಗಳಿಂದ 'ಪೊಲೆಯ', 'ಮಾದಿಗ' ಕೂಡ ಅರ್ಥಪೂರ್ಣವಾದ ವ್ಯುತ್ಪತ್ತಿ ಹೊಂದಿವೆ. ಇವೆಲ್ಲ ಜಾತಿಗಳಿಗೆ 'ಧರ್ಮ'ದ ಬೆಳವಣಿಗೆ ಇಲ್ಲದಿದ್ದರೂ 'ದರ್ಶನ'ಗಳ ಬೆಳವಣಿಗೆ ಇರಬಲ್ಲದು ಎಂಬುದನ್ನೇ ಶಂ.ಬಾ. ಅವರ 'ಹಾಲುಮತ ದರ್ಶನ' ಸೂಚಿಸುತ್ತದೆ. ನಮ್ಮ ದೇಶದ ಅತ್ಯಂತ ಪ್ರಾಚೀನ, ಮತಾತೀತ ದರ್ಶನಗಳು ಯಾವುದೇ ನಿರ್ದಿಷ್ಟ ಧರ್ಮಕ್ಕೆ ಸಂಬಂಧಿಸಿರಲಿಲ್ಲ ಮತ್ತು ಅವು ಇಂದು ನಾವು ಹೇಳುತ್ತಿರುವ ತಳ ಜಾತಿಗಳಿಂದಲೇ ಹುಟ್ಟಿದವು. ಅವು ಅವೈದಿಕವಾಗಿದ್ದವು ಮತ್ತು ನಾಸ್ತಿಕವಾಗಿದ್ದವು. ಸಾಂಖ್ಯ, ನ್ಯಾಯ, ವೈಶೇಷಿಕ, ಯೋಗ, ತಂತ್ರ, ಲೋಕಾಯತ ಇವು ಅಂಥ ನಿದರ್ಶನಗಳು. ತುಂಬ ಆಸಕ್ತಿದಾಯಕವಾದ ಈ ಅಂಶ ಚರ್ಚೆಯ ದೃಷ್ಟಿಯಿಂದ ಬಹಳಷ್ಟು ಪ್ರಮುಖವಾಗುತ್ತದೆ. ಮೇಲ್ಜಾತಿಗಳು ಮೇಲ್ವರ್ಗದ ಪರವಾಗಿದ್ದವು, ಅವು ತಮ್ಮ ತಮ್ಮ 'ಧರ್ಮ'ಗಳನ್ನು ಕಟ್ಟಿಕೊಂಡವು. 'ದರ್ಶನ'ಗಳಿಗಿರುವ ಮಹತ್ವ ಕಡಿಮೆಯಾಗಿ, 'ಧರ್ಮ'ಗಳಿಗೆ ಪ್ರಾಮುಖ್ಯತೆಯುಂಟಾಯಿತು. ಚಿಂತನಶೀಲತೆಯ ಸ್ಥಾನವನ್ನು ಮೌಢ್ಯ ಆವರಿಸಿತು. ಪುರೋಹಿತಶಾಹಿಯ ಅಟ್ಟಹಾಸ ಮೆರೆಯಿತು. ವ್ಯವಸ್ಥೆಯ ಹಿಡಿತ ಬಲವಾಯಿತು. ಇಂದಿನ ವೈಜ್ಞಾನಿಕ ಯುಗದಲ್ಲಿ 'ಧರ್ಮ'ಗಳ ಪ್ರಾಮುಖ್ಯತೆ ಕಡಿಮೆಯಾಗಿ 'ದರ್ಶನ'ಗಳ ಮಹತ್ವದ ಅರಿವಾಗಬೇಕಾಗಿದೆ. 'ವೈಜ್ಞಾನಿಕ ದರ್ಶನ'ಗಳ ಆವಿಷ್ಕಾರವಾಗಿರುವ ಹಿನ್ನೆಲೆಯಲ್ಲಿ, ಹಿಂದಲ ದರ್ಶನಗಳನ್ನು ಪುನರ್ ಮೌಲ್ಯೀಕರಣಕ್ಕೆ ಒಳಪಡಿಸುವ ಅವಕಾಶವೂ ಇದೆ. ಅವುಗಳಲ್ಲಿ 'ಸತ್ತದ್ದೆಷ್ಟು', 'ಬದುಕಿದ್ದೆಷ್ಟು' ಎಂದು ಶೋಧಿಸುವ ಪ್ರಯತ್ನವಾಗಬೇಕಿದೆ. 'ಬದುಕಿದ್ದರಿಂದ' ನಮಗಾಗುವ ಪ್ರಯೋಜನದ ಕುರಿತೂ ಆಲೋಚಿಸಬೇಕಿದೆ.

ನಮ್ಮಲ್ಲಿ ಜಾತಿಗೂ ಮತ, ಪಂಥ, ಧರ್ಮಗಳಿಗೂ ಒಳನಂಟಿದೆ. 'ದರ್ಶನ'ಗಳಿಗೆ ತುಂಬ ನಂತರವಷ್ಟೇ ಮೇಲ್ಜಾತಿಗಳ ಸಂಬಂಧವುಂಟಾಯಿತು. ಕ್ರಿಶ್ಚಿಯನ್, ಇಸ್ಲಾಂಗಳಿಗೆ 'ಮತ', 'ಧರ್ಮ' ಎಂಬ ಎರಡೂ ಪದಗಳನ್ನು ಬಳಸುತ್ತಾರೆ. ಸೆಕ್ಟ್, ಸೆಕ್ಟೇರಿಯನ್ (ಮತ, ಮತೀಯ) ಪದಗಳನ್ನು ಪ್ರಗತಿವಿರೋಧಿಯಾದ ಮನೋಭಾವದವರಿಗೆ ಬಳಸಲಾಗುತ್ತದೆ. ಆದರೆ 'ಧರ್ಮ', 'ಧಾರ್ಮಿಕ' ಎಂಬ ಪದಗಳನ್ನು ಪ್ರತಿಗಾಮಿತ್ವಕ್ಕೆ ಪೂರಕವೆಂದೇನೂ ಹೇಳದೇ, ಗೌರವದಿಂದ ಸ್ಮರಿಸಲಾಗುತ್ತದೆ. ವೈಜ್ಞಾನಿಕ ಮನೋಭಾವಕ್ಕೆ ವಿರುದ್ಧವಾಗಿ 'ಧಾರ್ಮಿಕ ಮನೋಭಾವ' ವಿರುವುದರಿಂದ ಪ್ರಗತಿಪರರು ಅದನ್ನು ಚಿಂತನೆಗಳ ಸಂದರ್ಭದಲ್ಲಿ ಬಳಸುವುದರ ಕುರಿತು ಗಂಭೀರವಾಗಿ ಪರ್ಯಾಲೋಚಿಸಬೇಕಾಗಿದೆ. 'ದರ್ಶನ', 'ದಾರ್ಶನಿಕ' ಎಂಬ ಪದಗಳ ಬಳಕೆ ಹೆಚ್ಚು ಸೂಕ್ತ. ಮತ, ಜಾತಿ, ಪಂಥ, ಧರ್ಮ ಇವೆಲ್ಲವೂ ಹೆಚ್ಚೂ ಕಡಿಮೆ ಒಂದೇ ಕಕ್ಷೆಗೆ ಸೇರುತ್ತವೆ. ಕೆಲವಕ್ಕೆ ಲಿಖಿತ ಪರಂಪರೆ ಇಲ್ಲದಿರಬಹುದು, ಕೆಲವಕ್ಕೆ ಇರಬಹುದು. ಆದರೆ ನಂಬಿಕೆ, ಆಚರಣೆ, ಶ್ರದ್ಧೆ ಪರಂಪರೆಯ ಲೆಕ್ಕದಿಂದ ನೋಡಿದರೆ ಅವುಗಳ ನಡುವೆ

**ಎಸ್.ಎಸ್.ಹಿರೇಮಠ**

ನಮ್ಮಲ್ಲಿ ಜಾತಿಗೂ ಮತ, ಪಂಥ, ಧರ್ಮಗಳಿಗೂ ಒಳನಂಟಿದೆ. 'ದರ್ಶನ'ಗಳಿಗೆ ತುಂಬ ನಂತರವಷ್ಟೇ ಮೇಲ್ಜಾತಿಗಳ ಸಂಬಂಧವುಂಟಾಯಿತು. ಕ್ರಿಶ್ಚಿಯನ್, ಇಸ್ಲಾಂಗಳಿಗೆ 'ಮತ', 'ಧರ್ಮ' ಎಂಬ ಎರಡೂ ಪದಗಳನ್ನು ಬಳಸುತ್ತಾರೆ. ಸೆಕ್ಟ್, ಸೆಕ್ಟೇರಿಯನ್ (ಮತ, ಮತೀಯ) ಪದಗಳನ್ನು ಪ್ರಗತಿವಿರೋಧಿಯಾದ ಮನೋಭಾವದವರಿಗೆ ಬಳಸಲಾಗುತ್ತದೆ. ಆದರೆ 'ಧರ್ಮ', 'ಧಾರ್ಮಿಕ' ಎಂಬ ಪದಗಳನ್ನು ಪ್ರತಿಗಾಮಿತ್ವಕ್ಕೆ ಪೂರಕವೆಂದೇನೂ ಹೇಳದೇ, ಗೌರವದಿಂದ ಸ್ಮರಿಸಲಾಗುತ್ತದೆ. ವೈಜ್ಞಾನಿಕ ಮನೋಭಾವಕ್ಕೆ ವಿರುದ್ಧವಾಗಿ 'ಧಾರ್ಮಿಕ ಮನೋಭಾವ' ವಿರುವುದರಿಂದ ಪ್ರಗತಿಪರರು ಅದನ್ನು ಚಿಂತನೆಗಳ ಸಂದರ್ಭದಲ್ಲಿ ಬಳಸುವುದರ ಕುರಿತು ಗಂಭೀರವಾಗಿ ಪರ್ಯಾಲೋಚಿಸಬೇಕಾಗಿದೆ. 'ದರ್ಶನ', 'ದಾರ್ಶನಿಕ' ಎಂಬ ಪದಗಳ ಬಳಕೆ ಹೆಚ್ಚು ಸೂಕ್ತ. ಮತ, ಜಾತಿ, ಪಂಥ, ಧರ್ಮ ಇವೆಲ್ಲವೂ ಹೆಚ್ಚೂ ಕಡಿಮೆ ಒಂದೇ ಕಕ್ಷೆಗೆ ಸೇರುತ್ತವೆ.

ಅಂತರ ಕಡಿಮೆ. 'ಧರ್ಮ' ಮೇಲ್ಜಾತಿಗಳಿಗೆ ಮಾತ್ರ ಅನ್ವಯಿಸಿ ಬಳಕೆಯಾಗುತ್ತದೆ ಯಲ್ಲವೇ ? ತಳ ಜಾತಿಗಳಿಗೆ ಅದರ ಸಂಬಂಧವೇ ಇಲ್ಲ ಅಂದರೆ 'ಹೊಲೆಯರ ಧರ್ಮ', 'ಮಾದಿಗರ ಧರ್ಮ', 'ಕುರುಬರ ಧರ್ಮ' ಮುಂತಾದ ಪರಿಕಲ್ಪನೆಗಳಿಲ್ಲ. ಈಚೆಗೆ ಕೆಲವು ತಳ ಜಾತಿಗಳು ಜಾತಿ ಸಂಘಟನೆಗಳನ್ನು ಕಟ್ಟಿಕೊಳ್ಳುತ್ತಿರುವ ಹಿನ್ನೆಲೆಯಲ್ಲಿ ತಮ್ಮ ತಮ್ಮ 'ಧರ್ಮ'ಗಳನ್ನೂ 'ಧರ್ಮಪೀಠ'ಗಳನ್ನು ಸ್ಥಾಪಿಸಿಕೊಳ್ಳುತ್ತಿರುವ ಸಂಗತಿ ಕುತೂಹಲಕಾರಿಯಾಗಿದೆ. ಉದಾಹರಣೆಗೆ ಉಪ್ಪಾರರ 'ಭಗೀರಥ ಉಪ್ಪಾರ ಧಾರ್ಮಿಕ ಟ್ರಸ್ಟ್', ಕುರುಬರ 'ಕನಕ ಧರ್ಮ ಪೀಠ' ಮುಂತಾದವು.

'ಅನುಭಾವ', 'ಅನುಭೂತಿ', 'ಅವಧೂತಿಕೆ' ಇವೂ ಕೂಡ ಇದೇ ವಲಯದ ಪರಿಭಾಷೆ. ಇವೆಲ್ಲವನ್ನೂ ಸಾರಾಸಗಟಾಗಿ ವಿಮರ್ಶೆಗೆ ಒಳಪಡಿಸುವ, ವೈಜ್ಞಾನಿಕ ಚಿಂತನೆಯ ಒರೆಗಲ್ಲಿಗೆ ತಿಕ್ಕಿ ನೋಡುವ ಅಗತ್ಯವಿದೆ.

'ದರ್ಶನ'ಗಳಲ್ಲೂ ಕೂಡ ಪ್ರತಿಗಾಮಿ ಮತ್ತು ಪ್ರಗತಿಪರ ಧೋರಣೆಗಳಿವೆ. ಮೇಲೆ ಹೇಳಿರುವಂತೆ 'ಸತ್ತ ಮತ್ತು ಜೀವಂತವಿರುವ' ಆಶಯಗಳಿವೆ. ಇತ್ಯಾತ್ಮಕಾಂಶಗಳನ್ನು ಸ್ವೀಕರಿಸಿ, ನೇತ್ಯಾತ್ಮಕವಾದುವನ್ನು ಕೈಬಿಡುವ ಪ್ರಕ್ರಿಯೆಗೆ ಒಳಪಡಬೇಕಿದೆ. 'ಧರ್ಮ ನಿರಪೇಕ್ಷತೆ' (ಸೆಕ್ಯೂಲಾರಿಸಂ) ನಮ್ಮ ದೇಶದ ಮುಂದಿರುವ ಬಹು ದೊಡ್ಡ ಆದರ್ಶ. ಇದೇ ರೀತಿ 'ಜಾತ್ಯಾತೀತತೆ' ಕೂಡ. ಇವುಗಳ ಜತೆ 'ಮತಾತೀತ', 'ಪಂಥಾತೀತ' ಎಂಬ ಸಂಗತಿ ಗಳನ್ನೂ ಸೇರಿಸಬೇಕು. 'ಮತಾಂಧತೆ', 'ಪಂಥಾಭಿಮಾನ'ಗಳು ಪ್ರತಿಗಾಮಿತ್ವದ ಪ್ರಪಂಚಕ್ಕೆ ಸೇರುತ್ತವೆ. 'ಕೋಮು ಸಮಸ್ಯೆ'ಯಂಥ ಗಂಭೀರ ಸವಾಲನ್ನು ಎದುರಿಸುವಾಗ ಈ ಮೇಲಿನ ಎಲ್ಲ ಸೂಕ್ಷ್ಮಗಳನ್ನು ಗಮನದಲ್ಲಿಡಬೇಕು. ಅಂತಿಮವಾಗಿ ನಮ್ಮ ಎದುರು ಉಳಿಯ ಬೇಕಾದ ದ್ವಂದ್ವಗಳು ಇವು – ಪ್ರತಿಗಾಮಿತ್ವ v/s ಪ್ರಗತಿಪರತ್ವ. ಈ ವೈರುಧ್ಯಗಳ ಸಂಘರ್ಷದಲ್ಲಿ ಒಳ ಸೆಳೆತಗಳಿರಬಾರದು. ಪ್ರಗತಿಪರರಲ್ಲಿ ಆಂತರಿಕ ಎಳೆತಗಳು ಪರಸ್ಪರ ಮುಖಾಮುಖಿಯಾಗುವಂತಾದರೆ ಅದರ ಒಟ್ಟು ಶಕ್ತಿ ದುರ್ಬಲಗೊಳ್ಳುತ್ತದೆ.

ಬಹುಮುಖಿ ಸಂಸ್ಕೃತಿ ಪರಂಪರೆಗಳ ವಾಸ್ತವವನ್ನು ನಿರ್ಲಕ್ಷಿಸಬೇಕೆಂದು ನನ್ನ ವಾದವಲ್ಲ. ಮತ, ಪಂಥ, ಧರ್ಮ, ಜಾತಿಗಳೆಲ್ಲವೂ 'ಸಂಸ್ಕೃತಿ'ಗಳಿಂದ ಭಿನ್ನವಾದವು ಎಂಬ ಗಟ್ಟಿ ನೆಲೆಗೆ ಅಂಟಿಕೊಳ್ಳುವ ಅಗತ್ಯವನ್ನೇ ಇಲ್ಲಿ ಒತ್ತಿ ಹೇಳುತ್ತಿದ್ದೇನೆ. ವೈಜ್ಞಾನಿಕ ದಾರ್ಶನಿಕತೆ ಮತ್ತು ಸಮಾಜವಾದಿ ಆಶಯದ 'ಜನಪರ ಸಂಸ್ಕೃತಿ'ಗಳ ಗಾಢವಾದ ನಂಟಿನ ಅನಿವಾರ್ಯತೆ ಇದು.

ಮತ ಪಂಥ ಧರ್ಮ ಜಾತಿಗಳೆಲ್ಲ ಫ್ಯೂಡಲ್ ಕಾಲದಿಂದ ನಮಗೆ ಬಂದಿರುವ ಬಳುವಳಿ. ಅವುಗಳಲ್ಲಿ ಜನಪರ ಸಾಂಸ್ಕೃತಿಕಾಂಶಗಳು ಮತ್ತು ವೈಜ್ಞಾನಿಕ ದಾರ್ಶನಿಕ ಅಂಶಗಳು ಏನಿವೆಯೋ ಅವಕ್ಕೆ ಮಾತ್ರ ನಾವು ವಾರಸುದಾರರಾಗಬೇಕು. ನಮ್ಮ ಸುಸಂಘಟಿತ ಹೋರಾಟದ ಬದುಕಿನಲ್ಲಿ ಅದನ್ನು ಅಳವಡಿಸಿಕೊಳ್ಳಬೇಕು. ಇದು ತುಂಬ ಕಷ್ಟದ ಕೆಲಸ. ಆದರೆ ಅದುವೇ ನಮ್ಮ ಬಾಳಿನ ಉಸಿರಾಗಬೇಕು. 'ಅನ್ಯಥಾ ಶರಣಂ ನಾಸ್ತಿ'.

ನಮ್ಮ ಜನಸಮುದಾಯಗಳ ಮಧ್ಯೆ ಈ ಸೂಕ್ಷ್ಮ ವಿಚಾರಗಳನ್ನು ಕೊಂಡೊಯ್ಯುವುದು ಹೇಗೆ? ಮತ, ಪಂಥ, ಜಾತಿ, ಧರ್ಮಗಳಿಂದ ಅವರವರ ಸಂಸ್ಕೃತಿ ಪರಂಪರೆಯನ್ನು ಪ್ರತ್ಯೇಕಿಸಿ ಗುರುತಿಸುವುದು ಹೇಗೆ? ಉದಾರೀಕರಣ, ಖಾಸಗೀಕರಣ ಮತ್ತು ಜಾಗತೀಕರಣಗಳಂಥ ಆಧುನಿಕ ಸವಾಲುಗಳೆದುರು ಇವೆಲ್ಲವೂ ಏನಾಗುತ್ತಿವೆ?

**ಎಸ್. ಎಸ್. ಹಿರೇಮಠ**
ಕನ್ನಡ ಪ್ರಾಧ್ಯಾಪಕ, ಎ.ಡಿ.ಬಿ. ಪ್ರಥಮ ದರ್ಜೆ ಕಾಲೇಜು, ಹರಪನಹಳ್ಳಿ - ೫೮೩೧೩೧.

---

*೬೦ನೇ ಪುಟದಿಂದ*

ದಾಖಲಿಸಿರುವ ಒಂದು ಅಪರೂಪದ ದಿಟ್ಟ ಕೃತಿ. ಪ್ರಾಮಾಣಿಕ ಸತ್ಯ ಮತ್ತು ಅದನ್ನು ದಿಟ್ಟವಾಗಿ ಹೇಳುವ ಎದೆಗಾರಿಕೆಗಳಿವೆಯಲ್ಲ, ಅವೇ ಕೃತಿಯ ಪ್ಲಸ್ ಪಾಯಿಂಟ್‌ಗಳು. ಬೆಚ್ಚಿ ಬೀಳಿಸುವ, ಎದೆ ನಡುಗಿಸುವ, ಆತ್ಮನಿವೇದನಾ ರೂಪದ ಅಥವಾ ಆತ್ಮನಿಂದನಾರೂಪದ ಇಂಥ ಸತ್ಯಗಳನ್ನು ಹೇಳಲು ಎಷ್ಟು ಜನ ಲೇಖಕರಿಗೆ ಸಾಧ್ಯವಾಗಿದೆ ಎಂಬ ಪ್ರಶ್ನೆಯನ್ನು ಮುಂದಿಟ್ಟುಕೊಂಡು ನೋಡಿದಾಗ ಕೃತಿಯ ಹೆಚ್ಚುಗಾರಿಕೆಯು ನಮಗೆ ಮತ್ತಷ್ಟು ಸ್ಪಷ್ಟವಾಗಿ ಗೋಚರಿಸುತ್ತದೆ.

ಮತೀಯ ಮೂಲಭೂತವಾದಿ ವ್ಯವಸ್ಥೆಯಲ್ಲಿನ ಅಲ್ಪಸಂಖ್ಯಾತ ಮತ್ತು ನಿರಭಯ ಹಸ್ತರಾದ ಜನ ನಿತ್ಯ ಕೋಮುಗಲಭೆಯ ನೆಪದಲ್ಲಿ ಅನುಭವಿಸುವ ರೌರವ ನರಕವನ್ನು ಕಣ್ಣಾರೆ ಕಂಡೂ ಏನೂ ಮಾಡಲಾಗದ ನಿಸ್ಸಹಾಯಕತನ, ಸುಮ್ಮನಿರಲಾಗದ ಒಳಗಿನ ತಹತಹ ಹಾಗೂ ಸಾಹಿತ್ಯದ ಪ್ರಥಮ ಮತ್ತು ಮೂಲೋದ್ದೇಶವಾಗಿರುವ – ''ಜನವಿರೋಧಿ ವ್ಯವಸ್ಥೆಯ ಕಪಿಮುಷ್ಟಿ ಯಿಂದ ಹೊರಬರಲು ಅನುಕೂಲವಾಗುವಂಥ ಪೂರಕ ವೈಚಾರಿಕ ಪ್ರಜ್ಞೆಯನ್ನು ಜನರಲ್ಲಿ ಬೆಳೆಸುವ'' – ಸದಾಶಯಗಳು ತಸ್ಲೀಮಾರಿಂದ ಇಂಥ ಒಂದು ಕೃತಿಯನ್ನು ಬರೆಸಿವೆ. ಲೇಖಕನು ''ಜನಸಮುದಾಯದ ಬಾಯಿ'' ಎಂಬುದಕ್ಕೆ ಸಾಕ್ಷಿಯಾಗಿ ತಸ್ಲೀಮಾರಂಥ ದಿಟ್ಟ ಲೇಖಕರನ್ನು ತೋರಿಸಬಹುದು.

ಸುಧಾಮಯ ದತ್ತನ ಶಿಶ್ನವನ್ನೇ ಕತ್ತರಿಸಿಹಾಕುವ ಮಾಯಾಳನ್ನು ಎತ್ತಿಕೊಂಡು ಹೋಗಿ ಸಾಮೂಹಿಕ ಅತ್ಯಾಚಾರಗೈಯುವ ಪೈಶಾಚಿಕ ಮನಸುಗಳ ಬಗ್ಗೆ ಕಾದಂಬರಿಯಲ್ಲೆಲ್ಲೂ ತಮ್ಮ ಷರಾ ಬರೆಯುವುದಿಲ್ಲ- ನಸ್ರೀನ್. ಆಕೆ ಸತ್ಯವನ್ನು ಯಥಾರ್ಥವಾಗಿ ಹೇಳುತ್ತಾರಷ್ಟೆ. ಅಷ್ಟೆ ಎಂದರೆ ಅದು ಮುಸ್ಲಿಂ ಮೂಲಭೂತವಾದಿಗಳ ಮೇಲೆ ಆಕೆ ಮಾಡಿದ ಭಾರೀ ಪ್ರಹಾರ. ಸರ್ಕಾರ ಹೀಗಾಗಿ ಅವರ ಕೃತಿಗಳ ಮೇಲೆ ನಿಷೇಧ ಹೇರಿತ್ತು ಮತ್ತು ಈಗಲೂ ರಾಜ ದ್ರೋಹದ ಹೆಸರಿನಲ್ಲಿ ಐದು ಮೊಕದ್ದಮೆಗಳನ್ನು ಅವರ ವಿರುದ್ಧ ದಾಖಲಿಸಿಕೊಳ್ಳಲಾಗಿದೆ. ಮಾತ್ರವಲ್ಲದೆ ಧಾರ್ಮಿಕ ಸಂಘಟನೆಗಳು ಇವರ ತಲೆ ಒಪ್ಪಿಸಿದವರಿಗೆ ಭಾರೀ ಬಹುಮಾನ ವನ್ನು ಘೋಷಿಸಿವೆ. ಇಷ್ಟೆಲ್ಲ ಪ್ರತಿಕೂಲ ಪರಿಣಾಮಗಳನ್ನು ಊಹಿಸಿದ್ದಿರಬಹುದಾದ ಲೇಖಕಿ ಆದಾಗ್ಯೂ ತಮ್ಮ ಲೇಖನಿಯ ಮೊನಚನ್ನು ಕಳೆದುಕೊಂಡಿಲ್ಲದಿರುವುದು ಮತ್ತು ತಾವು ಹುಟ್ಟಿ ಬೆಳೆದ ಧರ್ಮದ ಜನರ ತಪ್ಪುಗಳನ್ನು ಥರ್ಡ್ ಅಂಪೈರ್‌ರಂತೆ ನಿರ್ಮೋಹದಿಂದ ಬಯಲಿಗಿಟ್ಟಿರುವುದು ಸ್ತುತ್ಯರ್ಹ ಸಂಗತಿಗಳಾಗಿವೆ.

ಇನ್ನು ಕಾದಂಬರಿಯಲ್ಲಿ ಬರುವ ೧೯೯೦ರ ಅಕ್ಟೋಬರ್‌ನ ಹಿಂಸಾಚಾರದ ವಿವರಗಳು (ಪು. ೫-೭), ೧೯೫೨ರ ಹಿಂಸಾಚಾರ ಮತ್ತು ಬಾಬ್ರಿ ಮಸೀದಿಯಲ್ಲಿ ೧೮೦೦ ಜನ ಬಲಿಯಾಗಿರುವ ಅಂಕಿ-ಅಂಶಗಳೂ (ಪು. ೧೯೩), ೧೯೭೩ರಿಂದ ಆಗಿರುವ ಎಲ್ಲ ಹಿಂಸಾಚಾರದ ವಿವರಗಳು (ಪು : ೬೭-೭೦), ಶತ್ರು ಸಂಪತ್ತಿ ಕಾಯ್ದೆಯ ವಿವರಗಳು (ಪು: ೧೫೪-೧೫೮) ಹಾಗೂ ಪಾಕಿಸ್ತಾನ ಪ್ರತಿರಕ್ಷಣಾ ಕಾಯ್ದೆಯ ಸುದೀರ್ಘ ಮತ್ತು ಅನಗತ್ಯ ವಿವರ (ಪು. ೩೫)ಗಳಿಂದಾಗಿ ಕಾದಂಬರಿ ಅಲ್ಲಲ್ಲಿ ಬೋರ್ ಹೊಡಿಸುತ್ತದೆ. ನಸ್ರೀನ್‌ರು ಈ ಎಲ್ಲ ಸತ್ಯ ಘಟನೆಗಳ ವಿವರಗಳನ್ನು ಕಾದಂಬರಿಯ ಪ್ರಮುಖ ಭೂಮಿಕೆಯೊಂದಿಗೆ ಕಲಾತ್ಮಕವಾಗಿ, ಅಂದರೆ ನೇರವಾಗಿ ಹೇಳಿದ್ದರಾದರೆ, ಬೋರ್‌ಹೊಡೆಯದಂತೆ ಹದವಾಗಿ ಬೆರೆಸಿಕೊಂಡು ಹೋಗಿದ್ದರೆ ಕೃತಿ ಇನ್ನಷ್ಟು easily readable ಆಗುತ್ತಿತ್ತು.

ಅನುವಾದದ ಬಗ್ಗೆ ಮಾತಾಡುವುದಾದರೆ ೯೦ರ ದಶಕದಲ್ಲಿ ಜಾಗತಿಕ ಮಟ್ಟದಲ್ಲಿ ವಿವಾದದ ಕೇಂದ್ರವಾಗಿದ್ದ ಈ ಕಾದಂಬರಿಯನ್ನು ನಮ್ಮದೇ ಭಾಷೆಯಲ್ಲಿ ಓದಿಕೊಳ್ಳುವ ಮತ್ತು ಅದರ ಅಂತಃಸ್ಸತ್ವವನ್ನು ಒರೆಗೆ ಹಚ್ಚಿ ವಿಮರ್ಶಿಸುವ, ಮುಕ್ತವಾಗಿ ಚರ್ಚಿಸುವ ಅವಕಾಶವಾಗುವಂತೆ ಅನುವಾದಿಸಿ ಪ್ರಕಟಿಸಿರುವ ರಾಮಣ್ಣ ಆರ್ಜೆಜ್ಜೆ ಅಭಿನಂದನೀಯರು. ಕೆಲವೆಡೆಯಂತೂ ಅನುವಾದವು ಅನುವಾದವೇ ಅಲ್ಲವೇನೋ ಎಂಬಷ್ಟು ಮತ್ತು ಈ ಭಾಷೆಯ ಲಯಕ್ಕೆ ಹೊಂದಿಕೊಂಡು ಮೂಡಿಬಂದಿದೆ. ''ಸುರಂಜನ್ ಅವನ ಕಡೆ ನೋಡಿ ಪಕ್ಕದ ಬೀದಿಯಿಂದ ಹೋದ. ಭಯದಿಂದಲ್ಲ; ನಾಚಿಕೆಯಿಂದ !'' ಎಂಬಂಥ ಹಾಗೂ ಹರಿಪಾದರಿಗೆ ಸುಧಾಮರು ಹೇಳುವ ''ದೇಶ ಬಿಟ್ಟು ಹೋಗುವ ಮನುಷ್ಯರೂ ಮನುಷ್ಯರೇ ?'' ಎಂಬಂಥ ಸಾಲುಗಳು ಥಟ್ಟನೆ ಮನಸಿನಾಳಕ್ಕೆ ಇಳಿದು ಹೊಸ ಬೆಳಕನ್ನು ಹೊಮ್ಮಿಸುತ್ತವೆ. ಮೂಲಾನುಸಾರಿಯಾಗಿ ಮೂಡಿಬಂದಿರುವ ಅನುವಾದ ತನ್ನ ಸರಳ ಭಾಷೆಯಿಂದಾಗಿ ಎಲ್ಲ ವರ್ಗದ ಓದುಗರಿಗೂ ಸುಲಭಗ್ರಾಹ್ಯವಾಗಿದೆ.

ಆದರೆ, ''ಮೂತ್ರದಿಂದ ತನ್ನ ದೇಹದ ಮೇಲೆ ಬಿದ್ದಂತೆ ಅನಿಸತೊಡಗಿತು'' (ಪು. ೧೧೭), 'ದುರ್ಮಾರ್ಗರಿರುತ್ತಾರೆ' (ಪು. ೬೫), ''ಜನರು ಇಸ್ಲಾಂ ಧರ್ಮವನ್ನು ರಾಷ್ಟ್ರಧರ್ಮವಾಗಿ ಪ್ರಕಟಿಸಬೇಕೆಂದು ಅತ್ತಿತ್ತೆ, ಇರ್‌ಶಾದ್ ಸರ್ಕಾರ ಹಾಗೆ ಮಾಡಲು ?'' (ಪು. ೮೮) ಇಂಥ ಸಾಲುಗಳು ಓದುಗನನ್ನು ಗೊಂದಲಕ್ಕೀಡುಮಾಡುವುದಲ್ಲದೆ ಎಷ್ಟು ಸಲ ಓದಿಕೊಂಡರೂ ಯಾವುದೇ ಖಚಿತ ಅರ್ಥ ನೀಡದೆ ಬೇಸರವುಂಟು ಮಾಡುತ್ತದೆ.

ಅದೇನೇ ಇರಲಿ. ಅನುವಾದವು ಸಾರ್ಥಕಗೊಳಿಸುವ ಉದ್ದೇಶಗಳಾದ ಭಾಷೆ-ಭಾಷೆಗಳ ನಡುವಿನ ಸಂಪರ್ಕ ಮತ್ತು ಆಯಾ ಭಾಷೆಗಳ ಲೇಖಕರನ್ನು ಪರಸ್ಪರರಿಗೆ ಮತ್ತು ಅಲ್ಲಲ್ಲಿಯ ಓದುಗರಿಗೆ ಮೂಲದ ಸತ್ವದೊಂದಿಗೆ ಪರಿಚಯಿಸುವ ಕಾರ್ಯಗಳನ್ನು ಅನುವಾದಕರು ಕಾಲಾನುಕ್ರಮದಿಂದ ಮಾಡುತ್ತಾ ಬಂದಿದ್ದಾರೆ. ಹಾಗಲ್ಲದೆ ಹೋಗಿದ್ದರೆ ನಮಗೆ ಶೇಕ್ಸ್‌ಪಿಯರ್, ಸಾರ್ತ್ರೆ, ಗಾಲಿಬ್, ಉಮರ್ ಖಯಾಮ್, ಅನ್ನಾ ಅಕ್ಮತೋವಾ, ಟಾಲ್‌ಸ್ಟಾಯ್, ದಾಸ್ತೋವ್‌ಸ್ಕಿ, ತಸ್ಲೀಮಾ ನಸ್ರೀನ್ ಪರಿಚಿತರಾಗುತ್ತಿದ್ದರಾದರೂ ಎಲ್ಲಿಂದ ?

**ಚಿದಾನಂದ ಸಾಲಿ**
ಸಿರಿವಾರ - ೫೮೪೧೨೯, ರಾಯಚೂರು ಜಿಲ್ಲೆ

HOSATHU Kannada Monthly / October 2004 Rs. 10 RNI Regn. No. KARKAN/1999/614 REGD. CPMG / KA / BGE – 7 / 2003-05
Licenced to post without prepayment. Licence No. WPP-14 Posted at Bangalore PSO on the 28th/3rd of every month



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Chief Editor : Dr. G. Ramakrishna